# ಮುನ್ನುಡಿ

ಕನ್ನಡ ಕಾದಂಬರಿ ಪ್ರಪಂಚಕ್ಕೆ ಅಂಜುತ್ತ ಅಳುಕುತ್ತಲೇ ಕಾಲಿಟ್ಟ ನನ್ನ ‘ಧೂಮಕೇತು’ ಕಾದಂಬರಿಯನ್ನು ಪ್ರಕಟಿಸಿ ಮೆಸರ್ಸ್ ಸ್ಟ್ಯಾಂಡರ್ಡ್ ಬುಕ್ ಡಿಪೋದವರು ಉಪಕಾರ ಮಾಡಿದರು ಅದರಿಂದ ಉತ್ತೇಜಿತಳಾದ ನಾನು ‘ಕನ್ಯಾಸೆರೆ’ಯನ್ನು ಬರೆದು ಓದುಗರಿಗೆ ಒಪ್ಪಿಸುತ್ತಿದ್ದೇನೆ ಇದನ್ನು ಪ್ರಕಟಿಸಿ ಉಪಕಾರ ಮಾಡಿರುವ ಮೆಸರ್ಸ್ ಅಶೋಕಸಾಹಿತ್ಯದವರಿಗೆ ನನ್ನ ಕೃತಜ್ಞತೆ ಅರ್ಪಿಸುತ್ತೇನೆ

ನಾನು ಕಂಡ ಮಲಮಕ್ಕಳ ಕಷ್ಟದ ಜೀವನವನ್ನೇ ‘ಕನ್ಯಾಸೆರೆ’ಯಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದೇನೆ ಇದರಲ್ಲಿ ಇರಬಹುದಾದ ಲೋಪದೋಷಗಳನ್ನು ಗಮನಿಸದೆ, ಗುಣವನ್ನೇ ಪರಿಗ್ರಹಿಸಿ ಕನ್ನಡ ಬಂಧು ಭಗಿನಿಯರು ನನ್ನನ್ನು ಆಶೀರ್ವದಿಸಬೇಕಾಗಿ ಬೇಡುತ್ತೇನೆ

೧೭-೧೨-೫೫ ಉಷಾದೇವಿ

# ಕನ್ಯಾಸೆರೆ

## ೧

"ಶುಭ ಹೇಳೋದಿಕ್ಕೆ ನೀನೊಬ್ಬ ಕಡಿಮೆ ಆಗಿದ್ಯೇನಪ್ಪಾ"

ತುಸು ಬೇಸರದಿಂದ ಪಾತಕ್ಕ ಪ್ರತಿಮಾತನ್ನು ಎಳೆದೆಳೆದು ನುಡಿದರು. ಅವರ ಮುಖದ ಮೇಲೆ ಮೂಡಿದ ನೋವಿನಗೆರೆಯನ್ನು ಗ್ರಹಿಸಿದ ಬುಡುಬುಡಿಕೆಯವನು ತಾನೇನಾದರೂ ಗಿಟ್ಟಿಸಿಕೊಳ್ಳಲು ಇದೇ ಸಮಯವೆಂದು ಮುಂದುವರೆಸಿದ

"ಶನಿ ಕಾಡುತ್ತಿತ್ತು  ಬಿಡುಗಡೆ ಕಾಲ ಬಂದೈತೆ"

"ಅಕ್ಕಿ ಹಾಕ್ತಾರೆ  ಹಾಕಿಸ್ಕೊಂಡು ಸುಮ್ಮನೆ ಮುಂದೆ ಹೋಗಪ್ಪಾ" ಪಾತಕ್ಕ ಸಿಡಿಗುಟ್ಟುತ್ತಾ "ಲೇ  ಸುಮೀ  ಏನುಮಾಡ್ತಾ ಇದೀಯೇ?. . ಒಂದು ಹಿಡಿ ಅಕ್ಕಿ ಹಾಕಿ ಇವನನ್ನು ಮೊದಲು ಕಳಿಸು" ಎಂದರು

ಸುಮಿತ್ರಾ ಒಂದು ಹಿಡಿ ಅಕ್ಕಿ ಹಾಕಿ ಬುಡುಬುಡಿಕೆಯವನನ್ನು ಹೊರಹಾಕಿದಳು  ತನಗಷ್ಟೇ ಪ್ರಾಪ್ತಿ ಎಂದು ಜೋಲುಮುಖ ಹಾಕಿಕೊಂಡು ಹೊರಟ  ಅವನನ್ನು ಕಂಡು ಸುಮಿತ್ರಾ ನಕ್ಕು

"ಅವನ ಮೇಲೆ ಯಾಕಜ್ಜೀ ರೇಗಿದೆ?" ಎಂದು ಕೇಳಿದಳು

"ಇನ್ನೇನು ಹೇಳು? ಮನೇಲಿ ಯಾವ ಹೊತ್ತಿಗೆ ಏನೋ ಅಂತ ಜಪ ಮಾಡ್ತಾ ನಾವಿದೀವಿ–ಇವನ ಬೊಗಳೆಶಾಸ್ತ್ರ ಯಾರಿಗೆ ಬೇಕು?"

ಒಳಗಿನಿಂದ "ಸುಮೀ.  " ಎಂಬ ದೀನಸ್ವರ ಕೇಳಿಬಂತು.

"ಹೋಗು ಅಮ್ಮನ ಹತ್ತಿರ ಕೂತ್ಕೊಂಡಿರು ಊಟ ಆಗೋವರೆಗೂ ನಾನು ಮುಟ್ಟೋಹಾಗಿಲ್ಲ"

ಸುಮಿತ್ರಾ ಒಳಗೆ ಓಡಿ ತಾಯಿಯ ಬಳಿ ಕುಳಿತಳು ಮೀನಾಕ್ಷಮ್ಮ ಮಗಳ ಮುಂದಲೆ ಸವರುತ್ತಾ,

"ಸುಮೀ ನನ್ನ ಕಾಲ ಮುಗಿಯಿತು ಇನ್ನು ಮೇಲೆ ನೀನು ಅಣ್ಣಾ, ಅಜ್ಜಿ ಹೇಳಿದ ಹಾಗೆ ಕೇಳಿಕೊಂಡು ಜಾಣೆ ಅನ್ನಿಸಿಕೊಳ್ಳಬೇಕಪ್ಪಾ"

"ಹೀಗೆಲ್ಲಾ ಆಡಬೇಡಮ್ಮಾ ನಂಗೆ ಅಳು ಬರುತ್ತೆ"

"ಹುಚ್ಚೀ ಕಣ್ಣೊರಸಿಕೋ"

"ನೀನು ಎಲ್ಲಿಗೆ ಹೋಗುತ್ತೀ?"

"ಎಲ್ಲೂ ಹೋಗೋಲ್ಲಾ ಚಿನ್ನಾ"

"ಈವಾಗ ಹೇಳಿದ ನೀನು ನನ್ನ ಬಿಟ್ಟು ಹೋಗಬೇಡಾಮ್ಮ ನಿಂಜೊತೆ ನಾನೂ ಬರ್ತೀನಿ"

ಅತ್ತರ ತನ್ನ ಮನಸ್ಸಿನಂತೆ ನಡೆಯಬಹುದೆಂಬ ವಿಶ್ವಾಸದಿಂದ ಸುಮೀ ಅಳಲು ತೊಡಗಿದಳು

ತನ್ನ ಕಂದನನ್ನು ಬಿಟ್ಟು ಹೋಗಬೇಕಲ್ಲಾ ಎಂದು ಮೀನಾಕ್ಷಮ್ಮನ ಮನಸ್ಸು ಮುದುಡಿಹೋಯಿತು ತನ್ನಾನಂತರ ಸುಮಿತ್ರೆಯನ್ನು ಪೋಷಿಸುವವರಾರು? ಅಮ್ಮನಿಗೂ ವಯಸ್ಸಾಗುತ್ತಾ ಬಂತು – ನಾಳೆ ಅವರು ಇನ್ನೊಂದು ಮದುವೆಯಾದರೆ ಬಂದವಳು ತನ್ನ ಕಂದನನ್ನು ಸಾಕಿ ಸಲಹುವಳೆಂಬ ಧೈರ್ಯವೆಲ್ಲಿ?

ತನ್ನ ದುಃಸ್ಥಿತಿಗಾಗಿ ಮೀನಾಕ್ಷಮ್ಮ ಕಣ್ಣೀರು ಹಾಕಿದಳು–ತಾಯಿಯ ಕಣ್ಣೀರನ್ನು ಕಂಡು ಸುಮಿತ್ರೆ ಮತ್ತಷ್ಟು ಗಟ್ಟಿಯಾಗಿ ಅಳಹತ್ತಿದಳು ಅವಳ ರೋದನ ಕೇಳಿ ಪಾತಕ್ಕ,

"ಇದೇನೇ ಮೀನಾ ನಿಂಗೆ ವಯಸ್ಸಾದ್ದಕ್ಕೂ ಇದೀಗ ಸಾರ್ಥಕವಾಯಿತು ಆ ಮಗುವಿನ ಮುಂದೆ ನೀನೂ ಅಳುವುದೇ? ಮೊದಲೆ ಜ್ವರ ಕಾಯುತ್ತಿದೆ ಚೆನ್ನಾಗಿದೆಯಮ್ಮಾ ನಿನಗೆ ಬುದ್ಧಿ ಯಾರು ಹೇಳಬೇಕು?"

"ನನ್ನ ಸಂಕಟ ನಿಮಗೆ ತಿಳಿಯುದೇಮ್ಮಾ"

"ತಿಳಿಯುತ್ತೆ ತಾಯಿ ಆದರೇನು ಮಾಡುವುದು ಹೇಳು-ಧೈರ್ಯ ತಂದುಕೋಬೇಕಮ್ಮಾ ಮುದಿಮುಂಡೆ ನನಗೆ ಬಾರದ ರೋಗ ಚಿಕ್ಕಪುಟ್ಟ ಹುಡುಗರಿಗೆ ಬಂದಿದೆಯಲ್ಲಾ-ಎಲ್ಲಾ ಪೂರ್ವಜನ್ಮದ ಫಲ"

"ಅಮ್ಮಾ ಒಂದು ಮಾತು ನೀವು ನಡೆಸಿಕೊಡಬೇಕು"

"ಹೇಳಪ್ಪಾ-ನಾನೂ ಬಿದ್ದುಹೋಗೋ ಮರ-ನನ್ನ ಕೈಲೇನಾಗುತ್ತೆ?"

"ನಾನು ಸತ್ತರೆ ಅವರು ಬೇರ ಮದುವೆ ಮಾಡ್ಕೋತಾರೆ-ನನ್ನ ಸುಮಿಾನ ಜೋಪಾನ ಮಾಡೋದು ನಿಮ್ಮ ಭಾರಾಮ್ಮ"

"ನಾನೇನು ಮಾಡಲಿ ಹೇಳು?"

"ಯಾವುದೋ ಹುಡುಗಿ ಒಂದು ಮನೆ ಸೇರುವುದಕ್ಕಿಂತಾ, ನನ್ನ ಸೋದರತ್ತೇ ಮಗಳನ್ನೇ ತಂದುಕೊಂಡರೆ-ಒಡ ಹುಡುಗೀನೂ ಬದುಕಿ ಕೊಳ್ಳುತ್ತೆ-ಸುಮಿಾನ್ನೂ ಸರಿಯಾಗಿ ನೋಡ್ಕೋತಾಳೆ"

"ಈಗಲೇ ಕಂತ ಒಗಿಯೋ ಹಾಗೆ ಮಾತಾಡ್ತೀಯಲ್ಲೇ ಮಿಾನಾ"

"ಇನ್ನೆಷ್ಟು ದಿನಾಮ್ಮ-ನನ್ನ ಕಾಲ ಮುಗಿಯಿತು-ದಯವಿಟ್ಟು ನನ್ನ ಮಾತು ನಡೆಸಿಕೊಡೀಮ್ಮಾ"

ಸೊಸೆಯ ತೊಳಲಿಕೆ ಕಂಡು ಪಾತಕ್ಕನ ಜೀವ ಹಿಂಡಿದಂತಾಯಿತು

ತಾಯಿ ಅಜ್ಜಿಯ ಸಂಭಾಷಣೆಯನ್ನು ಅರ್ಥಮಾಡಿಕೊಳ್ಳಲು ಸುಮಿತ್ರೆ ಪ್ರಯತ್ನಿಸುತ್ತಿದ್ದಳು-ಅವರ ಮಾತುಕತೆಯೊಂದೂ ಅವಳ ಮುಗ್ಧ ಹೃದಯಕ್ಕೆ ಅರಿವಾಗದು-ತಾಯಿ ಮೊದಲಿನಂತ ಓಡಾಡುತ್ತಿರಲಿಲ್ಲ-ಅವಳಿಗೇನೋ ಚಿಂತೆಯಾಗಿತ್ತು-ಅವಳು ಹೋಗುವುದೆಲ್ಲಿಗೆ? ತನ್ನನ್ನು ಬಿಟ್ಟು ಎಲ್ಲಿ ಹೋಗಬಹುದು? ಬಾಲಬುದ್ಧಿಗೆ ನಿಲುಕದ ನೂರಾರು ಪ್ರಶ್ನೆಗಳು ಅವಳ ಮನವನ್ನು ಮುತ್ತುತ್ತಿದ್ದುವು

ಅವಳ ನಿಸ್ತೇಜ ಮುಖ ಕಂಡ ಪಾತಕ್ಕ,

"ಏಳು ಸುಮಿಾ ಊಟ ಮಾಡಿ ಸ್ಕೂಲಿಗೆ ಹೋಗುವೆಯಂತೆ"

"ಊಹೂ ನಾ ಹೋಗೋಲ್ಲ"

"ಯಾಕೆ?"

"ಅಮ್ಮ ಎಲ್ಲಿಗೋ ಹೋಗ್ತಾಳೆ"

"ಎಲ್ಲೂ ಹೋಗೋಲ್ಲ ಏಳು"

"ನಾ ಎಲ್ಲೂ ಹೋಗೋಲ್ಲ–ಹೋಗು ಸುಮಿ. .ಓದಿ ನೀನು ಜಾಣೆ ಆಗಬೇಡವೇ ?"

ಮೀನಾಕ್ಷಮ್ಮ ಧೈರ್ಯ ಹೇಳಿದರು

ಅರೆಮನಸ್ಸಿನಿಂದ ಸುಮಿತ್ರಾ ಸ್ಕೂಲು ತಲುಪಿದಳು

ಊಟದ ಶಾಸ್ತ್ರ ಮುಗಿಸಿ ಪಾತಕ್ಕ ಸೊಸೆಯ ಬಳಿ ಕುಳಿತರು

ಸೊಸೆಯ ದೇಹವನ್ನು ಕಂಡು ಅವರಿಗೆ ದುಃಖ ಉಕ್ಕೇರಿ ಬಂತು ಭಾಗ್ಯಲಕ್ಷ್ಮಿಯಂತಿದ್ದ ಹೆಂಡತಿಯನ್ನು ತಮ್ಮ ಮಗ ಒಂದು ದಿನವಾದರೂ ಸರಿಯಾಗಿ ಬಾಳಿಸಲಿಲ್ಲವಲ್ಲಾ ಎಂದು ಕೊರಗಿದರು ಹೆಚ್ಚು ಮಾತನಾಡಿದುದರ ಆಯಾಸದಿಂದ ಮೀನಾಕ್ಷಮ್ಮ ಅದೇ ಮುಚ್ಚಿದ್ದ ಕಣ್ಣನ್ನು ಮೆಲ್ಲನೆ ತೆರೆದು

"ಅವರು ಬಂದರೇನಮ್ಮ"

"ಇನ್ನೂ ಇಲ್ಲ"

"ಹೇಳಿಕಳಿಸುತ್ತೀರಾ ?"

ಪಾರ್ವತಮ್ಮ ನೆರಮನೆಯ ಹುಡುಗನ ಕೈಲಿ ಸ್ಕೂಲಿಗೆ ಹೇಳಿ ಕಳುಹಿಸಿ ಬಂದರು.

"ಮೀನಾ ಗಂಜೀ ಕೊಡಲೇ ?"

"ಬೇಡೀಮ್ಮಾ ಇಲ್ಲೇ ಕುಳಿತುಕೊಳ್ಳಿ"

"ಹೆಚ್ಚು ಮಾತಾಡಬೇಡಮ್ಮಾ ಆಯಾಸವಾಗತ್ತೆ"

"ಅಮ್ಮಾ ನಾನೇನು ತಪ್ಪು ಮಾಡಿದ್ದರೂ ಕ್ಷಮಿಸೀಮ್ಮಾ–ಸುಮಿ ನಿಮ್ಮ ಮಗು–ನಿಮ್ಮ ಮಡಲಿಗೆ ಹಾಕಿ ಹೋಗುತ್ತೀನೆ"

ಪಾತಕ್ಕನಿಗೆ ಮಾತೇ ಹೊರಡದಂತಾಯಿತು ನರಸಿಂಹಯ್ಯ ಲಗುಬಗನೆ ಬಂದು ಹೆಂಡತಿಯ ಮುಂದೆ ಅಪರಾಧಿಯಂತೆ ಕುಳಿತ.

"ಸ್ವಲ್ಪ ಕಾಲು ಕೊಡಿ"

ದಿಗ್ಭ್ರಮೆಯಿಂದ ನರಸಿಂಹಯ್ಯ ಹೆಂಡತಿಯ ಮಾತಿನಂತೆ ನಡೆದ. ಪ್ರಯಾಸದಿಂದ ಎದ್ದು ಮೀನಾಕ್ಷಮ್ಮ ಗಂಡ, ಅತ್ತೆ ಇಬ್ಬರಿಗೂ ಸಮಸ್ಕರಿಸಿದಳು. "ಜನ್ಮ ಜನ್ಮಗಳಲ್ಲೂ ನಿಮ್ಮ ಸೇವೆ ಮಾಡೋ ಪುಣ್ಯ ಲಭಿಸಲಿ. ಅರಿಯದೆ ತಪ್ಪು ಮಾಡಿದ್ದರೆ ಕ್ಷಮಿಸಿ. ..ಸುಮೀನ್ನ ಚೆನ್ನಾಗಿ ನೋಡಿ

ಕೊಳ್ಳಿ . ಸುಮಿ ಸುಮಿ" ಎನ್ನುತ್ತಾ ಮೀನಾಕ್ಷಮ್ಮ ಕಣ್ಮುಚ್ಚಿ ಅನಂತ ದಲ್ಲಿ ಲೀನವಾದಳು

"ಈ ಸಂಸಾರ ನನ್ನ ಕೊರಳಿಗೆ ಕಟ್ಟಿದೆಯಲ್ಲೇ " ಎಂದು ಪಾತಕ್ಕ ಗೋಳಾಡಿ "ಪುಣ್ಯಾತ್ಗಿತ್ತಿ ಮುತ್ತೈದೆ ಸಾವು " ಎನ್ನುತ್ತಾ ತಾವೇ ಸಮಾಧಾನ ತಂದುಕೊಂಡರು ।

"ಇರೋವರೆಗೂ ನಿನ್ನ ಸರಿಯಾಗಿ ಕಾಣಲಿಲ್ಲ ಕೊನೆಗೂ ನನಗೊಂದು ಮಾತೂ ಹೇಳದೇ ಹೋದ್ಯಲ್ಲೇ ಮೀನಾ ನಾನು ಅಪರಾಧಿ ನನ್ನನ್ನು ಕ್ಷಮಿಸು" ಎಂದು ನರಸಿಂಹಯ್ಯ ಪ್ರಲಾಪಿಸಿದ ಒಂದೇ ಕ್ಷಣದಲ್ಲಿ ಮನೆ ರೋದನದಲ್ಲಿ ಮುಳುಗಿತು ಅಕ್ಕಪಕ್ಕದವರು ಸೇರಿ ಶವಸಂಸ್ಕಾರದ ಏರ್ಪಾಡು ಮಾಡಿದರು

"ಅಮ್ಮಾ ಅಮ್ಮಾ " ಎಂದು ಶವದ ಮೇಲೆ ಬಿದ್ದು ಹೊರಳಾಡು ತ್ತಿದ್ದ ಸುಮಿತ್ರೆಯನ್ನು ಪಕ್ಕದ ಮನೆಯಾಕೆ ಕರೆದೊಯ್ದು ತಿಂಡಿ ಕೊಟ್ಟು ಸಮಾಧಾನ ಮಾಡಲೆತ್ನಿಸಿದರು.

"ಅರಿಶಿನ ಕುಂಕುಮ ಸೂರೆಮಾಡಿಕೊಂಡು ಜಯಜಯಾಂತ ಹೋದಳು ಬಾಳಿದ್ದಕ್ಕೂ ಸಾರ್ಥಕ" ಎಂದು ಎಲ್ಲರೂ ಸಮಾಧಾನ ಹೇಳಿ ದರು ಹಿರಿಯರ ನಾಯಕತ್ವದಲ್ಲಿ ಮೀನಾಕ್ಷಮ್ಮನ ಇಹಜೀವನ ಯಾತ್ರೆ ಮುಗಿಯಿತು

೨

ಸಾವು ಬಂದು ಮನೆಯ ವಾತಾವರಣವನ್ನು ಕದಡಿ ಹೋಗಿತ್ತು ತಾಯಿಯ ಅಗಲಿಕೆಯಿಂದ ಸುಮಿತ್ರೆಯ ಮುಗ್ಧ ಮುಗುಳ್ನಗೆ ಮಾಸಿತ್ತು ಮಗು ಸಂಕಟಪಡುವುದೆಂದು ಪಾತಕ್ಕ ಆದಷ್ಟು ಧೈರ್ಯ ತಂದುಕೊಂಡು ಸಂತೋಷ ನಟಿಸುತ್ತಿದ್ದರು ಸುಮಿತ್ರೆಗೆ ದಿನಕ್ಕೊಂದು ಹೂವಿನಲ್ಲಿ ಜಡೆ ಹಾಕಿ, ಹೊಸ ಲಂಗ ತೊಡಿಸಿ ಅವಳ ಮನಸ್ಸನ್ನು ಕ್ಷಣಕಾಲ ಬೇರೆಡೆ ತಿರುಗಿಸಲು ಯತ್ನಿಸುತ್ತಿದ್ದಳು ಅವಳ ಹಣೆಗೆ ತಿಲಕವಿಟ್ಟು, "ಸುಮಿ ನೀನು ಸಾಕ್ಷಾತ್ ಗೌರಿ ಕಣೆ" ಎಂದು ಗಲ್ಲ ನೇವರಿಸಿದರೆ,

"ಅಮ್ಮ ಇದನ್ನೆಲ್ಲಾ ನೋಡಿದ್ದರೆ" ಎಂದು ತಾಯಿಯ ನೆನಪು ತಂದು ಕೊಳ್ಳುತ್ತಿದ್ದಳು

ಪಾತಕ್ಕನಿಗೆ ದುಃಖ ಕಟ್ಟೆಯೊಡೆದು ಬರುತ್ತಿತ್ತು "ಈ ವಯಸ್ಸಿನಲ್ಲೇ ನಿನ್ನ ಹಣೆಯಲ್ಲೇನೇನು ಕಷ್ಟ ಬರೆದಿದೆಯೋ–ನನ್ನ ಕಂದಾ" ಎಂದು ಸುಮಿತ್ರೆಯನ್ನು ತಬ್ಬಿಕೊಂಡು ಅಳುತ್ತಿದ್ದರು ಅಜ್ಜಿಯ ಕಣ್ಣೀರು ಸುಮಿತ್ರೆಯ ಕಣ್ಣಲ್ಲೂ ನೀರು ತರಿಸುತ್ತಿದ್ದಿತು "ಅಮ್ಮಾ" ಎಂದು ದೊಡ್ಡ ರಾಗದಲ್ಲಿ ಅವಳೂ ಅಳಹತ್ತಿದರೆ, ಪಾತಕ್ಕ,

"ಮುಖ ಎಲ್ಲಾ ಕೆಟ್ಟುಹೋಯ್ತಲ್ಲೇ ಹೋಗು ತೊಳೆದುಕೊಂಡು ಬಾ" ಎಂದು ಕಳುಹಿಸಿ ತಾವೂ ಸಮಾಧಾನ ತಂದುಕೊಳ್ಳಲೆತ್ನಿಸುತ್ತಿದ್ದರು

ಪತ್ನಿಯ ಸಾವು ನರಸಿಂಹಯ್ಯನಲ್ಲೇ ಒಂದು ತೆರನಾದ ಪರಿಣಾಮ ವುಂಟುಮಾಡಿತ್ತು ಹೆಂಡತಿ ಬದುಕಿದ್ದಾಗ ಮನೆಯನ್ನೇ ಸೇರದಿದ್ದವನು

ಈಗ ಮನೆ ಮೂಳೆನಾಗುತ್ತಾ ಬಂದ ಯಾವಾಗಲೂ ತಲೆಯ ಮೇಲೆ ಕೈಹೊತ್ತು ಕುಳಿತ ಮಗನನ್ನು ಕಂಡು ಪಾತಕ್ಕ,

"ಕಟ್ಟನೋಲೆ ಬುದ್ಧಿ ಬಂತು ಅನ್ನೋ ಹಾಗೆ-ಅನಕು ಇದ್ದಾಗ ಗೋಳು ಹುಯ್ಕೊಂಡ ಈಗ ಯೋಚಿಸ್ತಾನೆ" ಎಂದು ಮಗನನ್ನು ಜರಿದರು

ತನ್ನ ಅಲಂಕಾರವನ್ನು ತಂದೆಗೆ ತೋರಿಸುವ ಹಂಬಲದಿಂದ ಸುಮಿತ್ರೆ ಬಂದರ,

"ನಾನಂತೂ ಸಾಕಿ ಈ ಮಗು ಏನು ಪಾಡಿತೇ ಮಿನಾನಾ-ನಡು ನೀರಿನಲ್ಲಿ ಕೈಬಿಟ್ಟು ಹೋದೆಯಲ್ಲಾ" ಎಂದು ಮುಖ ಮುಚ್ಚಿಕೊಳ್ಳುತ್ತಿದ್ದ ಅವನ ಚರ್ಯೆ ಅರ್ಥವಾಗದೆ ಸುಮಿತ್ರಾ ಸುಮ್ಮನೆ ಜಾಗ ಬಿಡುತ್ತಿದ್ದಳು

ನರಸಿಂಹಯ್ಯನ ಚಿತ್ತಫಲಕದ ಮೇಲೆ ಒಂದೊಂದೇ ನೆನಪುಗಳು ಜಾರುತ್ತಿದ್ದವು

ಆಗ ಮಿನಾನಾ ಬದುಕಿ

ಅಪರೂಪಕ್ಕೆ ಬೇಗ ಮನೆಗೆ ಬಂದ ಗಂಡನನ್ನು ಕಂಡು ಸಂತೋಷವಾಯಿತು ಮಧ್ಯಾಹ್ನ ತಿಂಡಿಗೆಂದು ಮಾಡಿದ ಚಕ್ಕುಲಿಯನ್ನು ಒಂದು ತಟ್ಟೆಯಲ್ಲಿಟ್ಟುಕೊಂಡು ಕಾಫಿ ಸಮೇತ ಬಂದು ಪತಿಯ ಮುಂದೆ ನಿಂತಳು ಅಂದು ಅವಳು ಬಹಳ ಎಚ್ಚರಿಕೆಯಿಂದ ಅಲಂಕರಿಸಿಕೊಂಡು ಬಂದಿದ್ದಳೆಂಬುದನ್ನು ಗ್ರಹಿಸಿದ ನರಸಿಂಹಯ್ಯ ಸೂಕ್ಷ್ಮವಾಗಿ ನಕ್ಕ ತನಗಾಗಿಯೇ ಅಲ್ಲವೇ ಈ ಸಂಭ್ರಮ?-ಒಂದು ಕ್ಷಣ ತನ್ನ ಬಗ್ಗೆ ತನಗೇ ಹೆಮ್ಮೆ ಎನಿಸಿತು-ಗಂಡನ ನಗೆಯಿಂದ ಚೇತರಿಸಿಕೊಂಡ ಮಿನಾಕ್ಷಮ್ಮ,

"ಇವತ್ತು ಗುಡಿಗೆ ಹೋಗಬೇಕೆಂದಿದ್ದೇನೆ" ಎಂದಳು

"ಹೋಗಿ ಬನ್ನಿ"

"ನೀವೂ ಬರಬೇಕು"

"ನನಗೆ ಪುರಸೊತ್ತಿಲ್ಲ"

"ದಿನವೂ ಹೀಗೇ ಹೇಳುತ್ತೀರಿ ಒಂದು ಕ್ಷಣ ಮನೆಯಲ್ಲಿರುವುದಕ್ಕೆ ನಿಮಗೆ ಮನಸ್ಸಿಲ್ಲ-ಸ್ಕೂಲು ಮುಗಿದಮೇಲೇನು ಕೆಲಸ?"

"ಹೀಗೇ ನೂರೆಂಟು–ಇರುತ್ತಲ್ಲಾ ತಾಪತ್ರಯ–ನಿಮ್ಮನ್ನೆಲ್ಲಾ ಕಟ್ಟಿ ಕೊಂಡ ಮೇಲೆ ಸಾಮಾನ್ಯವೇ ?"

"ಶಾನೆ ನೀವು ತಾಪತ್ರಯ ಹಚ್ಚಿಕೊಂಡು ಕೊರಗುತ್ತಿರೋದು–ನನಗೆಲ್ಲಾ ಗೊತ್ತು"

"ಏನು ಗೊತ್ತು ?"

"ನೀವು ಎಲ್ಲಿ ಹೋಗ್ತೀರೀಂತ"

"ಗೊತ್ತಿದ್ರೆ ಸರಿ"

ಗಂಡನ ಸಮಾಧಾನದ ಮಾತು ಕೇಳಿ ಮೀನಾಕ್ಷಮ್ಮನಿಗೆ ಕೆರಳಿತು, ನಿರಾಶೆಯಿಂದ

"ಇದಕ್ಕೆ ನನ್ನನ್ಯಾಕೆ ಮದುವೆ ಆಗಬೇಕಿತ್ತು ?" ಎಂದಳು

"ಅದಕ್ಕುತ್ತರ ಅಮ್ಮನ್ನ ಕೇಳು"

ಅಸಮಾಧಾನದಿಂದ ಬುಸುಗುಟ್ಟುತ್ತಾ ನರಸಿಂಹಯ್ಯ ಹೊರಗೆ ಹೊರಟುಹೋದ ಮೀನಾಕ್ಷಮ್ಮ ಅವನು ಹೋಗುವುದನ್ನೇ ನೋಡುತ್ತಾ ಅಸಹಾಯಕಳಂತೆ ಕಣ್ಣೀರಿಟ್ಟಳು ಸೊಸೆಯನ್ನು ಸಮಾಧಾನ ಮಾಡಲು ಪಾತಕ್ಕ ಯತ್ನಿಸಿ ವಿಫಲರಾದರು ಅವಳದೊಂದೇ ಪ್ರಶ್ನೆ

"ಹೀಗೆ ಮಾಡಬಹುದೇ ಅಮ್ಮಾ ?"

"ಏನು ಹೇಳಲಿ ಮೀನಾ ಮದುವೆಯಾದರೆ ಬುದ್ಧಿ ಬರುತ್ತೆಂದು ನಾನು ತಿಳಿದೆ ನನ್ನದೇ ತಪ್ಪಾಯಿತು–ನಾನೇ ನಿನಗೆ ಅನ್ಯಾಯ ಮಾಡಿದೆ ಮೀನಾ ಹಠಮಾಡಬೇಡ ಪ್ರೇಮದಿಂದ ಅವನ ಹೃದಯ ಗೆಲ್ಲಲು ಯತ್ನಿಸು" ಎಂದು ಬುದ್ಧಿ ಹೇಳಿದರು

ಮೀನಾಕ್ಷಮ್ಮ ಸಹನೆ, ಸಂಯಮಗಳ ಮೂರ್ತಿಯಾದಳು–ಪತಿಗೆ ಮಾತ್ರ ವಿವೇಕ ಬರಲಿಲ್ಲ

ಪತಿಯ ಪ್ರೇಮದಿಂದ ಸಂಪೂರ್ಣವಾಗಿ ವಂಚಿತಳಾಗಿದ್ದ ಮೀನಾಕ್ಷಮ್ಮನಿಗೆ ಸುಮಿತ್ರೆಯ ಸ್ನೇಹಲತೆಯೊಂದು ಆಶ್ರಯವಾಗಿತ್ತು.

ಎರಡನೆಯ ಮಗುವನ್ನು ಹೊತ್ತಿದ್ದಾಗಲೇ ಮೀನಾಕ್ಷಮ್ಮ ಬಾಣಂತಿ ಕ್ಷಯಕ್ಕೆ ಬಲಿಯಾದುದು.

"ನಾನೇ ಅವಳನ್ನು ಕೊಂದೆನೇ ? ..ನಾನು ಪ್ರೀತಿಯಿಂದ ಕಂಡಿದ್ದರೆ

ಇನ್ನೂ ನಾಲ್ಕು ದಿನ ಬದುಕಿರುತ್ತಿದ್ದಳೇನೋ ?—ನಾನು ಪಾಪಿ ತ್ಯಾಗ ಮೂರ್ತಿಯಾದ ದೇವಿಯನ್ನು ಕೈಯಾರೆ ಕೊಲೆಮಾಡಿದೆ ಅವಳು ಮಲಗಿದ್ದಾಗಲೂ ಸರಿಯಾದ ಔಷಧೋಪಚಾರ ಮಾಡಲಿಲ್ಲ"

"ನೀವು ಏನು ಮಾಡಿದರೂ ಸರಿ ನಿಮ್ಮ ಸಂತೋಷ ನನಗೆ ಮುಖ್ಯ ನಿಮ್ಮ ಸುಖದ ಹಾದಿಯಲ್ಲಿ ನಾನೆಂದೂ ಕಂಟಕವಾಗುವುದಿಲ್ಲ" ಕೊನೆ ಕೊನೆಗೆ ಈ ಮಾತು ಅವಳ ಬಾಯಿಂದ ಬರುತ್ತಿದ್ದಿತು ಏನಾ ತನ್ನ ವಿಷಯದಲ್ಲಿ ಬೇಸರಗೊಂಡಿದ್ದಳೇ ? ಛ ! ಇರಲಾರದು ಅವಳ ನಡೆ ನುಡಿಯಾವುದರಲ್ಲೂ ಕೊಂಕಿರಲಿಲ್ಲ ತಾನೆಷ್ಟು ಹೀನನಂತೆ ವರ್ತಿಸಿದ್ದರೂ ತನ್ನನ್ನು ಎಂದೂ ಅಗೌರವದಿಂದ ನಡೆಸಿಕೊಂಡಿರಲಿಲ್ಲ ಅವಳ ಸರಳ, ಸುಂದರ ಪ್ರೇಮಕ್ಕೆ ತಾನು ಅರ್ಹನೇ ? ಎಂದು ತನ್ನನ್ನೇ ಪ್ರಶ್ನಿಸಿಕೊಂಡ

"ಮಗೂ ಯಾರೋ ಹುಡುಗ ಬಂದಿದಾನೆ ನೋಡಪ್ಪಾ" ವೈಮರೆತು ಕುಳಿತಿದ್ದ ನರಸಿಂಹಯ್ಯನಿಗೆ ತಾಯಿ ಕೂಗಿದಾಗಲೇ ಎಚ್ಚರವಾದುದು ನರಸಿಂಹಯ್ಯ ಟವಲನ್ನು ಹೆಗಲಮೇಲೆ ಹಾಕಿಕೊಳ್ಳುತ್ತಾ ಹೊರಬಂದು, "ಓಹೋ ಏನು ಶ್ರೀಕಂಠ ಬಾ ಒಳಗೆ" ಎಂದು ರೂಮಿಗೇ ಕರೆದೊಯ್ದು

ಒಳಗೆ ಬಂದ ಶ್ರೀಕಂಠ ಸುತ್ತಮುತ್ತ ನೋಡಿ, ಯಾರೂ ಇಲ್ಲವೆಂದು ಖಚಿತಪಡಿಸಿಕೊಂಡಮೇಲೆ,

"ಒಂದು ವಾರದ ಮೇಲಾಯಿತು ಸಾರ್, ಮನೆಗೆ ಬಂದು" ಎಂದು ಪೀಠಿಕೆ ಹಾಕಿದ

"ಹೌದು ಶ್ರೀಕಂಠ ಮನೆ ಸ್ಮಶಾನವಾಗಿದೆ"

"ಏನಾಯಿತು ಸಾರ್ ?"

"ನನ್ನ ಹೆಂಡತಿ ಹೋದಳು ಶ್ರೀಕಂಠ"

"ವಿಷಯ ತಿಳಿಯದೆ ಅಕ್ಕ ಬಹಳ ಕೋಪಗೊಂಡಿದ್ದಳು ಸಾರ್."

"ನೀನು ಕಾರಣ ತಿಳಿಸಪ್ಪಾ"

"ಆಗಲಿ ಸಾರ್—ಈದಿನ ಖಂಡಿತಾ ಬನ್ನಿ ಸಾರ್"

" . . . . . "

"ನೀವು ಈದಿನ ಬರದಿದ್ರೆ ಅಕ್ಕ ಬಹಳ ಸಂಕಟಪಡ್ತಾಳೆ ಸಾರ್"

" "

"ಬರುತ್ತೀರಿ ಅಂತ ತಿಳಿಸಲೇ ಸಾರ್"

"ಹೂಂ  ಆರುಘಂಟೆಗೆ ಬರ್ತೀನೀಂತ ತಿಳಿಸು"

"ಮರೆಯಬೇಡಿ ಸಾರ್" ಎನ್ನುತ್ತಾ ಶ್ರೀಕಂಠ ಬೀಳ್ಕೊಂಡ

ನರಸಿಂಹಯ್ಯನಿಗೆ ಹೊಸ ಚೇತನ ಬಂದಂತಾಯಿತು  ಆಗಲೇ ಐದುಗಂಟೆಯ ಸಮಯ—ಪೇಟೆಕಡೆ ಹೋಗಿ ಅಲ್ಲಿಗೆ ಹೋಗುವಷ್ಟರಲ್ಲಿ ಹೊತ್ತು ಸರಿಯಾಗುತ್ತೆ ಎಂದು ಯೋಚಿಸಿ ಸ್ನಾನಗೃಹದ ಕಡೆ ಹೊರಟ

ಮಗನ ಉತ್ಸಾಹ ಕಂಡು ಪಾತಕ್ಕ ಅಚ್ಚರಿಗೊಂಡರು  ಆದರೆ ಮಾತಾಡಲಿಲ್ಲ

ನರಸಿಂಹಯ್ಯ ಯಾವುದೋ ಭಾವಗೀತೆ ಗುನುಗುತ್ತಾ ಸರಸವಾಗಿ ಸಿಂಗರಿಸಿಕೊಂಡ  ತಂದೆಯ ಅತೀವ ಉತ್ಸಾಹ ಕಂಡು ಸುಮಿತ್ರಾ,

"ಅಣ್ಣಾ, ನನ್ನೂ ಕರ್ಕೊಂಡು ಹೋಗೋ" ಎಂದು ಪೀಡಿಸಿದಳು

"ಇವತ್ತು ಬೇಡ"

"ನೀನು ದಿನಾ ಹೀಗೆ, ಹೇಳುತ್ತೀ"

"ನಾಳೆ ಖಂಡಿತಾ ಬರುವೆಯಂತೆ  ನಿಂಗೆ ಒಳ್ಳೆ ಟೇಪು ಎಲ್ಲಾ ಕೊಡಿಸುತ್ತೇನೆ" ಎಂದು ಮಗಳನ್ನು ಉಪಾಯವಾಗಿ ಸಮಾಧಾನಮಾಡಿ ಮುಂದೆ ಹೊರಟ

## ೩

ಪಾತಕ್ಕ ಶ್ರೀಮಂತರಮನೆಯ ಸೊಸೆಯಾದರೂ, ಅದನ್ನನುಭವಿಸುವ ಯೋಗ ಅವಳಿಗಿರಲಿಲ್ಲ ಬಡತನದಲ್ಲೇ ಬೆಳೆದ ಪಾತಕ್ಕ ತಮ್ಮ ಅದೃಷ್ಟದಿಂದ 'ಜೋಡಿದಾರರ' ಮನೆ ಸೊಸೆಯಾಗುವ ಸೌಭಾಗ್ಯಪಡೆದು ಬಂದಿದ್ದರು ಪಾತಕ್ಕ ಒಡವೆ-ವಸ್ತ್ರಗಳಿಂದ ಅಲಂಕೃತರಾಗಿ ಸಿರಿಲಕ್ಷ್ಮಿಯಂತೆ ಕಂಗೊಳಿಸುತ್ತಿದ್ದುದನ್ನು ಕಂಡ ಗೌರಮ್ಮ ಹೆಮ್ಮೆಯಿಂದ,

"ನಾನು ಬಡಮುತ್ತೈದೆಯಾದರೂ ನನ್ನ ಪಾತು ನೋಡಿ—ಒಂದಿನ ಜನ್ಮದಲ್ಲಿ ಚೆನ್ನಾಗಿ ಪೂಜೆಮಾಡಿದ್ದಳೆಂದು ಕಾಣುತ್ತದೆ—ಅನುರೂಪನಾದ ಪತಿ ಅವಳಿಗೆ ಒಲಿದಿದ್ದಾನೆ—ಹೆಂಗಸಿಗೆ ಇದಕ್ಕಿಂತಾ ಹೆಚ್ಚಿಗೆ ಏನು ಬೇಕು?" ಎನ್ನುತ್ತಿದ್ದರು

ತಮಗೆ ದೊರೆತ ಸ್ಥಾನದಿಂದ ಪಾತಕ್ಕನ ತಲೆ ತಿರುಗಲಿಲ್ಲ—ಬಡವರೆಂದರೆ ಅವರ ಮನ ಮಿಡಿಯುತ್ತಿದ್ದಿತು—ನಿರ್ವಂಚನೆಯಿಂದ ತಮ್ಮಬಳಿ ಇದ್ದುದನ್ನು ಕೈಯೆತ್ತಿ ಕೊಡುತ್ತಿದ್ದರು ಮನೆಯಲ್ಲಿ ದಿನವೂ ಹಬ್ಬದಂತೇ ನಡೆಯಬೇಕು 'ಈ ದಿನ ಲಲಿತಾ ಸಹಸ್ರನಾಮ—ಇವತ್ತು ಮಲ್ಲಿಗೆ ಹೂವಿನಲ್ಲಿ ಪೂಜೆ—ನಾಳೆ ಸಂಪಿಗೆಹೂವಿನಲ್ಲಿ ಲಕ್ಷಪೂಜೆಯಾಗಬೇಕು—ಎಂದು ದಿನವೂ ಒಂದೊಂದು ಕಾರ್ಯಕ್ರಮ ಏರ್ಪಡಿಸಿಕೊಂಡು ಬ್ರಾಹ್ಮಣರಿಗೆ ದಾನ ಧರ್ಮ ಮಾಡುತ್ತಿದ್ದರು

ಹೆಂಡತಿಯ ಮಿತಿಮೀರಿದ ಔದಾರ್ಯಕಂಡು ಪಾತಕ್ಕನ ಗಂಡ ವೆಂಕಟದಾಸಪ್ಪನವರು, ಆಗಾಗ್ಗೆ, "ಸ್ವಲ್ಪ ಕೈಹಿಡಿತ ಮಾಡು ಪಾತು" ಎಂದು ಎಚ್ಚರಿಕೆ ಇತ್ತರೆ, ಅವನ ತಾಯಿ ವೆಂಕಮ್ಮ

" ಸಾಕು ಸುಮ್ಮನಿರೋ—ಇರುವಷ್ಟು ದಿನವೂ ನಿಮ್ಮ ತಂದೆ ಹೀಗೇ ಮಾಡಿ ನನ್ನ ಕೈ ತಡೆಯುತ್ತಿದ್ದರು—ಕಾಸಿಗೆಕಾಸು ಕೂಡಿಹಾಕಿದರಲ್ಲಾ—ಹೋಗುವಾಗ ತೆಗೆದುಕೊಂಡು ಹೋದರೇ?—ನಾವು ಮಾಡಿದ ದಾನ, ಧರ್ಮ ನಮ್ಮನ್ನು ಕಾಯಬೇಕು —ಮಂಗಳಕಾರ್ಯಗಳು ಜರುಗುತ್ತಿದ್ದರೇ ಮನೆಗೆ ಲಕ್ಷಣ—ನೀನು ಅವಳ ಮಾತನ್ನು ಲೆಕ್ಕಕ್ಕೆ ಇಡಬೇಡ ಸಾತು" ಎಂದು ಮಗನ ಬಾಯಿ ಮುಚ್ಚಿಸಿ ಸೊಸೆಗೆ ಪ್ರೋತ್ಸಾಹಕೊಡುತ್ತಿದ್ದರು

ವೆಂಕಮ್ಮನವರೂ ವಿಧಿವಶರಾದಮೇಲೆ ಸಾತಕ್ಕ ತನ್ನ ಜವಾಬ್ದಾರಿಯನ್ನರಿತು ನಡುಗಿದರು ಅತ್ತೆ ಬದುಕಿರುವಷ್ಟು ದಿನವೂ ಮನೆಯ ಆಡಳಿತ ಸೂತ್ರವನ್ನು ಹಿಡಿದು, ತಮ್ಮ ಮೂರುಗಂಡು ಮಕ್ಕಳ್ಳಿ–ಸೊಸೆಯಂದಿರಲ್ಲಿ ಕಲಹಬಾರದಂತೆ ನಡೆಸಿಕೊಂಡು ಹೋಗುತ್ತಿದ್ದರು ಮೊದಲಿನಿಂದಲೂ 'ಸಾತಕ್ಕನನ್ನು ತಲೆಯಮೇಲೇರಿಸಿಕೊಂಡು ನಡೆಸುತ್ತಿದ್ದಾರೆ' ಎಂದು ಅತ್ತೆಯಮೇಲೆ ಕಿಡಿಕಾರುತ್ತಿದ್ದ ಉಳಿದ ಸೊಸೆಯಂದಿರಿಗೆ ಈಗ ಸದವಕಾಶ ಸಿಕ್ಕಿದಂತಾಯಿತು

" ಮಕ್ಕಳಾಗಲೀಂತ ಅಶ್ವತ್ಥ ಪ್ರದಕ್ಷಿಣೆ–ತೀರ್ಥಯಾತ್ರೆ–ದಾನ ಎಲ್ಲಾ ಮುಗಿಯಿತು –ಇಲ್ಲದ ಸೋಗು ಹಾಕಿಕೊಂಡು, ಭಕ್ತೆ ನಟಿಸುತ್ತಾ ಮೆರೆಸುತ್ತಿದರೆ ಮಕ್ಕಳಾಗುತ್ತವೆಯೋ?" ಎಂದು ಸಾತಕ್ಕನ ಕಿವಿಗೆ ಬೀಳುವಹಾಗೆ ಆಡುತ್ತಿದ್ದರು

ತನ್ನ ಓರಗಿತ್ತಿಗೆ ಒತ್ತಾಸೆ ಕೊಡುತ್ತಾ ಮತ್ತೊಬ್ಬಳು,

"ಮಾಡೋದು ಅನಾಚಾರ–ಮನೆ ಮುಂದೆ ಬೃಂದಾವನ"

"ಇವರು ಸ್ವರ್ಗಕ್ಕೆ ಹೋಗುವುದರಲ್ಲಿ ನಮ್ಮ ಮನೆ ತೊಳೆದು ಹೋಗುತ್ತದೆ" ಎಂದು ಇನ್ನೊಬ್ಬಳು ಬಾಯಿ ಹಾಕುತ್ತಿದ್ದಳು

ತಮ್ಮ ಹತ್ತಿರ ಮಕ್ಕಳು ಸುಳಿಯದಂತ ಅವರು ಎಚ್ಚರಿಕೆ ವಹಿಸುತ್ತಿದ್ದುದನ್ನು ಸೂಕ್ಷ್ಮವಾಗಿ ಗ್ರಹಿಸಿದ ಸಾತಕ್ಕ, 'ಇವರಿಗೆ ಒಂದು ಮಗುವಾದರ ನನ್ನ ಭಾಗಕ್ಕೆ ಲೋಕದಲ್ಲಿರುವವರೆಲ್ಲಾ ನನ್ನ ಮಕ್ಕಳು' ಎಂದು ಸಮಾಧಾನ ತಂದುಕೊಳ್ಳುತ್ತಿದ್ದರು ತಾನು ಬಂಜೆಯೆಂದು ಜರಿಯುವುದನ್ನು ಕೇಳಿ ಕೇಳಿ ಸಾತಕ್ಕ ಕಿವುಡರಾಗಿದ್ದರು ಇದೊಂದು ದುಃಖ ಅವರನ್ನು ಕೀಟದಂತೆ ಕೊರೆಯುತ್ತಿದ್ದಿತು ದಿನದಿನಕ್ಕೂ ಸೊರಗುತ್ತಿದ್ದ ಹೆಂಡತಿಯನ್ನು

ಕಂಡು ವೆಂಕಟದಾಸಪ್ಪ, ಎಷ್ಟು ಬಾಯಿಬಿಡಿಸಲೆತ್ನಿಸಿದರೂ ಸಾಧ್ಯವಾಗಲಿಲ್ಲ ಗಂಡನಿಗೆ ತಿಳಿಸಿದರೆ ಎಲ್ಲಿ ಮನೆ ಒಡೆಯುವುದೋ ಎಂದು ಹೆದರಿ ಪಾತಕ್ಕ ತಮ್ಮಲ್ಲೇ ದುಃಖವನ್ನಡಗಿಸಿಕೊಳ್ಳಲು ಯತ್ನಿಸುತ್ತಿದ್ದರು

ಅವರ ದುಃಖ ಭಗವಂತನಿಗರಿವಾಗಿರಬೇಕು! ಪಾತಕ್ಕನಿಗೆ ಬಯಕೆಗಳಾಗಲು ಪ್ರಾರಂಭವಾಯಿತು ಇದನ್ನು ಕಂಡು ಮಿಕ್ಕ ಮೂವರು ಸೊಸೆಯಂದಿರು ಮುಖ-ಮುಖ ನೋಡಿಕೊಂಡರು-ಅವರ ಬಾಯಲ್ಲಿ ದ್ರವ ಹಾರಿಹೋಗಿದ್ದಿತು

ಪಾತಕ್ಕ ತಮ್ಮ ಅಕ್ಕರೆಯ ಗಂಡುಮಗನೊಂದಿಗೆ ಹೆಮ್ಮೆಯಿಂದ ಪತಿಗೃಹ ಸೇರಿದರು-'ಅಮ್ಮ ಈಗಿದ್ದಿದ್ದರೆ'' ಎಂದು ತಮ್ಮತ್ತೆಯನ್ನು ನೆನೆಸಿಕೊಂಡು ಮಗನ ಆಟಪಾಟಗಳನ್ನು ನೋಡಿ ಹಿಗ್ಗುತ್ತಿದ್ದರು

ಪಾತಕ್ಕನ ಸುಖಕಂಡು ವಿಧಿ ಸೈರಿಸಲಿಲ್ಲವೇನೋ,-ಒಂದು ದಿನ ಗದ್ದೆಯ ಕಡೆ ಹೋಗಿದ್ದ ವೆಂಕಟದಾಸಪ್ಪ ಸಂಜೆಯಾದರೂ ಮರಳಲಿಲ್ಲ-ಪಾತಕ್ಕನ ಎದೆ ವೇಗವಾಗಿ ಹೊಡೆಯಲಾರಂಭಿಸಿತು ಊಟವನ್ನೂ ಮಾಡದೆ ಕುಳಿತಿದ್ದರು-ಅವರ ಮನಸ್ಸಿನಲ್ಲಿ ಏನೋ ಭಯ-ಹೊಟ್ಟೆಯಲ್ಲಿ ಸಂಕಟ-ಎಷ್ಟು ಧೈರ್ಯ ತಂದುಕೊಳ್ಳಲು ಯತ್ನಿಸುತ್ತಿದ್ದರೂ ಸಾಧ್ಯವಾಗಲಿಲ್ಲ

ಅತ್ತಿಗೆಯ ದುಃಖವನ್ನು ಕಂಡು ನಾರಾಯಣ, "ನಾನು ಹೋಗಿ ನೋಡಿಕೊಂಡು ಬರುತ್ತೇನೆ-ನೀವು ಊಟಮಾಡಿ ಅತ್ತಿಗೆ' ಎಂದ

"ಅಷ್ಟುಮಾಡಿದರ ನಿನಗೆ ಪುಣ್ಯಬರುತ್ತೆ-ಹೋಗಿ ಬಾ" ಎಂದು ತಮ್ಮ ಕೊನೆಯ ಮೈದುನನನ್ನು ಕಳಿಸಿದರು

ಇಬ್ಬರು ಆಳುಗಳ ಜೊತೆ ನಾರಾಯಣ ಹೊರಟ ಪಾತಕ್ಕ ಮಗನನ್ನೂ ಹತ್ತಿರ ಕೂಡಿಸಿಕೊಂಡು ಗಂಟೆಗಳನ್ನೆಣಿಸುತ್ತಾ ಜಗುಲಿಯಮೇಲೆ ಕೂತರು

ಕತ್ತಲಾದಮೇಲೆ ನಾರಾಯಣ ಹಿಂತಿರುಗಿದ ಅವನೊಬ್ಬನೇ ಬಂದುದನ್ನು ಕಂಡು ಪಾತಕ್ಕ ಭಯಕಂಪಿತರಾದರು ಬಹಳ ಕಷ್ಟದಿಂದ 'ಸಿಕ್ಕಿದರೇ'' ಎಂದು ಕೇಳಿದರು ನಾರಾಯಣ ಉತ್ತರಕೊಡದೆ ತಲೆಯ ಮೇಲೆ ಕೈಹೊತ್ತು ಕುಳಿತ

ಸ್ವಲ್ಪಹೊತ್ತಿನಲ್ಲೇ ವೆಂಕಟದಾಸಪ್ಪನವರ ಮೃತದೇಹವನ್ನು ನಾಲ್ಕಾರು ರೈತರು ಹೊತ್ತುತಂದರು ಪತಿಯ ಪಾರ್ಥಿವಶರೀರ ಕಂಡ ಪಾತಕ್ಕ ಸ್ಮೃತಿತಪ್ಪಿ ಉರುಳಿದರು ಆ ರಭಸಕ್ಕೆ ಹಣೆಯೊಡೆದು ರಕ್ತ ಚಿಮ್ಮಿತು ತಾಯಿತಂದೆಯ ಸ್ಥಿತಿಕಂಡು ನರಸಿಂಹ ರೋಧಿಸಲಾರಂಭಿಸಿದ ಸಿಡಿಲಿನಂತೆರಗಿದ ಈ ಘಟನೆಗಳಿಂದ ಮನೆಯವರು ನಡುಗಿದರು ಪಾತಕ್ಕನನ್ನು ಉಪಚರಿಸಿ–ನರಸಿಂಹನನ್ನು ಸಮಾಧಾನ ಪಡಿಸುವುದರಲ್ಲಿ ಅವರೆಲ್ಲರಿಗೂ ಸಾಕುಸಾಕಾಗಿ ಹೋಗಿದ್ದಿತು

ಪ್ರಜ್ಞೆ ತಿಳಿದಮೇಲೆ ಪಾತಕ್ಕ ಆತ್ಮಹತ್ಯೆಗೆ ಮಾಡಿಕೊಳ್ಳಲೆತ್ನಿಸಿದರು ನರಸಿಂಹ ಅವರಮುಂದೆ ನಿಂತು ತನ್ನ ಪ್ರೀತಿಯಿಂದ ತಾಯಿಯ ಮನಸ್ಸನ್ನು ಇಹಲೋಕವೆಡೆಗೆ ಒಯ್ಯುತ್ತಿದ್ದ ನರಸಿಂಹನಿಗಾಗಿ ಪಾತಕ್ಕ ಉಳಿದರು

ಪತಿಯ ಮರಣಾನಂತರ ಪಾತಕ್ಕನಿಗೆ ಅತ್ತೆಯಮನೆಯ ಋಣಾನುಬಂಧ ಕಡಿದುಹೋಯಿತು ಮೈದುನರು ಪಾತಕ್ಕನನ್ನು ಹೊರಹಾಕಿದರು ತಮ್ಮ ತಬ್ಬಲಿ ಮಗುವನ್ನು ಕಟ್ಟಿಕೊಂಡು ಪಾತಕ್ಕ ಬೇರೆ ಸಂಸಾರ ಹೂಡಿದರು

ಮೊದಮೊದಲು ತಾವು ಮೇಲುಗೈಯಾಗಿ, ದರ್ಬಾರುನಡೆಸಿದ ಊರಿನಲ್ಲೇ ಕೂಲಿಕೆಲಸಮಾಡುವುದು ಪಾತಕ್ಕನಿಗೆ ಅವಮಾನಕರವೆನಿಸಿತು ಕ್ರಮೇಣ ಅದೇ ಅಭ್ಯಾಸವಾಗುತ್ತ ಬಂದಿತು ಪರಿಸ್ಥಿತಿ ಮಾನಾವಮಾನಗಳ ವಿಚಾರಣೆಮಾಡುವಷ್ಟು ಅವಕಾಶಕೊಡಲಿಲ್ಲ 'ಬಡವರ ಭಂಗಾರ'ದಂತೆ ನರಸಿಂಹಯ್ಯ ತಾಯಿ ನೀಡುತ್ತಿದ್ದ ಬಡ ಆರೈಕೆಯಲ್ಲೇ ಓದಿ ಮುಂದೆಬಂದ ಅವನು ವಿದ್ಯಾವಂತನಾದುದನ್ನು ಕಂಡು ಪಾತಕ್ಕ ಕೆಲಸಮಾಡಲು ಹೋಗುತ್ತಿದ್ದಮನೆ ಲಾಯರೊಬ್ಬರು, "ಪಾತಕ್ಕ ಇನ್ನು ನಿಮ್ಮ ಕಷ್ಟಪರಿಯಿತು" ಎಂದರು

"ಅದೇನಪ್ಪಾ"

"ನಿಮ್ಮ ಮಗನಿಗೆ ಮೈನರ್ ಕಳೆದಿಲ್ಲವೇ ?"

"ಹೂಂ"

"ಈಗ ದಾವಾ ಹಾಕಿ ಆಸ್ತಿ ಪಡೆಯಬಹುದು."

"ಅದಕ್ಕೆಲ್ಲಾ ದುಡ್ಡೆಲ್ಲಿದೇಪ್ಪಾ–ಬಡವಿ ನಾನು" ಎಂದು ಪಾತಕ್ಕ ತಮ್ಮ ಅಸಹಾಯ ಸ್ಥಿತಿ ತಿಳಿಸಿದರು

"ನಾನು ನಿಂತು ಮಾಡುತ್ತೇನೆ — ಯೋಚಿಸಬೇಡಿ"

"ನೀವೇ ನಮ್ಮ ಭಾಗದ ದೇವರಪ್ಪಾ" ಪಾತಕ್ಕ ಕೃತಜ್ಞರಾಗಿ ನುಡಿದರು

ರಾಯರು ಮುದ್ದಾಗಿ ನಿಂತು ನರಸಿಂಹಯ್ಯನ ಪಾಲಿಗೆ ಬರಬೇಕಾಗಿದ್ದ ಸಮಸ್ತ ಆಸ್ತಿಯನ್ನೂ ದೊರಕಿಸಿದರು

ಅಂದಿನಿಂದ ಪಾತಕ್ಕ ಬೆಂಗಳೂರಿನ ತಮ್ಮ ಮನೆಯಲ್ಲೇ ವಾಸಮಾಡ ಲಾರಂಭಿಸಿದರು

ನರಸಿಂಹಯ್ಯನ ಕಾಲೇಜು ವ್ಯಾಸಂಗವೂ ನಿರ್ವಿಘ್ನವಾಗಿ ಮುಂದು ವರೆಯಿತು

ಡಿಗ್ರಿ ಪಡೆದು ನರಸಿಂಹಯ್ಯ ದೇಶೀಯ ಶಾಲೆಯೊಂದರಲ್ಲಿ ಅಧ್ಯಾಪಕ ನಾದ ಜೀವನಧಾರಕ್ಕೆ ಅಧ್ಯಾಪಕ ವೃತ್ತಿಯನ್ನು ಕೈಗೊಂಡಿದ್ದರೂ, ನರಸಿಂಹಯ್ಯ ಉತ್ಕಟ ಕಲಾಭಿಮಾನಿ ವಿದ್ಯಾರ್ಥಿ ದೆಸೆಯಲ್ಲಿ ತಾನೇ ಹಲವು ನಾಟಕಗಳನ್ನು ಬರೆದು, ಹಲವು ನಾಟಕಗಳಲ್ಲಿ ಪಾತ್ರವಹಿಸಿ ಬಹುಮಾನಿತನಾಗಿದ್ದ ಅವನಲ್ಲಿದ್ದ ಸುಪ್ತ ಕಲಾಭಿಮಾನ ವಿಕಸಿಸಲು ಸರಿಹೋದ ವಾತಾವರಣ ದೊರೆಯದಿದ್ದುದರಿಂದ ಕಲಾವೃತ್ತಿಗೆ ಶರಣು ಹೋಗಬೇಕಾಯಿತು ಈ ಅಭಿಮಾನವೇ ಮಂಜುಳನೊಂದಿಗೆ ಅವನನ್ನು ಬೆಸೆದಿತ್ತು ಹೆಸರಿನಂತೆಯೇ ಮಂಜುಳ ಶಾರೀರ – ಸರಳ, ಸ್ನಿಗ್ಧ, ಸುಂದರ ರೂಪು – ಮಂಜುಳೆಯ ಮೇಲಣ ವ್ಯಾಮೋಹದಲ್ಲಿ ನರಸಿಂಹಯ್ಯ ತನ್ನ ತನವನ್ನೇ ಮರೆತಿದ್ದ

"ಮಂಜೂ" ನರಸಿಂಹಯ್ಯನ ಕೂಗಿಗೆ ಮಂಜುಳ ಹರಿಣಿಯಂತೆ ಓಡಿಬಂದಳು ವಿರಹದ ಆವೇಗ ಇಬ್ಬರನ್ನೂ ಕ್ಷಣಕಾಲ ಬಂಧಿಸಿತು ತನಗೆ ದೊರೆತಿದ್ದ ಅಪೂರ್ವ ನಿಧಿಯಿಂದ ನರಸಿಂಹಯ್ಯ ಮೈಮರೆತ ಅವನ ಹಿಡಿತದಿಂದ ಜಾರಿದ ಮಂಜುಳಾ ಹುಸಿ ಕೋಪ ನಟಿಸುತ್ತಾ,

"ಈ ದಿನ ನನ್ನ ನೆನಪಾಯಿತೇನೋ" ಎಂದಳು

"ಮನೆಯ ಸನ್ನಿವೇಶ ನಿನಗೇ ತಿಳಿದಿದೆ ಮಂಜೂ"

"ಹೇಳಿ ಕಳುಹಿಸಬಾರದಿತ್ತೇ"

"ಯಾವುದಕ್ಕೂ ನನಗೆ ಬುದ್ಧಿಯೇ ಓಡಲಿಲ್ಲ ಕ್ಷಮಿಸು ಮಂಜೂ" ಎಂದು ಗೋಗರೆದ

"ಹೋಗಲಿ ಇವತ್ತು ನಾನು ಹೇಳಿದ ಹಾಗೆ ಕೇಳಬೇಕು"

"ಹೂಂ"

"ಖಂಡಿತಾ"

"ನಾನೆಂದಾದರೂ ಮಾತಿಗೆ ತಪ್ಪಿರುವೆನೇ ?"

"ಇಂದು ನೀವು ಮನೆಗೆ ಹೋಗಕೂಡದು"

"ಅಮ್ಮ ಏನಾದರೂ ತಿಳಿದುಕೊಂಡರೆ "

"ಹೋಗಿ–ನಿಮಗೆ ಮನಸ್ಸಿಲ್ಲ" ಎಂದು ಮುಖ ತಿರುವಿದಳು

"ನೀನು ಹೇಳಿದ ಹಾಗೇ ಆಗಲಿ"

"ಏನೂ ಬೇಡ ಬಲವಂತ ಮಾಘಸ್ನಾನ ಯಾಕೋ"

"ಹುಚ್ಚೀ ನಿನ್ನ ಬಳಿ ಇರಲು ನನಗೆ ಉಪಚಾರ ಬೇಕೇ" ಎಂದು ಲಲ್ಲೆಗರೆಯುತ್ತಾ ಆವಳ ಕೋಪ ಹಾರಿಸಿದ

ಮಂಜುಳೆಯ ಮುಖದ ಮೇಲೆ ಮುಗುಳ್ನಗೆ ಚೆಲ್ಲಾಟವಾಡಿತು ತನ್ನಿನಿಯನನ್ನು ಮನಸಾರೆ ತಣಿಸಿದಳು ತೃಪ್ತಿಯ ನಗೆಯೊಂದು ನರಸಿಂಹಯ್ಯನ ಮುಖದ ಮೇಲೆ ಮಿಂಚಿ ಮಾಯವಾಯಿತು ಗಂಭೀರ ವಾದ ಅವನ ಮುಖವನ್ನೇ ನಿಟ್ಟಿಸುತ್ತಾ ಕೇಳಿದಳು

"ಏನಾಯಿತು ?"

"ಏನೂ ಇಲ್ಲ ಮಂಜು"

"ಊಹೂ ನೀವು ಹೇಳಲೇ ಬೇಕು—"ಏನೋ ಮುಚ್ಚಿಡುತ್ತಿರು ವಿರಿ."

"ಜಗಮೊಂಡಿ ಕಣೇ ನೀನು"

"ನೀವು ಹೇಳಿದರೇ ನಾನು ಮಾತಾಡಿಸುವುದು" ಎಂದು ಗಾಂಭೀರ್ಯದ ಸೋಗು ಹಾಕಿದಳು.

"ನಾನು ಮಾಡುತ್ತಿರುವುದು ನ್ಯಾಯವೇ ?"

"ಯಾವುದು ?"

"ಇದು. .ನಿನ್ನ ಜೊತೆ ಇರುವುದು"

"ಆದರಲ್ಲೇನು ತಪ್ಪು?"

"ಹೆಂಡತಿ ಸತ್ತು ಹತ್ತು ದಿನವೂ ಇಲ್ಲ" ಆ ದುಃಖವನ್ನೂ ಮರೆತು ಸುಖ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವೆ"

"ನಿಮ್ಮ ಹೆಂಡತಿ ಬರುವುದಕ್ಕೂ ಮೊದಲಿನಿಂದ ಈ ಹೃದಯದಲ್ಲಿ ನನಗಲ್ಲವೇ ಸ್ಥಾನ?"

"ನಿಜ ಆದರೆ ಅವಳಿಗೆ ಅನ್ಯಾಯಮಾಡಿದೆ"

"ನೀವಿಷ್ಟು ಕಠಿಣವಾಗಿ ನಡೆಯಬಾರದಿತ್ತು"

"ನೀನೂ ನನ್ನನ್ನೇ ನಿಂದಿಸುವೆಯಾ"

"ಇಲ್ಲ ಇಲ್ಲ ಚೆಲ್ಲಿ ಹೋದ ಹಾಲಿಗೆ ಅತ್ತರೇನು ಬಂತು?" ಎಂದು ಸಮಾಧಾನಪಡಿಸಿದಳು

"ನಾನು ಪಾಪಿ ಮಂಜು. ಯಾರ ವಿಶ್ವಾಸಕ್ಕೂ ನಾನು ಅರ್ಹನಲ್ಲ"

"ಶ್" ಎಂದು ಅವನ ಬಾಯಿ ಮುಚ್ಚಿದಳು

ಅವಳ ನಿರ್ಮಲ ಅಂತಃಕರಣದಲ್ಲಿ ನರಸಿಂಹಯ್ಯ ತನ್ನೆಲ್ಲಾ ಜಂಜಡ ವನ್ನು ಮರೆತ

## ೪

ಮಗನ ಚರ್ಯೆ ಕಂಡ ಸಾತಕ್ಕ ದಿನ ದಿನಕ್ಕೂ ಕೊರಗತ್ತಿದರು

ನರಸಿಂಹಯ್ಯ ಹಗಲೂ ರಾತ್ರಿ ಮನೆ ಸೇರುತ್ತಿರಲಿಲ್ಲ 'ಮಗುವಿನ ಮೇಲಾದರೂ ವ್ಯಾಮೋಹ ಬೇಡವೇ'' ಎಂದು ಹಲುಬಿದರು ಒಂದೆ ಮುಂದೆ-ಸುತ್ತಾಡುತ್ತಿದ್ದ ಮೊಮ್ಮಗಳನ್ನು ಕಂಡರೆ,

"ಎಲ್ಲಾ ಬಂಧನಗಳನ್ನೂ ಕಿತ್ತೊಗೆದು ಹೋಗಬೇಕೆಂದುಕೊಳ್ಳು ತ್ತೇನೆ ನೀನೊಬ್ಬಳು ನಂಗೆ ಗಂಟಾದೆಯಲ್ಲೇ" ಎಂದು ನಿಂದಿಸು ತ್ತಿದ್ದರು

ಸುಮಿತ್ರೆ ಜೋಲು ಮುಖ ಹಾಕಿಕೊಂಡರೆ

"ಅಯ್ಯೋ ಕಂದಾ, ನಿನ್ನ ನೋಡಿ ಯಾರು ಬೇಯುಬಹುದು" ಎಂದು ಮಡಿಯಲ್ಲಿದ್ದುದನ್ನೂ ಮರೆತು ಸುಮಿತ್ರೆಯನ್ನು ಬಾಚಿ ತಬ್ಬಿ ಕೊಳ್ಳುತ್ತಿದ್ದರು

ಸುಮಿತ್ರೆಗೆ ಅಜ್ಜಿಯ ನಡೆನುಡಿ ವಿಚಿತ್ರವೆನಿಸುತ್ತಿತ್ತು

"ಅಜ್ಜಿ ಮಡಿ ಹೋಯ್ತು" ಎಂದು ಚಪ್ಪಾಳೆ ತಟ್ಟಿಕೊಂಡು ಕುಣಿಯು ತ್ತಿದ್ದಳು

"ನೀ ಇದೀಯಲ್ಲಾ-ಮಾಯಾವಿ" ಎಂದು ಸುಳ್ಳುಕೋಪ ನಟಿಸಿ ಮಡಿಯುಡಲು ಹೋಗುತ್ತಿದ್ದರು

ಪಾರ್ವತಮ್ಮನಿಗೆ ಭವಿಷ್ಯತ್ತು ಕೀಟದಂತೆ ಕೊರೆಯುತ್ತಿದ್ದಿತು. ಒಂದು ದಿನ ಧೈರ್ಯಮಾಡಿ ಮಗನಲ್ಲಿ ಪ್ರಸ್ತಾಪಿಸಿದರು

"ನನ್ನದೂ ವಯಸ್ಸಾಯ್ತು-ಕಾಲವಾಯ್ತು"

"ಇವೇನಮ್ಮಾ ಹೊಸದಾಗಿ ಹೇಳ್ತಾ ಇದೀಯಾ ?"

"ನಿಮಗೆ ಎಲ್ಲಾ ತಮಾಷೆಯಾಯಿತಪ್ಪಾ"

"ಇಲ್ಲಾ ಹೇಳು"

"ನನ್ನ ಮಾತಿನಂತೇ ನಡೆಯಬೇಕು"

"ಹೇಳಮ್ಮಾ ಅಂದ್ರೆ ಏನೋ ಪಿರುಕಣೆ ತೆಗೀತೀಯಲ್ಲಾ ನಿನ್ನ ಮಾತಿಗೆಂದಾದರೂ ವ್ಯತಿರಿಕ್ತವಾಗಿ ನಡೆದಿದ್ದೀನೇ ?"

"ಇಲ್ಲಪ್ಪಾ ಇಲ್ಲ ಸಾಕ್ಷಾತ್ ರಾಮಚಂದ್ರ" ಎಂದು ತಮ್ಮ ಅಸಮಾಧಾನ ವ್ಯಕ್ತಪಡಿಸಿದರು

'ಏನೋ ಹೇಳ್ತೀಯಂತ ಇಷ್ಟರೆ ಒಯ್ಯಲಾರಂಭಿಸಿದೆ ?"

"ಅದೇ ನೋಡು – ನಾನು ಹಿಂದೆ ಒದುಕಿದ್ದಷ್ಟು ದಿನ ಮುಂದೆ ಬದುಕುಪನೇ'

ತಾಯಿಯ ತೊಳಲಿಕೆ ಕಂಡು ನರಸಿಂಹಯ್ಯನಿಗೆ ನಗು ಬಂತು

"ನಿನ್ನದೂ ಚಿಕ್ಕಪುಟ್ಟ ಸಂಸಾರ ಹೇಗಾಯಿತು ಆ ತಬ್ಬಲಿಮಗು ಅವನ್ನ ಕಾಪಾಡೋರಾವರೂ ಯಾರು ? ನೀನು ಮನೆಯಲ್ಲಿ ಒಂದು ಕ್ಷಣ ನಿಲ್ಲೋದಿಲ್ಲ ನಾನೊಂದು ಮುದಿಗೊರಡು – ನನ್ನದು ಯಾವ ನೆಚ್ಚಿಗೆ ಹೇಳು ?"

ಮಗ ಸಾವಧಾನದಿಂದ ಕೇಳುತ್ತಿರುವುದನ್ನು ಕಂಡು ಪಾತಕ್ಕನಿಗೆ ನೆಮ್ಮದಿಯಾಯಿತು

"ಪುಣ್ಯಾತ್ಗಿತ್ತಿ ಸತ್ತು ಸಂಪಿಗೆ ಮರನಾಗಿದಾಳೆ ಇರೋವರೆಗೂ ನೀನು ಅವಳ ಹೊಟ್ಟೆ ಉರಿಸಿದೆ – ಸಾಯುವಾಗಲೂ ಪಾಪಾ ನಿನ್ನ ಯೋಚನೆ ಮಾಡುತ್ತಿದ್ದಳು ನಿನಗೆ ಇನ್ನೊಂದು ಮದುವೆ ಮಾಡಬೇಕೆಂದು ಹೇಳಿದಳು. ಅವಳ ಸೋದರತ್ತೇ ಮಗಳೊಬ್ಬಳಿರುವಳಂತೆ ನೀನು ಒಪ್ಪಿದರೆ ನಾನು ವಿಚಾರಿಸುತ್ತೇನಪ್ಪಾ"

"ಈಗಾದ ಮದುವೆ ಸಾಲದೇಮ್ಮಾ ನನಗಾಗಲೇ ಇಷ್ಟವಿರಲಿಲ್ಲ"

"ಏನೋ ಕಳೆದುಹೋದ ಮಾತೇನು ? ಈಗ ಆ ಮಗುವಿನ ಚಿಂತೆ ಒಂದಿದೆಯಲ್ಲಾ ಅದರ ಹಿತಕ್ಕಾದರೂ ನೀನು ಮನಸ್ಸು ಮಾಡಬೇಕು."

ಮಗನ ಕ್ರಮ ತಪ್ಪಿದ ಜೀವನದಿಯಲ್ಲಿ ಮದುವೆ ಒಂದು ಅಣೆಕಟ್ಟಾಗ ಬಹುದೆಂಬ ಆಸೆಯಿಂದ ಪಾತಕ್ಕ ತಮ್ಮ ದೃಢ ನಿರ್ಧಾರ ಸೂಚಿಸಿದರು

ನರಸಿಂಹಯ್ಯನ ಸ್ಥಿತಿ ಇಕ್ಕಳದಲ್ಲಿ ಸಿಕ್ಕಿಕೊಂಡಂತಾಗಿತ್ತು ಇತ್ತ ತಾಯಿ – ಅತ್ತ ಮಂಜುಳ

ಇತ್ತ ತಾಯಿಯ ಮಮತೆಯ ಕರೆ – ಅತ್ತ ಪ್ರೇಮದ ಇನಿಧ್ವನಿ

ತಾಯಿ ತನಗಾಗಿ ಅನೇಕ ಸಂಕಷ್ಟಗಳನ್ನೆದುರಿಸಿ ತನ್ನನ್ನು ಒಂದು ಸ್ಥಿತಿಗೆ ತಂದಿದ್ದಳು ಅವಳಿಗೆ ವ್ಯತಿರಿಕ್ತವಾಗಿ ನಡೆಯುವುದೇ ? ಒಂದು ಬಾರಿ ತಾಯಿಯ ಮನದಂತೇ ನಡೆದು ಮಾನಳ ಬಲಿಯಾಯಿತು ಈಗ ಆ ವೇದಿಕೆಗೆ ಮತ್ತೊಂದು ಹೆಣ್ಣಿನ ಬಲಿಯೇ ? ಸುಮಿತ್ರೆಯ ಭವಿಷ್ಯ ? ಅವಳನ್ನೇನು ಮಾಡುವುದು ?

ಮಂಜುಳಾ . ಅವಳೇನೆಂದುಕೊಳ್ಳಬಹುದು ?

ನರಸಿಂಹಯ್ಯನಿಗೆ ಯಾವುದೂ ಬಗೆಹರಿಯಲಿಲ್ಲ

"ಈಗಲೇ ಏನಮ್ಮಾ ಅವಸರ ನಿಧಾನವಾಗಿ ಯೋಚಿಸೋಣ"

"ನೀನೊಂದು ಮಾತು ತಿಳಿಸಿದರೆ ಹೆಣ್ಣಿನ ಕಡೆಯವರಿಗೂ ಅನು ಕೂಲ ಸುಮ್ಮನೆ ಗಂಡು ಹುಡುಕುವ ತೊಂದರೆ ತಪ್ಪಿಸಿದಂತಾಗುತ್ತೆ" ಎಂದರು

"ಬಂದವಳು ಸುಮಿಯನ್ನ ಸರಿಯಾಗಿ ನೋಡಿಕೊಳ್ಳುವಳು ಅನ್ನೋ ನಂಬಿಕೆ ಹೇಗಮ್ಮಾ ?"

"ಮಿನಾ ಹೇಳಿದಳು. ಬಹಳ ಒಳ್ಳೆಯ ಹುಡುಗಿಯಂತೆ ಕಣೋ"

"ನೀನಂತೂ ಎಲ್ಲಾ ನಿರ್ಧರಿಸಿದಂತೇ ಮಾತಾಡುತ್ತೀ"

"ನಿರ್ಧರಿಸುವುದಕ್ಕೆ ನಾನು ಯಾರಪ್ಪಾ? ಮದುವೆ ಆಗೋನು ನೀನು."

"ನೋಡೋಣ" ಎಂದು ನರಸಿಂಹಯ್ಯ ಮಾತು ತೇಲಿಸಿದ

ಮಗನ ಮಾತಿನಿಂದ ಪಾತಕ್ಕನ ಆಶಾವೃಕ್ಷ ಚಿಗುರಿತು. ಇಂದಲ್ಲ – ನಾಳೆಯಾದರೂ ತಮ್ಮ ಮಾತಿನಂತೇ ನಡೆಯುವನೆಂಬ ವಿಶ್ವಾಸದಿಂದ ಸುಮ್ಮನಾದರು ಮಗ ಒಳ್ಳೆಯವನೇ–ಅವನಿಗೆ ಗಂಟಾಗಿರುವ ಮಾಯೆಯ ಬಲೆಯೊಂದು ಹರಿದರೆ ..ಮಾನಳಿಗೆ ಸಾಧ್ಯವಾಗಲಿಲ್ಲ – ಅದೊಂದು ಸಾಧು

ಪ್ರಾಣಿ – ನೋಡೋಣ – ಮುಂದೆ ಬರುವವಳಾದರೂ ಇವನನ್ನು ಒಂದು ದಾರಿಗೆ ತರಬಹುದು – ಎಂದು ಸಮಾಧಾನಗೊಂಡರು

ಆ ರಾತ್ರಿ ಮಂಜುಳೆಯ ಅಭಿಪ್ರಾಯ ಕೇಳಲು ನರಸಿಂಹಯ್ಯ ಮಾತು ತೆಗೆದ

"ಮಂಜೂ ನಿದ್ರೆ ಬರುತ್ತಿದೆಯೇ ?"

"ಇಲ್ಲಾ "

"ಒಂದು ವಿಷಯ – ನೀನು ಸ್ಪಷ್ಟ ಅಭಿಪ್ರಾಯ ಹೇಳಬೇಕು "

"ಹೂಂ "

"ಅಮ್ಮ ಈ ದಿನ ಬೇರೊಂದು ಮದುವೆಯ ಪ್ರಸ್ತಾಪ ಮಾಡಿದಳು "

" "

"ಒಪ್ಪಿಕೊಳ್ಳಲೇ ?"

"ನೀವೇನು ಹೇಳಿದಿರಿ ?"

"ನಾನೇನನ್ನೂ ನಿರ್ಧರಿಸಿಲ್ಲ. ನಿನ್ನನ್ನು ಕೇಳುವುದೆಂದುಕೊಂಡೆ "

"ಈಗ ನಿಮಗೇನು ಕಡಿಮೆಯಾಗಿದೆ ?"

"ಏನೂ ಇಲ್ಲ ಆದರೆ "

"ಆದರೇನು ?"

"ಸುಮಿತ್ರೆಯ ಗತಿ ?"

"ನಾನು ಸಾಕಿದರೆ ಆಗಬಹುದೇ ?"

ನರಸಿಂಹಯ್ಯ ಮಾತನಾಡಲಿಲ್ಲ ಅವನ ಮನಸ್ಸನ್ನು ಗ್ರಹಿಸಿದ ಮಂಜುಳಾ, 'ಮರೆತಿದ್ದೆ ನಾನೆಷ್ಟಾದರೂ ನಿಮ್ಮ ಸೂಳೆ ತಾನೇ ?' ಎಂದಳು

"ಹೀಗೆಲ್ಲಾ ಮಾತನಾಡಿದರೆ ನನಗೆ ದುಃಖವಾಗುತ್ತದೆ "

"ಹೋಗಲಿ ಬಿಡಿ "

"ನಾನು ಕೇಳಿದ ಪ್ರಶ್ನೆಗೆ ಉತ್ತರವೇ ಇಲ್ಲ "

"ನಿಮಗೇನು ಗಂಡಸರು – ಹತ್ತಲ್ಲ ನೂರು ಸಲ ಬೇಕಾದರೂ ಮದುವೆಯಾಗಬಹುದು – ಮಾಡಿಕೊಳ್ಳಿ – ಶುಭಸ್ಯ ಶೀಘ್ರಂ "

ಅವಳ ಮಾತಿನ ಅಣಕ ನರಸಿಂಹಯ್ಯ ಗ್ರಹಿಸಿದ ಸಮಾಧಾನ ಹೇಳುವಂತೆ,

"ಸುಮಾ ನೋಡು . ಇನ್ನೂ ಸಣ್ಣವಳು ಅವಳಿಗಾಗಿ ಈರೀತಿ ನಿರ್ಧರಿಸಬೇಕಾಯಿತು ನನಗೇನು ಕಡಿಮೆ ? ನೀನಿರುವಾಗ "

"ಎಲ್ಲಾ ಒಣಸಮಾಧಾನ ಮುಖ್ಯ ನಿಮಗೇ ಬೇಕಾಗಿದೆ."

"ಖಂಡಿತಾ ಇಲ್ಲ ಮಂಜೂ "

"ಸುಮಾನ್ನ ನೋಡಿಕೊಳ್ಳಲು ಯಾರಾದರೂ ಆಗಬಹುದು – ಮಲ ತಾಯಿಯೇ ಆಗಬೇಕೇನು ?"

"ಹಾಗೇನಿಲ್ಲ ಆದರದು ಅಮ್ಮನ ಇಚ್ಛೆ "

"ಇಬ್ಬರೂ ಸರಿಯಾಗಿರುವಿರಿ – ಮನಸ್ಸಿಲ್ಲದ ಮೇಲೆ ಮದುವೆ ಯಾಕಾಗಬೇಕು ?"

"ಅವಳಿಗೆ ವ್ಯತಿರಿಕ್ತವಾಗಿ ನಡೆದರೆ ಇದೇ ಕೊರಗು ಹತ್ತಿ ಹಾಸಿಗೆ ಹಿಡಿಯಬಹುದು "

"ಒಂದು ಜೀವ ಉಳಿಸಲು ಮತ್ತೊಂದು ಜೀವದ ಬಲಿ ಕೊಡು ವಿರಾ ?"

ನರಸಿಂಹಯ್ಯ ಸ್ತಬ್ಧನಾದ – ಅವನ ಕಣ್ಮುಂದೆ ಹಿಂದಿನ ಜೀವನದ ಚಿತ್ರಗಳು ಹಾದುಹೋದವು – ಮಾನಳ ನೆನಪಾಗಿ ಕಣ್ಣಿಂದ ಹನಿ ಉದುರಿತು ಅವನ ದುಃಖ ಕಂಡು ಮಂಜುಳೆಗೆ ತಾನು ಆಡಿದುದು ತಪ್ಪೆನಿಸಿತು ಮರುಕ್ಷಣವೇ ತಪ್ಪೇನು ಬಂತು ? ಇರುವ ವಿಷಯ ತಿಳಿಸಿದೆ . ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಅನುಭವಿಸಲಿ – ಎಂದುಕೊಂಡಳು – ತಪ್ಪು ಮಾಡಿಯೂ ವಿವೇಕ ಬರಲಿಲ್ಲವಲ್ಲಾ – ಎಂದು ದುಃಖವೂ ಆಯಿತು

ತಮ್ಮದೇ ಒಂದೊಂದು ವ್ಯೂಹ ರಚಿಸಿಕೊಂಡು ಇಬ್ಬರೂ ಆ ರಾತ್ರಿ ಕಳೆದರು

ಬೆಳಗೆದ್ದಾಗ ನರಸಿಂಹಯ್ಯನ ಕಣ್ಣುಗಳೆರಡೂ ಕೆಂಪಡರಿದ್ದವು ಕಾಫಿ ಕೊಡುತ್ತಾ ಮಂಜುಳಾ, "ರಾತ್ರಿ ನಿದ್ರೆ ಬರಲಿಲ್ಲವೇ ?" ಎಂದಳು

"ಇಲ್ಲ "

"ನನ್ನ ಮೇಲೆ ಕೋಪವೇ ?"

"ಹಾಗೇನಿಲ್ಲ "

"ಹುಡುಗಿಯನ್ನ ನೋಡಿ ನಿಮಗೆ ನಿಜವಾಗಿ ಮನಸ್ಸಿದ್ದರೆ ಮದುವೆಯಾಗಿ "

"ಆ ಮಾತು ಈಗ ಬೇಡ ಮಂಜೂ " ಎಂದು ಮಾತು ಮರೆಸಲೆತ್ನಿಸಿದ

"ಸಂಜೆ ಬರುತ್ತೇನೆ – ಎಲ್ಲಾದರೂ ಹೊರಗೆ ಹೋಗೋಣ "

"ಆಗಲಿ '

ಭಾರವಾದ ಮನಸ್ಸಿನಿಂದ ನರಸಿಂಹಯ್ಯ ಮನೆಯ ಕಡೆ ನಡೆದ

## ೫

ಮಂಜುಳೆಯ ತಂದೆ ರಾಮರಾಯ ಪ್ರೈಮರಿ ಸ್ಕೂಲಿನ ಉಪಾಧ್ಯಾಯ ತಾನು ಬಡವನಾದರೂ ಮಂಜುಳಾ, ಶ್ರೀಕಂಠ ಇಬ್ಬರನ್ನೂ ಓದಿಸಿ ಮುಂದಕ್ಕೆ ತರಬೇಕೆಂಬ ಆಸೆ ಪ್ರಬಲವಾಗಿದ್ದಿತು ತಂದೆಯ ಆಸೆಗೆ ಬೆಂಬಲ ಕೊಡುವಂತೆ ಮಂಜುಳಾ ಸಣ್ಣ ವಯಸ್ಸಿನಿಂದಲೂ ಓದು, ಸಂಗೀತ ಎರಡರಲ್ಲೂ ಪ್ರಗತಿಯ ಚಿಹ್ನೆ ತೋರಿಸಿದ್ದಳು ಮಂಜುಳೆ ಯಾವುದಾದರೂ ಹಾಡು ಹೇಳಿದರೆ,

“ನಮ್ಮ ಮಂಜು ಶಾರೀರ ನೋಡೇ – ಕಂಚು – ಕಂಚು ಇದ್ದಹಾಗಿದೆ. ಹೆಸರೊಂದಲ್ಲ – ಅವಳಿರುವುದೊಂದಲ್ಲ ” ಎಂದು ಹೆಮ್ಮೆಪಡುತ್ತಿದ್ದ

“ಏನಾದರೂ ಮಾಡಿ ಮಂಜುವನ್ನು ಮುಂದಕ್ಕೆ ತರಬೇಕು ” ಎಂದು ತಮ್ಮ ಆಶೋತ್ತರಗಳನ್ನು ಮಂಡಿಸಿದರೆ, ವತ್ಸಲಮ್ಮ

“ನಾವಿರೋ ಸ್ಥಿತೀಲಿ ಏನು ಮಾಡೋದೋ ಕಾಣೆ ” ಎಂದು ನಿರಾಶೆ ವ್ಯಕ್ತಪಡಿಸುತ್ತಿದ್ದರು.

“ಮನವಿದ್ದಲ್ಲಿ ಮಾರ್ಗವಿದ್ದೇ ತೀರಬೇಕು.”

ರಾಮರಾಯ ತನ್ನ ಮನದ ಹಂಬಲ ಈಡೇರುವುದನ್ನು ಕಾಣಲಾಗಲಿಲ್ಲ. ಊರಿಗ ಬಂದ ಪ್ಲೇಗಿನ ಮಾರಿಗೆ ಒಂದು ದಿನ ಬಲಿಯಾಗಬೇಕಾಯಿತು

ಅಕಾಲ ವೈಧವ್ಯ ಪ್ರಾಪ್ತಿಯಿಂದ ವತ್ಸಲಮ್ಮ ನಡುಗಿದರು. ಅವರ ಬಡತನವನ್ನೇ ಆಯುಧವನ್ನಾಗಿಸಿಕೊಂಡು ರಕ್ಷಿಸುವೆನೆಂಬ ಸೋಗಿನಿಂದ ಹಲವಾರು ಶ್ರೀಮಂತರು ವತ್ಸಲಮ್ಮನ ರೂಪು ಯೌವನವನ್ನು ಹೀರಲು

ನಾನು ತಾನೆಂದು ಮುಂದೆ ಬಂದರು  ವಿಧಿಯ ಆಟದ ಮುಂದೆ ವತ್ಸಲಮ್ಮನ ಪಾತಿವ್ರತ್ಯ ನಿಲ್ಲಲಿಲ್ಲ  ಊರಿನ ಪ್ರಸಿದ್ಧ ವ್ಯಕ್ತಿಯಾದ ಸ್ವಾಮಿಯ ಕಾಮಾಗ್ನಿಗೆ ಬಲಿಯಾಗಬೇಕಾಯಿತು  ಸ್ವಾಮಿ ನಿಷ್ಠಾವಂತ-ಸ್ವಾಮಿಯ ಕೃಪಾಶ್ರಯದಲ್ಲಿ ವತ್ಸಲಮ್ಮನ ಸಂಸಾರ ಯಾವೊಂದು ಕೊರಗೂ ಇಲ್ಲದ ನಡೆಯುತ್ತಿದ್ದಿತು  ವತ್ಸಲಮ್ಮನಿಗೆ ಇದರಿಂದ ಸ್ವಲ್ಪವೂ ಶಾಂತಿ, ಸಮಾಧಾನವಿರಲಿಲ್ಲ  ಅವ್ಯಕ್ತ ಚಿಂತೆ ಅವಳ ಮನವನ್ನು ಕೊರೆಯುತ್ತಿದ್ದಿತು

'ಕ್ಷಣಿಕ ದೌರ್ಬಲ್ಯಕ್ಕೆ ಒಳಗಾಗಿ ನಾನು ಮಕ್ಕಳಿಗೆ ದ್ರೋಹ ಬಗೆದೆನೇ ?"

"ನಾಳೆ ಮಂಜುಳನ್ನು ಯಾರು ಮದುವೆಯಾಗುವರು ?"

ಅಂತ್ಯವಿಲ್ಲದ ಈ ಯೋಚನೆಗಳಲ್ಲಿ ವತ್ಸಲಮ್ಮ ನಿರ್ಜೀವಳಾಗುತ್ತಿದ್ದಳು  ಅವಳ ಕಳೆಗುಂದಿದ ಮುಖ ಕಂಡು ಸ್ವಾಮಿ,

"ವತ್ಸಲಾ, ಏನು ಕೊರಗು ಹೇಳಬಾರದೇ ?"

"  '

"ನಾನೇನಾದರೂ ಅನ್ಯಾಯಮಾಡಿರುವೆನೇ ?"

"ಇಲ್ಲ"

"ಒಂದು ವಿಧದಲ್ಲಿ ಅನ್ಯಾಯ ಮಾಡಿರುವೆ ವತ್ಸಲಾ  ನಿನ್ನ ದೇಹ ನಾನು ಬಯಸದೇ ಇದೇ ಸಹಾಯ ಮಾಡಿದ್ದಲ್ಲಿ ಅದು ಉಪಕಾರವಾಗುತ್ತಿದ್ದಿತು - ನಾನೂ ಮನುಷ್ಯ"

"ಕಳೆದುಹೋದ ಮಾತೇಕೆ ? ನಾಳೆ ಮಂಜುಳೆಯ ಗತಿ ಏನು ?"

"ಅವಳಿಷ್ಟವಿದ್ದರೆ ಓದಲಿ - ಸರಿಯಾದ ವರ ಸಿಕ್ಕಿದರೆ ಮದುವೆ ಆಗಲಿ  ನನ್ನ ಶಕ್ತಿ ಮೀರಿ ಸಹಾಯ ಮಾಡುತ್ತೇನೆ - ಯೋಚಿಸಬೇಡ"

"ನನ್ನ ಚರಿತ್ರೆ ತಿಳಿದೂ ಯಾರು ಅವಳನ್ನು ವಿವಾಹವಾಗುತ್ತಾರೆ ?"

ಸ್ವಾಮಿಯ ಉಸಿರು ಕಟ್ಟಿದಂತಾಯಿತು - ಒಂದು ಮನೆ ಉಳಿಸುವ ಉದ್ದೇಶದಿಂದ ಹೊರಟ ನಾನೀಗ ಮನೆ ಉರುಳಿಸುತ್ತಿರುವೆನೇ ಎಂದು ಸಂಶಯಗ್ರಸ್ತನಾದ  ಸ್ವಲ್ಪಹೊತ್ತು ಆಲೋಚಿಸಿ,

ವಿದ್ವಾನ್ ನಾರಾಯಣ ಅಯ್ಯಂಗಾರ್ಯರಲ್ಲಿ ಪ್ರಾರಂಭವಾಯಿತು ಶಿಷ್ಯಳ ಆಸಕ್ತಿ ಕಂಡು ಅಯ್ಯಂಗಾರ್ಯರೂ ಶ್ರದ್ಧೆಯಿಂದ ಪಾಠಹೇಳುತ್ತಿದ್ದರು

ಮಂಜುಳೆಯ ವಿದ್ಯಾಭ್ಯಾಸ ಯಾವೊಂದು ಎಡರೇನೂ ಇಲ್ಲದೆ ಸಾಗಿತ್ತು ಒಂದು ತರಗತಿಯಲ್ಲೂ ನಿಲ್ಲದೆ ಕಾಲೇಜು ಮೆಟ್ಟಲು ತುಳಿದ ಅವಳನ್ನು ಕಂಡು ವತ್ಸಲಮ್ಮ

"ನಿನ್ನದೇನೋ ನನಗೆ ಯೋಚನೆಯಿಲ್ಲ ಮಂಜೂ ಶ್ರೀತಂದ ಅತ್ತ ದಾರಿ ಹಿಡಿದನಲ್ಲಾ ಅಂತ ಒಂದೇ ವ್ಯಥೆ"

"ಹೌದಮ್ಮಾ ಅವರ ಒಂದು ಮಾತು ನೀನು ಏನಾಗಲಿ ಅವನನ್ನು ದಂಡಿಸುತ್ತಿರಬೇಕಮ್ಮ-ನೊಂದು ಬಿದ್ದು ಹೋಗುತ್ತಾನೆ"

"ಏನೋಮ್ಮ ಯಾರ ಹಣೆಯಲ್ಲಿ ಏನೇನು ಬರದಿದೆಯೋ ಬಲ್ಲವ ರಾರು?" ಎಂದು ವತ್ಸಲಮ್ಮ ಖಿನ್ನರಾಗುತ್ತಿದ್ದಳು

ಕಾಲೇಜಿನಲ್ಲಿ ಮಂಜುಳ ಸಾಕಷ್ಟು ಕೀರ್ತಿ ಸಂಪಾದಿಸಿದ್ದಳು ಕೆಲವರು ಅವಳ ಬುದ್ಧಿಮಂತಿಕೆಯನ್ನು ಮೆಚ್ಚಿದರೆ, ಕೆಲವರು ಅವಳ ರೂಪನ್ನು ಕೊಂಡಾಡುತ್ತಿದ್ದರು 'ಕಾಲೇಜ್ ಪೆಲಿಸ್' ಎಂದು ಕರೆದು ತಮ್ಮ ರಸಿಕತೆಯನ್ನು ಹುಡುಗರು ತೋರಿಸಿದ್ದರು-ಅವಳ ಕುಡಿಗಣ್ಣ ನೋಟಕ್ಕಾಗಿ ಹಾತೊರೆಯುತ್ತಿದ್ದವರೆಷ್ಟೋ ಮಂದಿ ಮಂಜುಳೆಯ ಹಿಂದಿನ ಚರಿತ್ರೆಯನ್ನು ಆಮೂಲಾಗ್ರವಾಗಿ ತಿಳಿದ ಕೆಲವು ಹುಡುಗರು ಅವಳನ್ನು ಕೆಣಕಿ ಛೀಮಾರಿಯನ್ನೂ ಹಾಕಿಸಿಕೊಂಡಿದ್ದರು ಹಲವು ಜನದ ಕಣ್ಣುಗಳು ಮಂಜುಳೆಯ ಮೇಲೆ ಕೇಂದ್ರೀಕೃತವಾಗಿದ್ದಿತು ಈ ಗುಂಪಿನಲ್ಲಿ ನರಸಿಂಹಯ್ಯನೂ ಒಬ್ಬ ಇತರ ಹುಡುಗರಂತೆ ಸಣ್ಣತನದ ವರ್ತನೆಗೆ ಹೋಗದಿದ್ದರೂ, ಮೌನವಾಗಿಯೇ ಮಂಜುಳೆಯನ್ನು ತನ್ನ ಆರಾಧ್ಯ ಮೂರ್ತಿಯನ್ನಾಗಿಮಾಡಿಕೊಂಡಿದ್ದ.

ವರ್ಷಾದ್ಯಂತ ನಡೆಸುತ್ತಿದ್ದ 'ಯೂನಿಯನ್ ಡೇ' ಸಮಾರಂಭದಲ್ಲಿ ನರಸಿಂಹಯ್ಯನ ನಾಟಕವೊಂದನ್ನು ಆಡುವುದೆಂದು ನಿಶ್ಚಯಿಸಲ್ಪಟ್ಟಿದ್ದಿತು. ಆ ಸಮಾರಂಭದಲ್ಲಿ ಮಂಜುಳೆಯ ಹಾಡುಗಾರಿಕೆ ಇದ್ದರ ಸಮಾರಂಭ ಕಳೆ ಕಟ್ಟುವುದೆಂದು ಸೆಕ್ರೆಟರಿಯಾಗಿದ್ದ ನರಸಿಂಹಯ್ಯನ ಆಸೆ ಇಂತಹ ಕಾರ್ಯಕ್ರಮಗಳಿಂದ ದೂರವಾಗೇ ನಿಲ್ಲುತ್ತಿದ್ದ ಮಂಜುಳೆಯನ್ನು ಎಳೆದು

ತರುವುದು ಹೇಗೆಂಬುವೇ ಸಮಸ್ಯೆಯಾಗಿದ್ದಿತು–ಕೊನೆಗೆ ಧೈರ್ಯಮಾಡಿ, ಅವಳ ಸಮ್ಮತಿ ಪಡೆದುಬಂದಿದ್ದ

ನರಸಿಂಹಯ್ಯನ ನೆಸಕೆಗೂ ಮೀರಿದ ಯಶಸ್ಸು ಅವನ ನಾಟಕಕ್ಕೆ ದೊರೆತಿದ್ದಿತು ಮಂಜುಳೆಯ ಕೋಕಿಲಗಾನ ಅವನನ್ನು ಮಂತ್ರಮುಗ್ಧನನ್ನಾಗಿ ಮಾಡಿತ್ತು

ಮನೆಗೆ ಹೊರಟಿದ್ದ ಮಂಜುಳೆಗೆ ತನ್ನ ಧನ್ಯವಾದವನ್ನರ್ಪಿಸುತ್ತಾ,

'ನಿಮ್ಮ ಸಂಗೀತ ಬಹಳ ಇಂಪಾಗಿತ್ತು ಮಿಸ್ ಮಂಜುಳಾ ಆ ಆನಂದವನ್ನು ವಣಿಸಲು ನನಗೆ ಮಾತುಗಳೇ ಸಾಲವು" ಎಂದ

ಅವನ ನಾಟಕೀಯತೆಯನ್ನು ಕಂಡು ಮಂಜುಳೆಗೆ ನಗು ಬಂತು ಕಷ್ಟಪಟ್ಟು ತಡೆದುಕೊಂಡು ಹೇಳಿದಳು

"ಅದು ನಿಮ್ಮ ಅಭಿಮಾನದ ಮಾತು–ನಿಜವಾಗಿ ಹೇಳುವುದಾದರೆ ನಿಮ್ಮ ನಾಟಕವೇ ಯಶಸ್ವಿಯಾದುದು"

ಮಂಜುಳೆಯ ಮಾತುಗಳಿಂದ ನರಸಿಂಹಯ್ಯನ ಮುಖ ಅರಳಿತು

"ಇನ್ನೇನಾದರೂ ಬರೆದಿರುವಿರಾ?"

"ಹೌದು – ಆಗಾಗ್ಗೆ ಬರೆಯುತ್ತೇನೆ"

"ಎಂದುವುದನ್ನು ಬಿಡಬೇಡಿ ನೀವು ಬರೆದುದನ್ನು ನಾನು ನೋಡಬಹುದೇ"

"ಅಗತ್ಯವಾಗಿ"

"ನಾಳೆ ನಮ್ಮ ಮನೆಗೆ ಕಳುಹಿಸಿ"

"ನಾನೇ ತಂದು ಕೊಡುತ್ತೇನೆ"

ಅವನ ಉತ್ಸಾಹಕ್ಕೆ ನಗುತ್ತಾ ಮಂಜುಳೆ ಮುಂದೆ ಹೋದಳು

ಪರಿಚಯದಲ್ಲಿ ಬೆಳೆದ ಅವರ ಸ್ನೇಹ ಪ್ರಣಯದಲ್ಲಿ ವಿಕಸಿಸಿತು

ನರಸಿಂಹಯ್ಯನ ಸಾಹಿತ್ಯಸೇವೆಗೆ ಮಂಜುಳೆ ಸ್ಫೂರ್ತಿಯಾದಳು

ಮಂಜುಳೆಯ ಬಾಳದೋಣಿ ಎತ್ತೆತ್ತಲೋ ಸಾಗಿದ್ದುದನ್ನು ಕಂಡ ವತ್ಸಲಮ್ಮ ಆಗಾಗ್ಗೆ ಎಚ್ಚರಿಸುತ್ತಿದ್ದರು

"ಮಂಜೂ ಹುಡುಗಾಟ ವಿಪರೀತವಾದೀತು–ಎಚ್ಚರಿಕೆ"

"ನೀನೇನು ಭಯಪಡಬೇಡಮ್ಮಾ, ಅವರನ್ನೇ ನಾನು ಮದುವೆ ಆಗುವುದು"

"ಯಾವಾಗ?"

"ನಮ್ಮ ಕೋರ್ಸ್ ಮುಗಿಯಬೇಕು"

"ಅಲ್ಲಿಯವರೆಗೆ ನಾನಿರುವೆನೇ?"

ನರಸಿಂಹಯ್ಯನಲ್ಲಿ ವತ್ಸಲಮ್ಮ ಮದುವೆಯ ಮಾತೆತ್ತಿದಾಗ ಅವನು ಕ್ಷಣಿಕ ಆವೇಗದಲ್ಲಿ,

'ಅದಕ್ಕೇನಮ್ಮಾ ಅಗತ್ಯವಾಗಿ ಆಗಲಿ" ಎಂದಿದ್ದ

ಆದರ ಮನಸ್ಸಿನಲ್ಲೊಂದು ಪುಟ್ಟ ಕಾಳಗವೇ ನಡೆದಿತ್ತು

'ಆಚಾರವಂತ ಅಮ್ಮ ಮಂಜುಳೆಯನ್ನು ಸ್ವೀಕರಿಸಬಲ್ಲಳೇ? ಅವಳು ಒಪ್ಪದಿದ್ದರೇನು ಮಾಡುವುದು? ಮಂಜುಳೆಯನ್ನೇನುಮಾಡುವುದು? ಬಿಟ್ಟುಬಿಡುವುದೇ? ಮಂಜುವನ್ನು ಬಿಟ್ಟು ಹೇಗಿರುವುದು? ಇರಬಲ್ಲೆನೇ?' ನೂರಾರು ಪ್ರಶ್ನೆಗಳು ನರಸಿಂಹಯ್ಯನಲ್ಲಿ ಪುಂಖಾನು ಪುಂಖವಾಗಿ ಉದ್ಭವಿಸುತ್ತಿದ್ದವು ಅದಕ್ಕುತ್ತರ ಹುಡುಕಲಾರದ ಅವನು ಜಾರಿಕೊಳ್ಳಲೆತ್ನಿಸಿದ

"ಇನ್ನೂ ಬಹಳ ಕಾಲವಿದೆಯಲ್ಲಾ ನೋಡೋಣ" ಎಂದು ತನಗೆ ಸಮಾಧಾನ ಹೇಳಿಕೊಂಡು ಸುಮ್ಮನಾದ

ಅವನ ಚರ್ಯೆ ವತ್ಸಲಮ್ಮನಿಗೆ ಅನುಮಾನವಿತ್ತಿದ್ದರೂ ಮಂಜುಳೆಗೆ ಯಾವ ಅಪನಂಬಿಕೆಯೂ ಇರಲಿಲ್ಲ

ಮಂಜುಳೆ ನಿರೀಕ್ಷಿಸಿದ್ದ ದಿನವೂ ಬಂತು–ಕೆಲಸ ಸಂಪಾದಿಸಿದ ಮಗನಿಗೆ ಮದುವೆಮಾಡುವ ಹಂಬಿಕೆಯಲ್ಲಿ ವಾತಕ್ಕ ಇದ್ದರು

"ಮಗೂ ಹಾಸನದಲ್ಲಿ ಒಂದು ಹೆಣ್ಣಿದೆಯಂತಪ್ಪಾ"

"ಹೆಣ್ಣಿಗೇನಮ್ಮಾ ಬೇಕಾದಷ್ಟಿದೆ"

"ನಿನಗೆ ತಂದುಕೊಳ್ಳಬೇಕೆಂದು ಆಸೆಇದೆ ಒಳ್ಳೆ ನೆಂಟಸ್ತನ–ಚೆನ್ನಾಗಿ ಕೊಟ್ಟು ಆದ್ದೂರಿಯಿಂದ ಮದುವೆ ಮಾಡಿಕೊಡುತ್ತಾರೆ"

"ನನಗೀಗ ಬೇಡಮ್ಮಾ"

“ನನ್ನ ಕಣ್ಣು ಮುಂದೇ ನಿನಗೊಂದು ಮದುವೆ ಆದರೆ ನಾನೂ ಶಾಂತಿಯಿಂದ ಕಣ್ಣುಮುಚ್ಚಬಹುದು ”

“ಮದುವೆ ಆಗುತ್ತೇನೆ. ಆದರೆ ನೀನು ಹೇಳಿದ ಹುಡುಗಿಯನಲ್ಲ ”

“ಇನ್ನಾವ ರಂಭೆಯನ್ನು ಹುಡುಕಿಟ್ಟಿರುವೆಯೋ ?”

ಇನ್ನಾಕೆ ನೋಡುವಿಯಂತೆ” ಎಂದು ನರಸಿಂಹಯ್ಯ ಅಭಿಮಾನದಿಂದ ಮಂಜುಳೆಯನ್ನು ತೋರಿಸಿದ್ದ.

ಹುಡುಗಿಯನ್ನ ಮಾತಕ್ಕೆ ಒಪ್ಪಿದ್ದರೂ, ನೆರೆಹೊರೆಯವರಿಂದ ಮಂಜುಳೆಯ ಮನೆತನದ ವಿಷಯ ಕೇಳಿದ ಮಾತಕ್ಕೆ ಖಂಡಿತವಾಗಿ ತಮ್ಮ ನಿರ್ಧಾರ ಸೂಚಿಸಿದರು.

“ಅವಳನ್ನೇನಾದರೂ ಮದುವೆಯಾದರೆ ನಾನಿಂದೇ ಬಾವಿಗೆ ಹಾರುತ್ತೇನೆ ” ಎಂದು ಮಗನನ್ನು ಹೆದರಿಸಿದರು.

“ನಿನ್ನ ನಾಳೆ ಮುಂದೆ ತಪ್ಪುವುದಕ್ಕೆ ನಾನೆಷ್ಟು ಜೀವಿತೇವೆ–ನನ್ನ ಮನಸ್ಸನ್ನು ನೋಯಿಸುವುದು ನ್ಯಾಯವಲ್ಲ–ಮಗೂ–ಕಾಲಿಗೆ ಬಿದ್ದು ಕೇಳುತ್ತೇನೆ ಮನೆತನದ ಮರ್ಯಾದೆ ಉಳಿಸಪ್ಪಾ” ಎಂದು ಅಂಗಲಾಚಿ ಮಗನ ಹೃದಯ ಗೆದ್ದಿದ್ದರು.

ನರಸಿಂಹಯ್ಯನ ನಿರ್ಧಾರವು ತಿಳಿದು ಮಂಜುಳೆ ಕುಸಿದುಬಿದ್ದಳು. ಅವಳ ಭವಿಷ್ಯತ್ತನ್ನು ಸೂಕ್ಷ್ಮವಾಗಿ ಗ್ರಹಿಸಿದ ವತ್ಸಲಮ್ಮ,

“ನಿನ್ನ ಕಾಲಮೇಲೆ ನೀನೇ ಚಪ್ಪಡಿ ಎಳೆದುಕೊಂಡೆ, ಅನುಭವಿಸು ” ಎಂದು ಮಗಳನ್ನು ಜರಿದಳು.

ತನಗಾದ ನಿರಾಶೆಯಿಂದ ಮಂಜುಳೆ ತಾಯಿಯ ಮೇಲೆ ವಿಷ ಕಾರಿದಳು.

“ನೀನೆಂಥ ತಾಯಿ ? ನಿನ್ನ ಸುಖಕ್ಕಾಗಿ ನನ್ನ ಬಾಳನ್ನು ಮಣ್ಣುಗೂಡಿಸಿದೆ ” ಎಂದು ತಾಯಿಯ ಗುಣಾವಗುಣಗಳ ವಿಮರ್ಶೆ ಮಾಡಿದಳು.

ಮಗಳ ನಡತೆ ವತ್ಸಲಮ್ಮನಿಗೆ ನುಂಗಲಾರದ ತುತ್ತಾಯಿತು.

“ಕೊನೆಗೂ ನಿನ್ನ ಬಾಯಿಂದ ಈ ಮಾತುಗಳನ್ನು ಕೇಳಬೇಕಾಯಿತೇ ” ಎಂದು ಕೊರಗಲಾರಂಭಿಸಿದಳು. ಒಬ್ಬರ ನೆರಳನ್ನು ಕಂಡರೆ ಮತ್ತೊಬ್ಬರಿಗಾಗದಂತಾಗುವಷ್ಟು ತಾಯಿ ಮಗಳ ಸಂಬಂಧ ಬೆಳೆದಿದ್ದಿತು

ಅವರ ಮನವನ್ನು ದಹಿಸುತ್ತಿದ್ದ ದುಃಖದ ದಾವಾಗ್ನಿ ವತ್ಸಲಮ್ಮನನ್ನೇ ಆಹುತಿಯನ್ನಾಗಿ ತೆಗೆದುಕೊಂಡಿತು ತಾಯಿಯ ಅಗಲಿಕೆಯಿಂದ ಮಂಜುಳೆಯ ಕ್ಷಾತ್ರ ಕುಗ್ಗಿತು. ತನಗಾಗಿದ್ದ ನಷ್ಟವನ್ನವಳು ಆಗ ಅರಿತಳು

ಅವಳಿಗೊಂದೇ ಸಮಾಧಾನ, 'ನಾನಿಂದು ವಿದ್ಯಾವತಿ ನನ್ನ ಜೀವನ ಕ್ಕೇನೂ ಯಾರ ಕೃಪಾಶ್ರಯವೂ ಬೇಕಾಗಿಲ್ಲ' ಈ ಧೈರ್ಯವೇ ಅವಳನ್ನು ಕಲಸಕ್ಕೆ ಸೇರುವಂತ ಮಾಡಿದ್ದಿತು

ಮಂಜುಳೆ ಸ್ಥಳೀಯ ಶಾಲೆಯೊಂದರಲ್ಲಿ ಉಪಾಧ್ಯಾಯನಿಯಾದಳು ಮಕ್ಕಳಿಬ್ಬರನ್ನೂ ಬೀಳ್ಕೊಡುವಾಗ ಸ್ವಾಮಿ, "ನಿಮ್ಮ ತಾಯಿಗೆ ವಾಗ್ದಾನ ಮಾಡಿದಂತೆ ನಿನ್ನ ಹೆಸರಿಗೆ ಮೂರು ಸಾವಿರ ರೂಪಾಯಿ ಹಾಕಿರುವೆ ಮಂಜೂ ನೀನು ಮದುವೆಯಾಗುವ ಇಚ್ಛೆಯಿದ್ದಲ್ಲಿ ಅದನ್ನು ಉಪ ಯೋಗಿಸಿಕೋ ಇಲ್ಲದಿದ್ದರೆ ನಿನ್ನ ಸಮಯಕ್ಕಾದರೂ ಆದೀತು – ಶ್ರೀಕಂಠ ಇನ್ನು ಮೇಲಾದರೂ ಹೀಗೆ 'ಅಣ್ಣಾವಂಟೀಗಾರ'ನಾಗಿ ಅಲೆಯುವುದನ್ನು ಬಿಟ್ಟು ಅಕ್ಕನಿಗೆ ಸಹಾಯವಾಗಬೇಕು ಏನಾದರೂ ಸಮಯವಾದರೆ ಕಾಗದ ಬರೀ ಮಂಜು ನನ್ನಲ್ಲೇನೂ ಸಂಕೋಚಪಡಬೇಡ"

"ತಬ್ಬಲಿಯಾದ ನಮಗೆ ನೀವೇ ದಿಕ್ಕು ಮಾವಯ್ಯಾ" ಎಂದು ಮಂಜುಳಾ ಕಣ್ಣೀರು ಹಾಕಿದಳು

"ಎಲ್ಲಾದರೂ ಕೆಲಸ ಹುಡುಕುತ್ತೇನೆ ಮಾವಯ್ಯಾ" ಎಂದು ಶ್ರೀಕಂಠ ತನ್ನ ನಿರ್ಧಾರ ಸೂಚಿಸಿದ

"ನೀನು ಓದುವ ಮನಸ್ಸು ಮಾಡಿದರೆ ನಾನು ಓದಿಸುತ್ತೇನಪ್ಪಾ. ಯೋಚಿಸು ನೋಡು. ದುಡಿಯಲು ಹೋದರೆ ನಿನಗೆ ಮೂವತ್ತರ ಮೇಲೆ ಯಾರೂ ಸಂಬಳ ಕೊಡುವುದಿಲ್ಲ – ಇಡೀ ಜೀವಮಾನವನ್ನೇ ಹಾಗೆ ಕಳೆಯಬೇಕಾಗುತ್ತದೆ"

"ನನ್ನ ಜೊತೆಯವರೆಲ್ಲಾ ಕಾಲೇಜು ಸೇರಿದ್ದಾರೆ ನಾನು ಈಗ ಹೈಸ್ಕೂಲು ಸೇರುವುದೆಂದರೆ – ನಾಚಿಕೆಯಾಗುತ್ತೆ"

"ವಿದ್ಯೆ ಕಲಿಯಲು ನಾಚಿಕೆಯಾಕೆ ಶ್ರೀಕಂಠಾ?"

ಶ್ರೀಕಂಠ ಮಾತನಾಡಲಿಲ್ಲ ಅವನ ಮನಸ್ಸನ್ನು ಗ್ರಹಿಸಿದವರಂತೆ ಸ್ವಾಮಿ,

"ಹೋಗಲಿ ಇನ್ನೇನಾದರೂ ಕಲಿ "

"ಕಲಾಶಾಲೆಗೆ ಸೇರುತ್ತೇನೆ ಮಾವಯ್ಯಾ "

"ನಿನ್ನಿಷ್ಟ – ಯಾವುವರಲ್ಲಿ ಅಭಿರುಚಿಯುವೆಯೋ ಅದನ್ನೇ ರೂಢಿಸಿಕೋ ಕಲಾಶಾಲೆಯುಲ್ಲೇನು ಕಲಿಸುತ್ತಾರೆ "

"ಚಿತ್ರ ಬರೆಯುವುದನ್ನು ಕಲಿಯುತ್ತೇನೆ ಮಾವಯ್ಯಾ – ನನ್ನ ಸ್ನೇಹಿತನೊಬ್ಬ ಬರೆಯುತ್ತಾನೆ ಅವನ್ನು ನೋಡಿದಾಗಭ್ಯ ನನಗೂ ಹುಚ್ಚು ಹಿಡಿದಂತಾಗಿದೆ "

"ನೀವಿಬ್ಬರೂ ಮುಂದೆ ಬರಬೇಕು ಶ್ರೀಕಂಠಾ – ನಿಮ್ಮ ತಾಯಿಯ ಹಂಬಲವೂ ಅದೇ ಆಗಿತ್ತು ಅವಳ ಆಸ ನೀವುಗಳು ಪೂರೈಸಬೇಕು " ಸ್ವಾಮಿ ಒಂದು ಮಾತ ಹೇಳಿ ಅಗಲಿದರು ಶ್ರೀಕಂಠ 'ಕಲಾಶಾಲೆ'ಯ ವಿದ್ಯಾರ್ಥಿಯಾದ ಅದರಲ್ಲಿ ಅವನ ಆಸಕ್ತಿ ಕಂಡು ಮಂಜುಳೆಗೂ ಸಂತೋಷವಾಯಿತು

"ಈಗಲಾದರೂ ಬುದ್ಧಿ ಬಂತಲ್ಲಾ" ಎಂದು ನೆಮ್ಮದಿಯ ಉಸಿರು ಬಿಟ್ಟಳು

ತಾಯಿಯ ಸಾವಿನಿಂದ ಕೆಲವು ದಿನ ವಾತಾವರಣ ಕಲುಷಿತವಾಗಿದ್ದರೂ ಅದು ತಿಳಿಯಾಗಲು ಬಹಳ ಕಾಲ ಬೇಕಾಗಲಿಲ್ಲ

ಮಾತೃವಾಕ್ಯ ಪರಿಪಾಲಕನಾಗಿ ನರಸಿಂಹಯ್ಯ ಮೀನಾಕ್ಷಮ್ಮನನ್ನು ಧರ್ಮಪತ್ನಿಯನ್ನಾಗಿ ಸ್ವೀಕರಿಸಿದ ಮೀನಾಕ್ಷಮ್ಮ ಹೆಸರಿಗೆ ಪತ್ನಿಯಾಗಿದ್ದರೂ ಅವನ ಮನಸ್ಸು ಎಂದಿನಂತೆ ಮಂಜುಳೆಯ ಬಳಿಗೆ ಓಡುತ್ತಿದ್ದಿತು

ನರಸಿಂಹಯ್ಯ ತನಗೆ ಮಾಡಿದ ಅನ್ಯಾಯದಿಂದ ಮಂಜುಳೆ ಬೇಸತ್ತಿದ್ದರೂ, ವಿರಹತಾಪದಿಂದ ಅವನು ತನ್ನೆಡೆಗೆ ಓಡಿಬರುತ್ತಿದ್ದುದನ್ನು ಕಂಡು ಅವಳ ಮನಸ್ಸು ಕರಗಿಹೋಗುತ್ತಿದ್ದಿತು ಪ್ರೇಮದ ಅಮೃತ ವರ್ಷವನ್ನೇ ಸುರಿಸಿ ಅವನ ಮನಸ್ಸನ್ನು ಸಂತೋಷಪಡಿಸುತ್ತಿದ್ದಳು

"ಮದುವೆಯಾದರೇನಾಯಿತು ? ಅವರ ಹೃದಯದಲ್ಲಿನ ಸ್ಥಾನ ನನಗೆ ತಾನೇ ಮೀಸಲು ?" ಎಂದು ತನ್ನನ್ನೇ ವಂಚಿಸಿಕೊಳ್ಳಲೆತ್ನಿಸುತ್ತಿದ್ದಳು.

"ಅವಳಿಗೆ ಅನ್ಯಾಯವಾಗಲಿಲ್ಲವೇ ?" ಎಂದು ಮೀನಾಕ್ಷಮ್ಮನ ಪರ ಮನಸ್ಸು ವಕಾಲತ್ತು ವಹಿಸುತ್ತಿದ್ದಿತು

"ನಾನು ತ್ಯಾಗ ಮಾಡಿದರೂ ಇವರಿಗೆ ಸುಖ ಶಾಂತಿ ದೊರೆಯುವುದೇ ?"

"ಇಲ್ಲ ಖಂಡಿತಾ ಇಲ್ಲ"

"ಹಾಗಾದರೇಕೆ ನನ್ನದಾಗಿರುವ ವಸ್ತುವನ್ನು ಬೇರೊಬ್ಬರ ವಶ ಮಾಡಬೇಕು ?"

ತಾನು ಮಾಡುತ್ತಿರುವುದರಲ್ಲೇನೂ ತಪ್ಪಿಲ್ಲವೆಂದು ಮಂಜುಳೆ ಸಮಾಧಾನ ತಂದುಕೊಳ್ಳಲೆತ್ನಿಸುತ್ತಿದ್ದಳು

ಈ ವಿಚಾರದ್ವಂದ್ವಗಳಲ್ಲಿಯೇ ದಿನ ಉರುಳುತ್ತಿದ್ದಿತು ಮಂಜುಳೆ–ನರಸಿಂಹಯ್ಯನ ಸಂಬಂಧವೂ ಯಾವೊಂದು ಘರ್ಷಣೆಯೂ ಇಲ್ಲದೆ ಬೆಳೆದು ಬಂದಿತ್ತು.

೬

ಮಂಜುಳಗೆ ಮಾತುಕೊಟ್ಟಂತೇ ನರಸಿಂಹಯ್ಯ ಹೊರಡಲನುವಾದ ಮಗ ಹೊರಹೊರಟಿರುವುದನ್ನು ಕಂಡ ಪಾತಕ್ಕ, ಕಾಫಿ ಕೊಡುತ್ತಾ,

"ಹೊರಗೆ ಹೊರಟಿರುವೆಯಾ ಮಗೂ" ಎಂದರು

"ಹೂಂ ಸ್ವಲ್ಪ ಕೆಲಸವಿದೆ"

ಆ ಕೆಲಸವೇನೆಂಬುದನ್ನು ಪಾತಕ್ಕ ತಿಳಿದಿದ್ದರು

"ಬರುವುದು ಬೆಳಗ್ಗೆ ಆಗಬಹುದು"

ತಾಯಿಯ ಮಾತಿಗೆ ನರಸಿಂಹಯ್ಯ ನಿರುತ್ತರನಾದ

ಈ ದಿನ ಎಲ್ಲೂ ಹೋಗಬೇಡಪ್ಪ ಮನೆಗೆ ನೆಂಟರು ಬರುತ್ತಾರೆ."

"ಅದು ಯಾರಮ್ಮಾ ನನಗೆ ಗೊತ್ತಿಲ್ಲದವರು ?"

ಪಾತಕ್ಕ ನಕ್ಕರು ಇದೇನೋ ರಹಸ್ಯವಿದೆಯೆಂದು ನರಸಿಂಹಯ್ಯ ಕುರ್ಚಿಯ ಮೇಲೆ ಕುಳಿತ ತನ್ನ ಪಾಲಿನ ಕಾಫಿ ಕುಡಿಯುತ್ತಾ ಸುಮಿತ್ರ

"ಅಣ್ಣಾ ಇವತ್ತು ಚಿಕ್ಕಮ್ಮ ಬರ್‍ತ್ತಾಳೆ" ಎಂದಳು

"ನನಗೇ ತಿಳಿಯದ ಚಿಕ್ಕಮ್ಮ ಯಾರೇ ?"

ತಂದೆಗೆ ತಿಳಿಯದ ವಿಷಯ ತನಗೆ ತಿಳಿದಿದೆಯೆಂಬ ಹೆಮ್ಮೆಯ ನಗೆಯಿಂದ

"ನೋಡು ಬೇಕಾದ್ರೆ" ಎಂದಳು

"ಇದೇನಮ್ಮ ವಿಷಯ ?"

ಪಾತಕ್ಕ ಸಾವಧಾನವಾಗಿ, "ನಿನ್ನೆ ಹೇಳಿದೆನಲ್ಲಾ ಅವರು ಹುಡುಗೀನ

ಕರೆತಂದು ತೋರಿಸುತ್ತಾರಂತೆ – ದಿನ ಚೆನ್ನಾಗಿದೆ – ಇವತ್ತು ಬರ್ತೀವೀಂತ ತಿಳಿಸಿದರು ನಾನೂ ಒಪ್ಪಿದ್ದೇನೆ"

"ಮದುವೆಗೇನಮ್ಮ ಅವಸರವಾಗಿದ್ದದ್ದು ?"

"ಅವಸರವೇನೂ ಇಲ್ಲ ನನ್ನ ಕಣ್ಣೆದುರಿಗೇ ನಿಂದೂ ಒಂದು ದಾರಿ ಯಾದರೆ ನನಗೂ ಯೋಚನೆ ಇರುವುದಿಲ್ಲ"

ನರಸಿಂಹಯ್ಯನಿಗೆ ಬಗೆಹರಿಯಲಿಲ್ಲ ಇನ್ನೂ ದೂರವಿದೆಯಲ್ಲಾ– ಯೋಚಿಸಿವರಾಯ್ತು ಎಂದು ಒತ್ತಟ್ಟಿಗೆ ತಳ್ಳಿದ ಪ್ರಶ್ನೆಯು ಬೃಹದಾಕಾರ ತಳೆದು ನಿಂತಿತು ಮೌನ ತಳೆದಿದ್ದ ಮಗನಿಗೆ,

"ಇವತ್ತೊಂದು ದಿನ ನನ್ನ ಮಾತು ನಡೆಸಪ್ಪಾ ನಾಳೆಯಿಂದ ಎಲ್ಲಿಗೆ ಬೇಕಾದರೂ ಹೋಗು – ಎಷ್ಟು ಹೊತ್ತಿಗಾದರೂ ಬಾ – ನಾನೇನು ನಿನ್ನನ್ನು ದಂಡಿಸುವುದಿಲ್ಲ'

ತಾಯಿಯ ಹಿಂದೆ ಮಾಡಿದ ನಿರ್ಣಯಗಳು ತಾಯಿಯಮಾತು ಕುಳಿತಾಗ ಹಾರಿಹೋದವು 'ಅಮ್ಮ ಹೇಳಿದಂತ ಹುಡುಗಿಯನ್ನು ನೋಡಿ ಬೇಡ ಅಂತ ಕಳಿಸುವುದು' ಎಂದು ಸಮಾಧಾನ ತಂದುಕೊಂಡು ಮನೆ ಯಲ್ಲೇ ಉಳಿದ

ಮಗ ತಮ್ಮ ಮಾತಿಗೆ ಗೌರವಕೊಟ್ಟುದನ್ನು ಕಂಡು ಪಾತಕ್ಕನ ಹೃದಯ ಹಿಗ್ಗಿತು

ತಂದೆ ಮನೆಯಲ್ಲಿ ಉಳಿದುದನ್ನು ಕಂಡು ಸುಮಿತ್ರೆಯೂ ನಿಂತಳು ಅವಳನ್ನೇ ನೋಡುತ್ತಾ ನರಸಿಂಹಯ್ಯ,

"ಆಟಕ್ಕೆ ಹೋಗೋಲ್ಲವೇ ಸುಮಿ"

"ಹೊಸ ಲಂಗ ಹಾಕಿಕೊಂಡು ಮನೆಯಲ್ಲೇ ಇರು ಅಂತ ಅಜ್ಜಿ ಹೇಳಿ ದರು" ಎಂದು ಹೇಳಿದರೂ ವಾಸ್ತವವಾಗಿ ತನಗಾಗಿಯೇ ನಿಂತಳೆಂದು ತಿಳಿಯಿತು

"ಬಾ ಸುಮಿ ಎಷ್ಟು ಬಡವಾಗಿಹೋದೆಯೇ ?" ಎಂದು ಪ್ರೀತಿ ಯಿಂದ ಅವಳ ಮುಂಗುರುಳನ್ನು ನೇವರಿಸಿದ ಪಾತಕ್ಕ ಎಷ್ಟೇ ಪ್ರೀತಿ ಯಿಂದ ಕಾಣುತ್ತಿದ್ದರೂ ತಾಯಿಯಿಲ್ಲದ ಕೊರಗು ಆ ಮಗುವಿನ ಮುಖದ ಮೇಲೆ ಮೂಡಿದ್ದಿತು.

"ನನಗೆ ಬಳೆ, ಟೇಪು ತಂದುಕೊಡಲೇ ಇಲ್ಲ"

ಮಗುವಿಗೆ ತಾನು ಮಾತುಕೊಟ್ಟು ಮೋಸಮಾಡಿದೆನಲ್ಲಾ ಎಂದು ತನ್ನ ಮೇಲೇ ಕೋಪ ಬಂತು. ತಪ್ಪನ್ನು ತಿದ್ದುವವನಂತೆ,

"ಮರೆತುಬಿಟ್ಟೆ ಸುಮಿ. ಈ ದಿನ ತಗೆದುಕೊಡುತ್ತೇನೆ"

"ಅಣ್ಣಾ, ದಿನಾ ಹೀಗೆ ಮನೇಲಿರಣ್ಣಾ. ನೀನಿದ್ದರೆ ಚೆನ್ನಾಗಿರುತ್ತೆ"

"ಇರ್ತೀನಮ್ಮಾ"

"ಎಲ್ಲಿರ್ತೀಯಾ? ಇವತ್ತು ಅಜ್ಜಿ ಹೇಳಿದ್ದಕ್ಕೆ ಇದೀಯಾ"

"ಇನ್ನು ಮುಂದೆ ಹಾಗೆ ಮಾಡುವುದಿಲ್ಲ. ನಿನ್ನ ಜೊತೆಯಲ್ಲೇ ಇರುತ್ತೇನೆ - ಪಾರ್ಕಿಗೆ ಕರೆದುಕೊಂಡು ಹೋಗುತ್ತೇನೆ-ಎಲ್ಲಾ ಮಾಡುತ್ತೇನೆ-ಸರಿಯಾ!"

ತಂದೆಯ ಮಾತಿನಿಂದ ಸುಮಿತ್ರೆಯ ಮುಖ ಅರಳಿತು. ತಂದೆಯ ಜೊತೆ ಎಲ್ಲೆಲ್ಲಿ ಹೋಗಬೇಕೆಂಬುದನ್ನು ಅವಳು ಮನಸ್ಸಿನಲ್ಲಿ ಲೆಕ್ಕಹಾಕುತ್ತಿದ್ದಳು. ಹೊರಗೆ ಗಾಡಿಯ ಶಬ್ದವಾದುದನ್ನು ಕೇಳಿ ಓಡಿ ಬಂದು,

"ಅಣ್ಣಾ, ಅವರೆಲ್ಲಾ ಬಂದರು" ಎಂದು ಅಜ್ಜಿಗೂ ಸಮಾಚಾರ ತಿಳಿಸಿ, ಬಂದವರನ್ನು ಇದಿರುಗೊಳ್ಳುವಂತೆ ಹಜಾರದಲ್ಲಿ ನಿಂತಳು.

ನರಸಿಂಹಯ್ಯನೂ "ಬನ್ನಿ, ಬನ್ನಿ" ಎಂದು ಅತಿಥಿಗಳನ್ನು ಸ್ವಾಗತಿಸಿದ.

ಪಾತಕ್ಕ ಹೆಂಗಸರನ್ನು 'ಇಲ್ಲೇ ಬನ್ನಿ' ಎಂದು ನಡುಮನೆಗೆ ಕರೆದರು.

ನರಸಿಂಹಯ್ಯನಿಗೆ ಬಂದವರ ಪರಿಚಯವಿರಲಿಲ್ಲ. ಅದನ್ನು ತಿಳಿದ ನಂಜುಂಡಯ್ಯ ತಾವೇ ಮಾತು ತೆಗೆದರು.

"ನಿಮ್ಮ ಮೊದಲ ಕುಟುಂಬ ವಿಶಾಲಾಕ್ಷಮ್ಮ ನನಗೆ ಹತ್ತಿರದ ಸಂಬಂಧಿ. ಒಳ್ಳೆಯ ಹೆಣ್ಣು ಮಗಳು - ವಿಷಯ ತಿಳಿದು ಬಹಳ ದುಃಖವಾಯಿತು"

"ಏನು ಮಾಡುವುದು? ಆಯುಷ್ಯ ಬರೆಯಲು ಸಾಧ್ಯವೇ?" ಎಂದು ನಂಜುಂಡಯ್ಯನ ಸ್ನೇಹಿತರು ಶ್ರೀನಿವಾಸಯ್ಯ ಬಾಯಿ ಹಾಕಿದರು.

ತನ್ನ ದುಃಖ ಸೂಚಿಸಿ ನರಸಿಂಹಯ್ಯ ಮೌನ ಧರಿಸಿದ.

"ಇಲ್ಲಿದ್ದ ಹುಡುಗಿ ಯಾರು? ನಿಮ್ಮ ಮಗಳೇ?" ನಂಜುಂಡಯ್ಯ ಕೇಳಿದರು.

"ಹೌದು"

"ಹುಡುಗಿ ಮುದ್ದಾಗಿದೆ ಹೆಸರೇನೋ?"

"ಸುಮಿತ್ರಾ"

"ಬಾ ತಾಯಿ ಇಲ್ಲಿ" ಶ್ರೀನಿವಾಸಯ್ಯ ಸುಮಿತ್ರೆಯನ್ನು ಕರೆದರು ಸುಮಿತ್ರೆ ಇಣಿಕಿನೋಡಿ ಓಡಿದಳು

ಒಳಗೆ ಹೆಂಗಸರ ಮಾತುಕತೆ ನಡೆದಿತ್ತು

"ಯಾವಾಗ ಬಂದಿರಿ? ಹಾಸನದಲ್ಲಿ ತಾನೇ ನೀವಿರೋದು? ಹಾಗಂತ ಮಾನಾ ಹೇಳಿದ್ದಳು"

"ಹೌದೂಂದ್ರೆ ನಾವು ವಾರದ ಹಿಂದೆಯೇ ಬರಬೇಕೂಂತ ಇದ್ದೆವು ನಿಮ್ಮ ಕಾಗದ ನೋಡಿಕೊಂಡು ಹೋಗೋಣಾಂತ ಇವರು ಹೇಳಿದರು ನಿನ್ನೆ ನಿಮ್ಮ ಕಾಗದ ಬಂದ ಮೇಲೆ ಹೊರಟು ಮಧ್ಯಾಹ್ನವೇ ಬಂದೆವು"

"ಊಟಕ್ಕೇನು ಮಾಡಿದಿರಿ?"

"ಇವರ ಸ್ನೇಹಿತರು ಇದೇ ಊರಿನಲ್ಲಿದಾರೆ ಅವರ ಮನೆಯಲ್ಲಿಳಿದು ಕೊಂಡಿದ್ದೇವೆ"

"ನಿಮ್ಮ ಹೆಸರೇನೂಂದ್ರೀ?"

"ಗುಂಡಮ್ಮ ಇವಳೇ ಹುಡುಗಿ – ನಮ್ಮ ಯಜಮಾನರಿಗೆ ಸೋದರ ಮಾವನ ಮಗಳಾಗಬೇಕು"

"ಸ್ವಂತ ಸೋದರಮಾವನ ಮಗಳೇ?"

"ದೊಡ್ಡಪ್ಪನ ಮಗಾನ್ನಿ – ಆದರೂ ರಾಜಮ್ಮ ನಮ್ಮ ಮನೆ ಮಗಳಂತೇ ಇರುವಳು"

"ಹೆಸರು ರಾಜಮ್ಮ ಅಂತಲೇ?"

"ಹೂಂ ರಾಜಲಕ್ಷ್ಮಿ"

"ಅಯ್ಯೋ ನನ್ನ ಬುದ್ಧಿಗೆ ಏನು ಬಂತು? ಬಂದವರಿಗೆ ಒಂದು ಲೋಟ ನೀರೂ ಸಹ ಕೊಡದೆ ಮಾತಿಗೆ ಕೂತುಬಿಟ್ಟೆ" ಎಂದು ಪಾತಕ್ಕ ಎದ್ದು,

"ಮಗೂ ಸ್ವಲ್ಪ ಬರ್ತೀಯಾ" ಎಂದರು.

ಗಂಡಸರಿಗೆ ಮಗನ ಕೈಲಿ ಕೇಸರೀಭಾತ್, ಬೊಂಡಾ, ಕಾಫಿ ಕಳುಹಿಸಿ ಹೆಂಗಸರಿಗೂ ಇಟ್ಟರು

"ಇದೆಲ್ಲಾ ಯಾಕೇಂದ್ರೇ" ಎಂದು ಗುಂಡಮ್ಮ ಪೀಠಿಕೆ ಹಾಕಿದರು

"ಇರಲಿ – ತೆಗೆದುಕೊಳ್ಳಿ" ಪಾತಕ್ಕ ಉಪಚಾರ ಹೇಳಿ,

"ನೀನೂ ಇಲ್ಲೇ ತಿನ್ನುವಿಯಂತೆ ಬಾ ಸುಮಾ" ಎಂದು ಮೊಮ್ಮಗಳಿಗೂ ತಿಂಡಿ ಕೊಟ್ಟರು

"ತಿನ್ನು" ಎಂದು ರಾಜಮ್ಮನಿಗೆ ಸನ್ನೆ ಮಾಡಿ ಗುಂಡಮ್ಮ ಬೋಂಡಕ್ಕೆ ಕೈಹಚ್ಚಿ ಸುಮಿತ್ರೆಯನ್ನು "ನಿನ್ನ ಹೆಸರೇನಮ್ಮಾ" ಎಂದು ಕೇಳಿದರು

"ಸುಮಿತ್ರಾ"

"ಬಾಯಲ್ಲಿರುವುದನ್ನು ಮುಗಿಸಿ ಮಾತಾಡು" ಎಂದು ಪಾತಕ್ಕ ನಕ್ಕರು

"ಮಗು ತುಂಬಾ ಸೂಟಿಯಾಗಿದೆ" ಗುಂಡಮ್ಮ ಮೆಚ್ಚಿಗೆ ಸೂಚಿಸಿದರು

"ಹಣೆಯುಬರಹ ತಪ್ಪಿಸೋದಕ್ಕೆ ಯಾರಿಂದ ಸಾಧ್ಯ ಹೇಳಿ? ಈ ವಯಸ್ಸಿಗೇ ತಬ್ಬಲಿತನ ಪ್ರಾಪ್ತಿಯಾಯಿತು" ಎಂದು ತಮ್ಮ ಸೊಸೆಯನ್ನು ನೆನೆದು ದುಃಖಿಸಿದರು ಕಣ್ಣಂಚಿನ ಹನಿ ಒರೆಸಿಕೊಳ್ಳುತ್ತಾ

"ಅವಳೂ ಬಹಳ ಒಳ್ಳೆಯ ಹೆಣ್ಣುಮಗಳೂಂದ್ರೆ ಒಂದು ದಿನ ಒಬ್ಬರನ್ನು ನಿಂದಿಸಿಲ್ಲ ಇದ್ದ ನಾಲ್ಕು ದಿನ ಮರ್ಯಾದೆಯಾಗಿ ಬಾಳಿ ಹುಟ್ಟಿದ ಮನೆ – ಸೇರಿದ ಮನೆ – ಎರಡಕ್ಕೂ ಕೀರ್ತಿ ತಂದಳು"

"ಅಷ್ಟಲ್ಲದೆ ಏನೂಂದ್ರೆ ಹೆಣ್ಣು ಹುಟ್ಟಿ 'ಹಿಂದೇಳು ಕುಲ – ಮುಂದೇಳು ಕುಲ' ಪವಿತ್ರ ಮಾಡಿತೂಂತ ಗಾದೆಯೇ ಇದೆ ಯಾವ ಐಶ್ವರ್ಯಕ್ಕೆ ಹೊಡೆದಾಡಬೇಕು ಹೇಳಿ?"

ಪಾತಕ್ಕ ಸಮಾಧಾನ ಮಾಡಿಕೊಂಡು, "ನಿಮಗೆಷ್ಟು ಮಕ್ಕಳು?"

"ಇದಾರಮ್ಮ – ಮೂರು ಹೆಣ್ಣು, ಒಂದು ಗಂಡು – ಜೊತೆಗೆ ಇವಳೇ ನನ್ನ ಹಿರಿಯ ಮಗಳು" ಎಂದು ರಾಜಮ್ಮನನ್ನು ತೋರಿಸಿದರು

"ಈ ಹುಡುಗೀ ಒಬ್ಬಳೇ ಮದುವೆಗಿರುವುದು?"

"ಹೌದೂಂದ್ರೆ ಒಬ್ಬಳೇ ಮಗಳು – ಆದರೆ ಇವರು ಪಟ್ಟ ಪಾಡು

ಕೊಲ್ಲೋ ಶತ್ರುವಿಗೂ ಬೇಡ ನೋಡಿ" ಎಂದು ಗುಂಡಮ್ಮ ರಾಜಮ್ಮನ ವೃತ್ತಾಂತ ಅರುಹಿದರು

"ರಾಜು ತಂದೆ – ಹೇಳಿದೆನಲ್ಲಾ – ಇವರ ಸೋದರಸಂಬಂಧ – ಅವರಿಗೆ ಹಾಸನದ ಹತ್ತಿರ ಒಂದು ಹಳ್ಳಿಯಲ್ಲಿ ಶಾನುಭೋಗಿಕೆಯಿತ್ತು ಆಗೇನೋ ಕಾಲಸ್ಥಿತಿ ಚೆನ್ನಾಗೇ ಇದ್ದಿತೆಂದು ಹೇಳಿ. ರಾಜು ತಾಯಿಯೂ ಜಾಣೆ – ಸುಖವಾಗಿಯೇ ಸಂಸಾರ ಸಾಗುತ್ತಿದ್ದಿತು – ಕೈಯಲ್ಲಿ ನಾಲ್ಕು ಕಾಸೂ ಓಡಾಡುವಂತಾಯಿತು - ದಾಯಾದಿ ಮತ್ಸರ ಪಾಂಡವರಿಗೇ ತಪ್ಪಲಿಲ್ಲ. ಇನ್ನು ಮನುಷ್ಯಮಾತ್ರದವರಿಗೆ ಕೇಳಬೇಕೇ? ಇವರ ಉನ್ನತಿ ಕಂಡು ದಾಯಾದಿಗಳು ಕರುಬಿದರು – ಹೇಗಾದರೂ ಮಾಡಿ ಇವರನ್ನು ಉರುಳಿಸಬೇಕೆಂದು ಹಠ ತೊಟ್ಟರು – ಮೊದಲೇ ಭೂಮಿಕಾಣಿಯ ವಿಷಯವಾಗಿ ಹೊಗೆಯಾಡುತ್ತಿದ್ದ ಬೆಂಕಿ ಈಗ ಉರಿಯಲಾರಂಭಿಸಿತು – ಒಂದೇ ಊರಿನಲ್ಲಿ ಪಾರ್ಟಿ ಕಟ್ಟಿದರು – ಅವನಂತೂ ಮಹಾ ಪ್ರಾಕಟಿ – ದ್ವೇಷವನ್ನು ಕಟ್ಟಿಕೊಂಡರೆ ಏನು ಮಾಡುವುದಕ್ಕೂ ಹೇಸುತ್ತಿರಲಿಲ್ಲ. ರಾಜು ತಂದೆ ಬಹಳ ಒಳ್ಳೆಯ ಮನುಷ್ಯನಾದ್ದರಿಂದ ಊರಿನ ಹಿರಿಯರ ಬೆಂಬಲ ಇವರಿಗಿತ್ತು – ಮೂರು ಎಕರೆ ತೆಂಗಿನ ತೋಟದ ನೆಪದಿಂದ ಕೋರ್ಟಿಗೆ ಹತ್ತಿದ್ದ ತನಗೆ ಅಪಜಯವಾಗುವುದೆಂದು ತಿಳಿದಾಗ ರಾಜು ತಂದೆಯನ್ನು ಕೊಲೆ ಮಾಡಿಸಿಬಿಟ್ಟ."

"ಹಾಂ"

"ಹೌದು ಪಾತಕಿ. ಆಗ ರಂಗಮ್ಮ ಇವರಿಗೆ ಬರೆದರು. ವಿಷಯ ತಿಳಿದ ಮೇಲೆ ಯಜಮಾನರೇ ಹೋಗಿ ಕರ್ಮಾಂತರಗಳನ್ನೆಲ್ಲಾ ಮುಗಿಸಿ, ಇದ್ದ ಒಂದು ಮನೆ ಮಾರಿ ಈ ಊರೇ ಬೇಡಾಂತ ಕೈತೊಳೆದು ರಂಗಮ್ಮನೊಡನೆ ಬಂದರು"

"ಪಾಪ ಪಾಪ"

"ಅವರಲ್ಲಿಗೂ ಬಿಡಲಿಲ್ಲಾಂತ್ರೆ. ಇವರ ಸ್ವಯಾರ್ಜಿತ ಸ್ವತ್ತನ್ನೆಲ್ಲಾ ದಕ್ಕಿಸಿಕೊಂಡರು. ಇನ್ಷೂರೆನ್ಸ್ ಹಣ ಒಂದೇ ರಂಗಮ್ಮನಿಗೆ ಬಂದುದು. ಆ ಹಣವನ್ನೇ ರಾಜುವಿನ ಮದುವೆಗೆಂದು ಮುಡುಪಾಗಿಟ್ಟಿರುವಳು.

ನೀವು ದೊಡ್ಡ ಮನಸ್ಸು ಮಾಡಿ ತಂದುಕೊಂಡರೆ ಚೆನ್ನಾಗಿಯೇ ಮದುವೆ ಮಾಡಿಕೊಡುತ್ತೇನೆ"

"ಏನು ಓದಿರುವೆ ತಾಯೀ."

"ಓದೇನೂ ಇಲ್ಲಾಂತ್ರ ಕನ್ನಡ ಚೆನ್ನಾಗಿ ಓದುತ್ತಾಳೆ ನಮ್ಮ ಮನೆಯಲ್ಲಿ ಯಾರಿಗೂ ವಿದ್ಯೆ ಇಲ್ಲ"

"ಸಂಗೀತ ಬರತ್ತ್ಯೆ"

"ಆ ನಾಜೂಕೆಲ್ಲಾ ಏನೂ ಕೇಳಬೇಡಿ ಕೆಲಸ – ಬದುಕು ಚೆನ್ನಾಗಿ ಮಾಡ್ತಾಳೆ – ಸಂಸಾರನಡಿಗತ್ತಿಯರು ಸಮಗ್ರಕೆ ಹೇ? ಆ ಥಳಕೆಲ್ಲಾ?"

"ಈಗಿನ ಹುಡುಗರು ಇವನ್ನೇ ಕೇಳ್ತಾರ ಗುಂಡಮ್ಮ ಆ ಮಾತೆಲ್ಲಾ ನಮ್ಮ ಕಾಲಕ್ಕೇ ಆಗಿಹೋಯಿತು"

ಗುಂಡಮ್ಮ ಸಪ್ಪ ಮುಖ ಹಾಕಿಕೊಂಡಿರುವುದನ್ನು ನೋಡಿ,

"ಸುಮ್ಮನೆ ಕೇಳಿದೆ ಸಂಗೀತ – ಸಾಹಿತ್ಯ ಕಟ್ಟಿಕೊಂಡೇನು ಅರೆದು ಕುಡಿಯಬೇಕೆ? ಮಾನಾ ಮರ್ಯಾದೆ ಮುಖ್ಯ" ಎಂದು ತೀರ್ಪನ್ನಿತ್ತರು

ಹೆಂಗಸರ ಮಾತು ಎಷ್ಟು ಹೊತ್ತಿಗೂ ಮುಗಿಯದಿರುವುದನ್ನು ಕಂಡ ನಂಜುಂಡಯ್ಯ,

"ನಾಲ್ಕು ಹೆಂಗಸರು ಸೇರಿಬಿಟ್ಟರೆ ಸರಿ – ಇವರಿಗೆ ಗಂಟೆಗಳ ಲೆಕ್ಕವಿಡ ಬಾರದು – ದಿನದ ಲೆಕ್ಕ ಸರಿ" ಎಂದು ಎದ್ದುಬಂದರು

"ಸ್ವಲ್ಪ ಬರ್ತೀಯಾ"

ಗಂಡನ ಜೊತೆಗೆ ಬಂದ ಗುಂಡಮ್ಮ "ಏನೂಂದ್ರೀ ನಿಮ್ಮ ಮಾತು ಮುಗಿಯಿತೇ"

"ನಮ್ಮದೇನಿದೆ ಮಾತಾಡುವುದಕ್ಕೆ? ಎಷ್ಟು ಹೊತ್ತಾದರೂ ಹೀಗೇ ಕೂತಿರೋದೇ ಅಥವಾ ಹುಡುಗೀನ ತೋರಿಸ್ತೀರೋ"

"ಬಂದುಬಿಟ್ಟೆ"

"ನೀನೊಬ್ಬಳೇ ಬರಬೇಡ ರಾಜೂನೂ ಬರಲಿ."

"ಸಾಕು ಸುಮ್ಮನಿರಿ ಸದ್ಯಕ್ಕೆ" ಎಂದು ಗುಂಡಮ್ಮ ನಡುಮನೆಗೆ ಬಂದರು.

ಪಾತಕ್ಕ ಹಜಾರದಲ್ಲೊಂದು ಚಾಪೆ ಹಾಕಿಸಿ,

"ಅಲ್ಲೇ ಹೋಗೋಣ ಬನ್ನಿ" ಎಂದರು

ಗುಂಡಮ್ಮ, ರಾಜಲಕ್ಷ್ಮಿ, ಸುಮಿತ್ರಾ ಚಾಪೆಯ ಮೇಲೆ ಕುಳಿತರು ಪಾತಕ್ಕ ನಡುಮನೆಯ ಹೊಸ್ತಿಲ ಹತ್ತಿರ ಕೂತರು

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ ವರ್ಷಗಳ ಪ್ರಥಮ ಸಂದರ್ಶನ ಮುಗಿದ ಮೇಲೆ, ಶ್ರೀನಿವಾಸಯ್ಯ

"ಹಾಡೇನಾದರೂ ಬರುತ್ತದೆಯೇನಮ್ಮಾ" ಎಂದರು ರಾಜು ತಲೆಯಲ್ಲಾಡಿಸಿದಳು

"ಬೇಡಿ ಬಿಡಿ ಈಗ ಯಾಕೆ ಅದೆಲ್ಲಾ" ಎಂದು ಪಾತಕ್ಕ ರಾಜುವಿನ ಪರ ವಹಿಸಿದರು

ನಂಜುಂಡಯ್ಯ ವಿನೀತನಾಗಿ, 'ದಯವಿಟ್ಟು ದೊಡ್ಡ ಮನಸ್ಸಿನಿಂದ ನಮ್ಮ ಹುಡುಗಿಯನ್ನ ಸ್ವೀಕರಿಸಬೇಕು'

"ಆಗಲಿ ಋಣಾನುಬಂಧ ಎಲ್ಲೆಲ್ಲಿ ಕೂಡಿಸುತ್ತದೋ" ಎಂದರು ಪಾತಕ್ಕ

"ಹಾಗಲ್ಲಾ-ಮಾನಾ ಅಭಿಮಾನ ಇದೇ ಆಗಿತ್ತು" ನಂಜುಂಡಯ್ಯ ಹೇಳಿದರು

ಪಾತಕ್ಕ ಮಗನ ಮುಖ ನೋಡಿದರು ಅಲ್ಲಿ ಯಾವ ಭಾವನೆಯೂ ಇರಲಿಲ್ಲ – ಬಂದವರ ಮುಖಭಂಗ ಮಾಡಲು ಪಾತಕ್ಕನಿಗೆ ಮನಸ್ಸು ಬರಲಿಲ್ಲ – ಮೇಲಾಗಿ ಗಂಡನ ಕೋರಿಕೆಯೂ ಇದೇ ಆಗಿರಲಿಲ್ಲವೇ ? — ಅವಳ ಮಾತು ನಡೆಸಿಕೊಡಬೇಕು – ಹುಡುಗಿಯೂ ಲಕ್ಷಣವಾಗಿದ್ದಾಳೆ – ಮಗು ಒಪ್ಪದೇ ಏನು ? – ಒಪ್ಪದಿದ್ದರೆ ಅವನನ್ನು ಒಪ್ಪಿಸುವುದೇನು ಮಹಾ ಕಷ್ಟವೇ ? ಎಂದುಕೊಂಡ

"ಅಗತ್ಯವಾಗಿ ಆಗಲಪ್ಪಾ"

ತಾಯಿಯ ಮಾತು ನರಸಿಂಹಯ್ಯನನ್ನು ಬಡಿದು ಎಚ್ಚರಿಸಿತು ಕಕ್ಕಾಬಿಕ್ಕಿಯಾಗಿ ಎಲ್ಲರ ಮುಖ ನೋಡಿದ ತನ್ನ ಮನಸ್ಸಿನಲ್ಲಿರುವುದನ್ನು ತಿಳಿಸಲು ಯತ್ನಿಸಿದ-ಮಾತೇ ಹೊರಡಲಿಲ್ಲ

ಪಾತಕ್ಕನ ಮಾತಿನಿಂದ ನಂಜುಂಡಯ್ಯ ಪ್ರಸನ್ನರಾದರು ತಾವು ಬಂದ ಕಾರ್ಯ ಸಾಧಿಸಿತೆಂಬ ಹರ್ಷದಿಂದ

"ರಾಜು ಎದ್ದು ನಿಮ್ಮತ್ತೆ, ಯಜಮಾನರಿಗೆ ನಮಸ್ಕಾರ ಮಾಡಮ್ಮಾ" ಎಂದರು

ರಾಜು ಅವರ ಮಾತಿನಂತೇ ನಮಸ್ಕರಿಸಿ ಆಶೀರ್ವಾದ ಪಡೆದಳು

ಪಾತಕ್ಕ ಸುಮಿತ್ರೆಯ ಕೈಲಿ ಗುಂಡಮ್ಮ, ರಾಜು ಇಬ್ಬರಿಗೂ ಹೂವು, ಎಲಿಡಿಕೆ, ತೆಂಗಿನಕಾಯಿ ಕೊಡಿಸಿದರು

ಹೊರಡುವಾಗ ಗುಂಡಮ್ಮನೂ ನಮಸ್ಕಾರಮಾಡಿ ಪಾತಕ್ಕನ ಹೃದಯ ಗೆದ್ದರು ಪಾತಕ್ಕ ಮನಸ್ಸಲ್ಲೇ 'ನಡತೆವಂತೆ' ಎಂದುಕೊಂಡರು

ಅತಿಥಿಗಳು ಹೊರಟಕೂಡಲೇ ನಂಜುಂಡಯ್ಯ ತಾಯಿಯನ್ನು ಕೇಳಿದ

'ಇದೇನಮ್ಮ ನೀನು ಮಾಡಿದ ಕೆಲಸ?'

"ನಾನೇನು ಮಾಡಿದೆನೋ?"

"ಅಲ್ಲ ನನ್ನ ಅಭಿಪ್ರಾಯವನ್ನು ಕೇಳದೇ ಒಪ್ಪಿಗೆ ಕೊಟ್ಟುಬಿಟ್ಟಿಯಲ್ಲ"

'ಇದರಲ್ಲೇನು ತಪ್ಪು"

"ಮದುವೆ ಆಗೋನು ಯಾರು?"

"ಕರೆದು ಹೆಣ್ಣು ಕೊಡುತ್ತೇನಿ ಅಂದ್ರೆ ನಿನಗೇನು ಗುನುಗು?"

"ನಿನ್ನ ಮಾತು ಚೆನ್ನಾಗಿದೆ ಅಮ್ಮಾ ಮದುವೆ ಆಗೋನು ನಾನು–ನನ್ನ ಮಾತಿಗೆ ಬೆಲೆಯೇ ಬೇಡವೇ?"

"ಈಗೇನು ಬೇಡಾಂತ ಹೇಳ್ತೀಯಾ?"

"ಹೂಂ"

"ಆಗಲೇ ಹೇಳಬೇಕಾಗಿತ್ತು"

"ನೀನು ಯಜಮಾನ್ರ ವಹಿಸಿಕೊಂಡು ಮಾತಾಡಿದ ಮೇಲೆ ನಾನೇನು ಹೇಳಲಿ ಹೇಳು?"

"ನಿಜವಾಗಿ ನಿನಗೆ ಮನಸ್ಸಿಲ್ಲವೇ?"

"ಇಲ್ಲ"

"ಹಾಗಾದರೆ ಮನೆಯಲ್ಲೇಕೆ ಉಳಿದೆ" – ನಾನು ಒಪ್ಪಿಗೆಕೊಟ್ಟಾಗ ಏಕೆ ಬಿಮ್ಮಗೆ ಬಿಗಿದಿದ್ದೆ – ಈ ಮಾತೆಲ್ಲಾ ಎಲ್ಲಿ ಹೋಗಿತ್ತು ?"

ನರಸಿಂಹಯ್ಯ ಸುಮ್ಮನಾದ

"ನೋಡು ಮಗೂ ನಾನೇನೂ ನಿನಗೆ ಕೆಟ್ಟದ್ದನ್ನು ಮಾಡುತ್ತಿಲ್ಲ ನನ್ನಾ ಹಂಬಲವೂ ಇದೇ ಆಗಿತ್ತು – ಅದಕ್ಕೆ ಆ ಹುಡುಗಿಯನ್ನ ಒಪ್ಪಿದೆ. – ಹುಡುಗಿಯೂ ಕಂಡೆನಾಡುವ ಹಾಗೇನೂ ಇಲ್ಲ – ಲಕ್ಷಣವಾಗಿ ದಾಳೆ – ನಡತೆವಂತ ಜನ – ನೀನೂ ನಾಲ್ಕು ಜನರಂತೆ ಬಾಳಿ ಬದುಕಿ ಮನೆಯ ಹೆಸರುಳಿಸಬೇಕೆಂದು ನಾನಂದು ಮಾತುಕೊಟ್ಟೆ ನೀನು ಒಪ್ಪಿ ಮದುವೆಯಾಗು ಮುಂದಕ್ಕೆ ಎಲ್ಲಾ ಒಳ್ಳೆಯದಾಗುತ್ತದೆ'

ತಾಯಿಯ ಹಟದ ಮುಂದೆ ತನ್ನದೇನೂ ಆಟ ನಡೆಯುವುದಿಲ್ಲವೆಂದು ಕೊಂಡು ನರಸಿಂಹಯ್ಯ ಸುಪುತ್ರನು ಕೈಬಿಡದೆ ಹೊರಟ

ಶ್ರೀನಿವಾಸಯ್ಯನವರ ಮನೆಯಲ್ಲೂ ಇದೇ ಮಾತುಕಥೆ ನಡೆದಿತ್ತು ಗುಂಡಮ್ಮ ಶ್ರೀನಿವಾಸಯ್ಯನವರ ಕುಟುಂಬ ಸುಬ್ಬಮ್ಮನವರಿಗೆ ವಿವರವನ್ನೆಲ್ಲಾ ತಿಳಿಸಿ,

'ಇಷ್ಟು ದಿನ ನಮ್ಮ ರಾಜು ಬೆಳೆದು ನಿಂತದ್ದಕ್ಕೂ ಸಾರ್ಥಕವಾಯಿತು, ಸುಬ್ಬಮ್ಮನವರೇ ಹುಡುಗನೂ ಲಕ್ಷಣವಾಗಿದ್ದಾನೆ ಜನವಂತೂ ಚಿನ್ನದಂಥವರು ಪಾತಕ್ಕನೇ ಸಾಕು ರಾಜು ಪುಣ್ಯಮಾಡಿದ್ದಳು ಇಂಥಾ ಮನೆ ಸೇರುವುದಕ್ಕೆ" ಎಂದು ಹೊಗಳಿದರು

"ಎಲ್ಲಾ ಸರಿ ಮಗು ಒಂದಿದೆ ಎಂಟರಲ್ಲಾ ?"

"ಅದಕ್ಕೇನು ಮಾಡುವುದು ಹೇಳಿ ? ಮೊದಲನೇ ವರನಿಗೆ ಕೊಡಬೇಕೆಂದರೆ ಹೇಗೆ ಸಾಧ್ಯ ಆಗುತ್ತೆ? ನಾಳೆ ರಾಜುವಿನ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳ ಜೊತೆ ಇದೂ ಒಂದು"

"ಅದು ನಿಜ. ಗುಣ – ನಡತೆ ಮುಖ್ಯ" ಎಂದು ತಮ್ಮ ಅಂತ್ಯ ನಿರ್ಧಾರ ಸೂಚಿಸಿ ಸಂತೋಷ ವ್ಯಕ್ತಪಡಿಸಿದರು

ಮೂರನೆಯ ದಿನವೇ ನಂಜುಂಡಯ್ಯ ಪಾತಕ್ಕನನ್ನು ಕಂಡು,

"ನಾವು ಈದಿನ ಹೊರಡುತ್ತೇವೆ ಅಜ್ಜಿ. ಊರಿಗೆ ಹೋದಮೇಲೆ ಒಳ್ಳೆಯ ದಿನ ತಿಳಿಸಿ ಕಾಗದ ಹಾಕುತ್ತೇನೆ. ಲಗ್ನಪತ್ರಿಕೆ ಶಾಸ್ತ್ರಮುಗಿದು

ಹೋಗಲಿ ಈ ವೈಶಾಖದಲ್ಲೇ ಮದುವೆಯನ್ನೂ ಮುಗಿಸಿಬಿಡಬೇಕೆಂದಿದ್ದೇನೆ" ಎಂದರು

"ಲಗ್ನಪತ್ರಿಕೆ ಯಾಕೆ? ಅದಕ್ಕೂ ಹಿಂದೆ ಮದುವೆಯಲ್ಲೇ ಆ ಶಾಸ್ತ್ರ ಮುಗಿಸಿಬಿಡೋಣ"

"ನಿಮ್ಮಿಷ್ಟ"

"ಸ್ವಾಮಿ ಅಂತ್ರೆ ಬರೆಕ ಪತ್ತ್ರ ಆಗಲಿಲ್ವೇ"

"ನಾವೆಲ್ಲಾ ಅದೇ ಮಾಡಿಕೊಂಡಿದ್ದೇವೆ – ಜಾತಕ ಏನಾದರೂ ನೋಡಿಸಬೇಕೇ?"

"ಬೇಡ್ವೇ ಅವೆಲ್ಲಾ ಯಾಕೆಂದ್ರೇ – ಮನೋನಿಷ್ಟ ಯವೇ ನಿಷ್ಟಯ"

ನಂಜುಂಡಯ್ಯನಿಗೆ ನೆಮ್ಮದಿಯಾಯಿತು ಮನಸ್ಸಿನಲ್ಲೇ ವಾತಕ್ಕನಿಗೆ ವಂದಿಸಿ, "ನಿಮ್ಮ ಮಗನಿಗೆ ತಿಳಿಸಿಬಿಡಿ ಅಜ್ಜಿ"

"ಕುಂತ್ಕೊಳ್ಳಿ ಇನ್ನೇನೂ ಅವನು ಬರುವ ಹೊತ್ತು"

"ಇಲ್ಲ ಹೋಟಲ್ದ ಹೋಗಿ, ರೈಲಿಗೆ ಹೋಗಬೇಕು ಬರುತ್ತೇನೆ"

ನಂಜುಂಡಯ್ಯ ಸುಮಿತ್ರಮ್ಮ ಕೈಗೆ ತಿಂಡಿ, ಹೂವಿನ ಪೊಟ್ಟಣ ಕೊಟ್ಟು, ಹೊರಟರು

## ೭

ನಂಜುಂಡಯ್ಯ ಹಾಸನದಲ್ಲಿ ಸ್ಟೇಷನರಿ ಅಂಗಡಿಯ ಮಾಲೀಕರಾಗಿದ್ದರು. ಸಣ್ಣದಾಗಿ ತೆರೆದ ಅಂಗಡಿ, ನಂಜುಂಡಯ್ಯನ ಸರಳ ನಡೆನುಡಿಯಿಂದ, ಪ್ರಾಮಾಣಿಕತನದಿಂದ ದೊಡ್ಡದಾಗಿ ಪರಿವರ್ತನಗೊಂಡಿದ್ದಿತು. ಒಳ್ಳೆಯ ಸಾಮಾನನ್ನು ನಿಯತವಾದ ಬೆಲೆಗೆ ಗಿರಾಕಿಗಳಿಗೆ ಒದಗಿಸುವರೆಂದು ಪ್ರತೀತಿಯಾಗಿದ್ದಿತು. ನಯವಾದ ಮಾತುಗಳಿಂದ ಬೇಡದ ಸಾಮಾನುಗಳನ್ನೂ ಗಿರಾಕಿಗೆ ಅಂಟಿಸುವ ಕಲೆ ನಂಜುಂಡಯ್ಯನಿಗೆ ಕರಗತವಾಗಿದ್ದಿತು. ನಂಜುಂಡಯ್ಯನ ಉನ್ನತಿ ಕಂಡು ಅಸೂಯೆಪಡುವವರೂ ಇದ್ದರು – ಸಾಮಾನಿನ ದರವನ್ನು ಇಳಿಸಿ, ಸುಲಭ ಬೆಲೆಗೆ ಒದಗಿಸಿಕೊಡುತ್ತೇವೆಂದು ಸಾರಿ ನಂಜುಂಡಯ್ಯನ ವ್ಯಾಪಾರ ಇಳಿಮುಖ ಮಾಡಲು ಯತ್ನಿಸಿದರು. ಆದರೆ ಇದಾವುದೂ ನಡೆಯಲಿಲ್ಲ. ನಂಜುಂಡಯ್ಯನಿಗೆ ಶುಕ್ರದೆಸೆ ಹೊಡೆಯುತ್ತಿದ್ದಿತೆಂದೇ ಕಾಣುತ್ತದೆ. ಅಂಗಡಿಯಲ್ಲಿ ಇದ್ದರು [illegible] ಗುಂಡಪ್ಪನ ಸ್ಟೋರೂ ನಗನಾಣ್ಯ ಸುರಿದಾಡಿತು. ಹಾಸನದಲ್ಲಿ ಸ್ವಂತ ಮನೆಯನ್ನೂ ಮಾಡಿಕೊಂಡರು. ಅವರ ಅಭಿವೃದ್ಧಿ ಕಂಡು ಪ್ರತಿಸ್ಪರ್ಧಿಗಳು ಹುಟ್ಟಿದಲ್ಲಿಯೇ ಮಾಯವಾದರು. ಸಾರ್ವಜನಿಕ ಸಂಸ್ಥೆಗಳಲ್ಲೂ ಧರ್ಮಕಾರ್ಯಗಳಲ್ಲೂ ನಂಜುಂಡಯ್ಯನ ಹೆಸರು ಚಿರಸ್ಥಾಯಿಯಾಗಿ ನಿಂತಿತು.

ನಂಜುಂಡಯ್ಯನವರು ಈ ಸ್ಥಾನ ಪಡೆಯಲು ಸ್ವಲ್ಪ ಶ್ರಮಪಡಬೇಕಾಯಿತು. ಹದಿನಾರನೆಯ ವಯಸ್ಸಿನಲ್ಲೇ ತಂದೆತಾಯಿಯ ವಿಯೋಗವನ್ನನುಭವಿಸಿದ ನಂಜುಂಡಯ್ಯನಿಗೆ ಹಿರಿಯಕ್ಕ ಪುಟ್ಟತಾಯಮ್ಮ

ಪೋಷಕರಾಗಿ ನಿಂತರು. ಮೊದಲಿನಿಂದಲೂ ಚಿಕ್ಕ ತಮ್ಮನನ್ನು ಕಂಡರೆ ಪ್ರೀತಿ – ತಮ್ಮನ ಪೋಷಣೆಗೇ ಎನ್ನುವಂತೆ ಪುಟ್ಟತಾಯಮ್ಮ ಬಾಲವಿಧವೆಯಾಗಿ ತಂದೆಯ ಮನೆಯಲ್ಲೇ ಉಳಿದರು. ತಮ್ಮ ಪೂರ್ವಕಥೆ ಹೇಳುವಾಗ ತಾವನುಭವಿಸಿದ ಕಷ್ಟಗಳನ್ನು ವರ್ಣಿಸುವಾಗ ಮದುವೆಯಾದ ಆರು ತಿಂಗಳಿಗೇ ಗಂಡ ಸತ್ತುಹೋದುದಕ್ಕೆ ಕಾರಣವನ್ನು, 'ಪಾಪಿಗಳು ಜಾತಕ ಬದಲಾಯಿಸಿ ಮೋಸ ಮಾಡಿದರು' ಎನ್ನುತ್ತಿದ್ದರು. ಕೋರ್ಟಿನಲ್ಲಿ ಹೋರಾಡಿ ಪುಟ್ಟತಾಯಮ್ಮನ ತಂದೆ ಮಗಳ ಜೀವನಾಂಶವೆಂದು ಎಡತೊರೆಯಲ್ಲಿ ಐದೆಕರೆ ಗದ್ದೆ, ಒಂದು ಮನೆ ದಕ್ಕಿಸಿಕೊಂಡರು. ಚಂದ್ರಶೇಖರಯ್ಯ [illegible] ಸತ್ತಾಗಲು ಮಗನ ಮದುವೆ ಸಮಸ್ಯೆಯಾಯಿತು. ಸಂಸಾರವೆಲ್ಲವನ್ನು ಸುಖವಾಗಿ ಅನುಭವಿಸುವ ಯೋಗ ಚಂದ್ರಶೇಖರಯ್ಯನವರ ಪಾಲಿಗಿರಲಿಲ್ಲ. [illegible] ಆಗುವ ಮೊದಲೇ ಮಡದಿ ಮರಣವನ್ನಪ್ಪಿ [illegible] ಕೆಲಸದಿಂದ ನಿವೃತ್ತಿ ಹೊಂದಿದ ಆರುತಿಂಗಳೊಳಗೇ ಚಂದ್ರಶೇಖರಯ್ಯನವರು [illegible] ಅವರಿಗಿದ್ದ ಕೊನೆಯವರೆ ಪುಟ್ಟತಾಯಮ್ಮ. ಹಿರಿಯ ಮಗ ನಾರಾಯಣ [illegible] ಆಗಿ ವರ್ಗ ಮಾಡುತ್ತಿದ್ದ.

ತಂದೆ ಸತ್ತಮೇಲೆ ನಂಜುಂಡಯ್ಯನ ಯೋಗಕ್ಷೇಮ ಪುಟ್ಟತಾಯಿಯದನ್ನು ಸಾಗಿತು. ನಂಜುಂಡಯ್ಯ ಅದೇ ವರ್ಷ ಮೆಟ್ರಿಕ್ ಮುಗಿಸಿ ಕಾಲೇಜು ಸೇರಿದ್ದರು. ಪುಟ್ಟತಾಯಮ್ಮ ತಮ್ಮನನ್ನೇ ಮಗನೆಂದು ಭಾವಿಸಿ ಮುಚ್ಚಟೆಯಾಗಿ ಕಾಪಾಡುತ್ತಿದ್ದರು. ಆಸ್ತಿ ವಿಭಾಗವಾದ ನಂತರ ತಮ್ಮನ ಪಾಲಿಗೆ ಬಂದ ಒಡವೆ, ಹಣ ಎಲ್ಲವನ್ನೂ ಜೋಪಾನವಾಗಿಟ್ಟಿದ್ದರು. ಅವರ ಆಸಕ್ತಿ ಕಂಡು ನಂಜುಂಡಯ್ಯ,

"ಇದೇನೆ ಪುಟ್ಟಕ್ಕ, ನೀನಿಷ್ಟು ಅಕರಾಸ್ತಿ ಪಡುವುದು ನೋಡಿದರೆ ಆಶ್ಚರ್ಯ ಆಗುತ್ತೆ" ಎಂದರೆ,

"ನಿನಗೇನು ಗೊತ್ತು ಹೇಳು? ನಾಳೆ ನಿನ್ನ ಹೆಂಡತಿ ಬಂದರೆ ಇವೆಲ್ಲಾ ಬೇಡವೇ? ಸಂಸಾರ ಅಂದಮೇಲೆ ಒಂದು ಹುಲ್ಲುಕಡ್ಡಿಯೂ ಬೇಕು."

ಅವರ ಎಲ್ಲಾ ಕೆಲಸಕಾರ್ಯಗಳೂ ತಮ್ಮನಿಗಾಗಿಯೇ – ಅವನ ಹಿತವೇ ನನ್ನ ಹಿತ. ಅವನ ಸಂತೋಷವೇ ನನ್ನದು ಎಂದು ಭಾವಿಸಿ

ಕೊಂಡು ಹಗಲಿರುಳೂ ದುಡಿಯುತ್ತಿದ್ದ ತ್ಯಾಗಮೂರ್ತಿಯನ್ನು ಕಂಡು ನಂಜುಂಡಯ್ಯ

"ಈ ಜೀವಕ್ಕೆಷ್ಟು ಅನ್ಯಾಯವಾಗಿದೆ – ಈ ವಯಸ್ಸಿಗೆ ಎಂತಹ ವಿರಕ್ತಿ" ಎಂದು ದುಃಖಿಸುತ್ತಿದ್ದರು

ಪುಟ್ಟತಾಯಮ್ಮನಿಗೆ ಈ ಯೋಚನೆಗಳೊಂದೂ ಬರುತ್ತಲೇ ಇರಲಿಲ್ಲವೇನೋ ಎನ್ನುವಂತೆ ತನ್ನ ನಿತ್ಯಜೀವನವನ್ನು ಅವ್ಯಾಹತವಾಗಿ ಸಾಗಿಸಿದ್ದರು

ಎಂಟ್ರೆನ್ಸ್ ಪರೀಕ್ಷೆಯಲ್ಲಿ ಎರಡು ಬಾರಿ ಢುಂಕಿ ಹೊಡೆದ ನಂಜುಂಡಯ್ಯ ಪುನಃ ಕಟ್ಟುವ ಗೋಜಿಗೇ ಹೋಗಲಿಲ್ಲ ತಮ್ಮ ಗೌನು ಹಾಕಿಕೊಂಡು ದೊಡ್ಡ ಸರ್ಕಾರಿ ಹುದ್ದೆ ಮಾಡುತ್ತಾನೆ – ನಾಲ್ಕಾರು ಆಳುಗಳನ್ನಿಟ್ಟು ದರ್ಬಾರ್ ಮಾಡುತ್ತಾನೆ ಎಂದು ಏನೇನೋ ಕನಸು ಕಂಡಿದ್ದ ಪುಟ್ಟತಾಯಮ್ಮನಿಗೆ ನಿರಾಶೆಯಾಯಿತು ನಂಜುಂಡಯ್ಯ ಸ್ವಂತವಾಗಿ ಅಂಗಡಿ ತೆರೆಯುವೆನೆಂದಾಗ

"ಇದಕ್ಕೆ ಯಾಕೆ ಸಾವಿರಾರು ರೂಪಾಯಿ ಸುರಿಯಬೇಕಾಗಿತ್ತು ?" ಎಂದು ತಮ್ಮ ಅಸಮಾಧಾನ ಸೂಚಿಸಿದರು ನಂಜುಂಡಯ್ಯ ಹಟಬಿಡಲಿಲ್ಲ ಕೊನೆಗೂ ಅಂಗಡಿ ತೆರೆದು ತಮ್ಮ ಮನಸಿನ ಬಯಕೆ ತೀರಿಸಿಕೊಂಡರು ತಮ್ಮನ ಕೈಲಿ ನಾಲ್ಕು ಕಾಸು ಓಡಾಡುತ್ತಲು ಪುಟ್ಟತಾಯಮ್ಮ ತಾವೇ ಮಾತು ತೆಗೆದರು

"ನಂಜುಂಡಾ ವ್ಯಾಪಾರ ಹೇಗಿದೆಯಪ್ಪಾ ?"

"ಈಗೇನು ಪುಟ್ಟಾ ? ನಾಲ್ಕು ದಿನ ತೊಂದರೆಯಾಯಿತು ಈಗ ಸರ್ಕಾರಿ ಅಧಿಕಾರಿಗಳೆಲ್ಲಾ ನನ್ನ ಗಿರಾಕಿಗಳೇ" ಎಂದು ನಂಜುಂಡಯ್ಯ ಜಂಭ ಹೊಡೆದರು

ತಮ್ಮನ ಅಭ್ಯುದಯ ಕಂಡು ಪುಟ್ಟತಾಯಮ್ಮ ಹಿರಿಹಿರಿ ಹಿಗ್ಗಿದರು ತಾವೇ ಖುದ್ದು ಕಬ್ಬಿಣದ ಪೆಟ್ಟಿಗೆಯಿಂದ ಸಾವಿರ ರೂಪಾಯಿ ತಂದು,

"ತಗೋ ಇದನ್ನೂ ಬಂಡವಾಳವನ್ನಾಗಿ ಉಪಯೋಗಿಸಿಕೊ" ಅಕ್ಕನ ಔದಾರ್ಯ ಕಂಡು ನಂಜುಂಡಯ್ಯನಿಗೆ ಆಶ್ಚರ್ಯವಾಯಿತು.

"ಇದೇನು ಪುಟ್ಟಾ ? ಕಾಸಿಗೆಕಾಸು ಕೂಡುಹಾಕಿ ಇಷ್ಟು ಧಾರಾಳವಾಗಿ ತಂದುಕೊಡುತ್ತಿರುವೆ ?"

"ಇರಲಿ ತಗೋ! ಇರುವುದು ನಿನಗಲ್ಲವೆ ಇನ್ನು ಯಾರಿಗಾಗಬೇಕು?"

ಅಕ್ಕನ ಸಹಾಯ ಒದಗಿದುದು ನಂಜುಂಡಯ್ಯನಿಗೆ ಅನುಕೂಲವೇ ಆಯಿತು ತಮ್ಮನ ಜೀವನ ನೇರವಾದ ಹಾದಿಹಿಡಿದುದನ್ನು ಕಂಡ ಪುಟ್ಟತಾಯಮ್ಮ ಗುಂಡಮ್ಮನೊಡನೆ ತಮ್ಮನ ವಿವಾಹ ವಿಧಿಯನ್ನು ನೆರವೇರಿಸಿದರು

ಗುಂಡಮ್ಮ ಒಳ್ಳೆಯ ತಾಯಿ ಹೆತ್ತ ಮಗಳು ಅತ್ತಿಗೆಯನ್ನು ಕಂಡರೆ ಅವಳ ಭಕ್ತಿ ತನ್ನ ಸರಳ ನಡೆನುಡಿಯಿಂದ ಪುಟ್ಟತಾಯಮ್ಮನ ಹೃದಯ ಗೆದ್ದಿದ್ದಳು

"ತಾನು ಇಷ್ಟು ವರ್ಷ ಜೀವ ತೇದದಕ್ಕೂ ಸಾರ್ಥಕವಾಯಿತು" ಎಂದು ಪುಟ್ಟತಾಯಮ್ಮ ತೃಪ್ತಿಪಟ್ಟರು ತಮ್ಮನ ಮಕ್ಕಳನ್ನು ನೋಡದೇ ಕಣ್ಮುಚ್ಚಬೇಕಲ್ಲಾ ಎನ್ನುವ ವ್ಯಸನವೇ ಅವರಿಗೆ ಕೊರಗು ಗುಂಡಮ್ಮ ಮೂರುಬಾರಿ ಗರ್ಭಧರಿಸಿ ಗರ್ಭಸ್ರಾವಗೊಂಡಿದ್ದರು ತೀರದ ಆಸೆಯೊಂದನ್ನಿಟ್ಟುಕೊಂಡು ಪುಟ್ಟತಾಯಮ್ಮ ಪಾರ್ಶ್ವವಾಯುವಿಗೆ ಬಲಿಯಾದರು

ಅಕ್ಕನ ಸ್ಥಾನಕ್ಕೆ ಅನಿರೀಕ್ಷಿತವಾಗಿ ಬಂದು ರಂಗಮ್ಮ ಸೇರಿದರು – ನಂಜುಂಡಯ್ಯ ರಂಗಮ್ಮನ ಅಸಹಾಯಸ್ಥಿತಿಯನ್ನು ತಿಳಿದು ತಮ್ಮ ಮನೆಯಲ್ಲೇ ಇರಿಸಿಕೊಂಡಿದ್ದರು ಅವರ ಐಶ್ವರ್ಯದ ಹಣದಲ್ಲಿ ಸ್ವಲ್ಪ ಭಾಗವನ್ನು ಬಳಸಿಕೊಂಡಿದ್ದರೂ ಅದಕ್ಕೆ ಪ್ರತಿಫಲವಾಗಿ ಧರ್ಮದೃಷ್ಟಿಯಿಟ್ಟು ರಾಜಮ್ಮನ ಮದುವೆಯ ಜವಾಬ್ದಾರಿ ಹೊತ್ತಿದ್ದರು ರಂಗಮ್ಮನೂ ನಂಜುಂಡಯ್ಯನಲ್ಲಿ ವಿಶ್ರಾಂತಿ ಕಾಣುತ್ತಿದ್ದರು ತನಗೆ ಮಾಡಿದ ಸಹಾಯಕ್ಕೆ ಪ್ರತಿಯಾಗಿ ಜೀತದಾಳಿಗಿಂತಲೂ ಹೆಚ್ಚಾಗಿ ದುಡಿದು ಋಣ ತೀರಿಸಲೆತ್ನಿಸುತ್ತಿದ್ದಳು

ರಾಜಮ್ಮನಲ್ಲಿ ಹೆಚ್ಚಿನ ವಿಶ್ವಾಸವಿಡಲು ಗುಂಡಮ್ಮನಿಗೆ ಮತ್ತೊಂದು ಕಾರಣವಿದ್ದಿತು ಮಕ್ಕಳೇ ಇಲ್ಲದ ಗುಂಡಮ್ಮ ರಾಜಮ್ಮ ಹುಟ್ಟಿದಮೇಲೆ ಗರ್ಭಧರಿಸಿದಳು – ಒಂದಾದಮೇಲೊಂದು ನಾಲ್ಕು ಮಕ್ಕಳಾದವು ಜನ ನಿಬಿಡವಾಗಿದ್ದ ಮನೆ ತುಂಬಿದಂತಾಯಿತು – ನಂಜುಂಡಯ್ಯನ ಜವಾಬ್ದಾರಿಯೂ ಹೆಚ್ಚಿತು

ರಾಜುವಿಗಿಂತ ನಾಲ್ಕುವರ್ಷ ಚಿಕ್ಕವಳು ಉಮಾ ನಂತರ ಗೀತಾ – ಚಿಕ್ಕಮಗಳು ರಾಧ ಕೊನೆಯಮಗ ಕೃಷ್ಣಮೂರ್ತಿ ಹುಟ್ಟಿದಾಗ ರಂಗಮ್ಮ "ಮೂರು ಹೆಣ್ಣಿನಮೇಲೊಂದು ಗಂಡು – ಪುಣ್ಯವಂತೆ"ಎಂದರು

ಯಾವ ಕೊರಗೂ ಇಲ್ಲದೆ ಮಕ್ಕಳು ಬೆಳೆಯುತ್ತಿದ್ದುವು ಅವರಲ್ಲಿದ್ದ ಸ್ನೇಹಸೌಹಾರ್ದ ಕಂಡು ಹಿರಿಯರೂ ಸಂತೋಷಪಡುತ್ತಿದ್ದರು

ರಾಜು ಬೆಂಗಳೂರಿಗೆ ಬಂದೊಡನೇ ಉಮಾ,

"ಹೇಗಿರುವನೇ ನಿನ್ನ ಗಂಡ" ಎಂದು ಪೀಡಿಸಿದಳು

"ಈಗಲೆ ಎಷ್ಟು ಜಂಭವೇ ನಿನಗೆ? ಬೆಂಗಳೂರಿಗೆ ಹೋದಮೇಲೆ ನಮ್ಮನ್ನು ಮರೆತೇಬಿಡುತ್ತೀ" ಗೀತಾ ಹೇಳಿದಳು

"ನಾನೇನೋ ರಾಜ, ಮನೆಯಲ್ಲಿದ್ದುಕೊಂಡು ಕಾಲೇಜಿಗೆ ಹೋಗುತ್ತೇನೆ" ಕೃಷ್ಣಮೂರ್ತಿ ತನ್ನ ಕನಸನ್ನು ತಿಳಿಸಿದ

"ಸಾಕು ಸುಮ್ಮನಿರೋ ಇನ್ನೂ ಕತ್ತಿಗೆ ತಾಳಿ ಬೀಳೋಕ್ಕೆ ಮಾರ್ಗವಿಲ್ಲ. ಆಗಲೇ ಶುರುಮಾಡಿಬಿಟ್ಟೆ" ಎಂದು ರಂಗಮ್ಮ ಮಗನನ್ನು ಗದರಿಸಿಕೊಂಡರು

ಅಣಿಯಾದ ಗಂಡೆಂದು ತಿಳಿದು ರಂಗಮ್ಮ ಹಿಗ್ಗಿದರು ರಾಜಮ್ಮ ಮಾತ್ರ ಈ ಎಲ್ಲರ ಉತ್ಸಾಹದಲ್ಲೂ ಭಾಗಿಯಾಗಲಿಲ್ಲ ಅವಳ ಕುಗ್ಗಿದ ಮುಖಕಂಡು ಉಮಾ,

"ಯಾಕೆ ರಾಜೂ, ಹೀಗಿದೀಯಾ?"

"ಇಲ್ವಲ್ಲಾ"

"ಸಾಕು ಬಿಡೇ ನನಗೇ ಕೊಡ್ತೀಯಲ್ಲಾ ಗಸ್ತು ಏನು ವಿಷಯ ಹೇಳು?" ಎಂದು ಪೀಡಿಸಿದಳು ರಾಜಮ್ಮ ಬಹಳ ಹೊತ್ತಾದಮೇಲೆ ಬಾಯಿಬಿಟ್ಟಳು

"ಮದುವೆ ಯಾಕಾದರೂ ನಿಶ್ಚಯವಾಯಿತೋ ಉಮಾ"

"ಗಂಡು ಒಪ್ಪಿಗೆಯಾಗಲಿಲ್ಲವೇ?"

"ಉಹೂಂ"

"ಮುದುಕನೇ?"

"ಇಲ್ಲಾ. ಆದರೂ ನನಗೇಕೋ ಮನಸ್ಸಿಲ್ಲ."

"ಎರಡನೆಯ ಮದುವೇಂತ ಬೇಸರವೇ ?"

" . "

"ಅಮ್ಮನಿಗೆ ಹೇಳಲೇ ರಾಜೂ ?"

"ಬೇಡ ಸುಮ್ಮನಿರು ಅವರೆಲ್ಲಾ ಅಷ್ಟು ಉತ್ಸಾಹದಿಂದಿರುವಾಗ ಈ ಮಾತು ತಿಳಿಸಿದರೆ ಬೇಸರವಾಗಬಹುದು – ಪುನಃ ಎಲ್ಲಿ ಗಂಡು ಹುಡುಕಲು ಸಾಧ್ಯವಾಗುತ್ತೆ – ಅಣ್ಣನಿಗೂ ಕೆಲಸ"

"ಹಾಗಂತ ಒಲ್ಲದ ಮದುವೆ ಮಾಡಿಕೊಳ್ಳುವಿಯಾ ?"

"ನನ್ನ ಅದೃಷ್ಟ,"

"ನಿನ್ನ ವೇದಾಂತ ನನಗರ್ಥವಾಗುವುದಿಲ್ಲ ರಾಜೂ' ಎಂದು ಉಮಾ ಸುಮ್ಮನಾದಳು

ಮದುವೆಯ ಸಿದ್ಧತೆಯೂ ಯಾವ ಅಡ್ಡಿ ಆತಂಕಗಳೂ ಇಲ್ಲದೆ ನಡೆಯುತ್ತಲಿತ್ತು

೮

ಮಗನ ಮದುವೆ ವಿಷಯ ನರಸಿಂಹಯ್ಯನಂತ ಪಾತಕ್ಕ ಬಿಚ್ಚಿಡಲಿಲ್ಲ ಮಗನನ್ನು ಹುಡುಕಿಕೊಂಡು ಬಂದ ಸೀತಾರಾಮುವಿಗೆ

“ಸೀತಾರಾಮೂ ನರಸಿಂಹನಿಗೆ ಮದುವೆ ಗೊತ್ತಾಗಿದೆ ನೀವೆಲ್ಲಾ ಖಂಡಿತಾ ಬಂದು ಆಗುವಸಹಾಯ ಕೊಡಬೇಕಪ್ಪಾ ನನಗೂ ಬೇರೆ ಯಾವ ನೆಂಟರಿದ್ದಾರೆ?” ಎಂದರು

“ಇದೇನಮ್ಮಾ? ನನಗೆ ಗೊತ್ತೇ ಇಲ್ಲವಲ್ಲಾ ಯಾವತ್ತು? ಏನುಕಥೆ”

“ಕೂತುಕೋ ನಿಂತೇ ಎಲ್ಲಾ ವಿಚಾರಿಸಿಕೊಳ್ಳುತ್ತೀಯಲ್ಲಾ” ಎಂದು ಪಾತಕ್ಕ ಸೀತಾರಾಮುವನ್ನು ಕೂರಿಸಿ ತಿಂಡಿಕೊಟ್ಟು ವಿವರವಾಗಿ ಸಮಾಚಾರ ತಿಳಿಸಿ

“ನರಸಿಂಹ ಹೇಳಲಿಲ್ಲವೇ?”

“ಇಲ್ಲವಮ್ಮಾ ನೀವು ಹೇಳಿದಮೇಲೆ ನನಗೆ ವಿಷಯ ತಿಳಿಯಿತು”

“ನೀವೆಲ್ಲಾ ಖಂಡಿತಾ ಬರಬೇಕು”

“ಊಟ ಅಂದ್ರೆ ತಪ್ಪಿಸಿಕೊಳ್ಳುತ್ತೇನೆಯೇ? ಮೂರುದಿನ ಮುಂಚಿತವಾಗಿ ಸಂಸಾರಸಮೇತ ಹಾಜರಾಗುತ್ತೇನೆ ಸುಮ್ಮನಿರಿ” ಎಂದರು

“ನಾ ಬಂದಿದ್ದೆ ಅಂತ ತಿಳಿಸಿಬಿಡಿ” ಎಂದು ಚೀಲ ತೆಗೆದುಕೊಂಡು ಪೇಟೆಯಕಡೆ ಹೊರಟ

ಸೀತಾರಾಮು ನರಸಿಂಹಯ್ಯನ ಬಾಲ್ಯಸ್ನೇಹಿತ ಚಿಕ್ಕಂದಿನಲ್ಲಿ ಒಂದಾಗಿದ್ದವರು ಹೈಸ್ಕೂಲಿನಲ್ಲೂ ಜೋಡಿಯಾದರು. ಇಬ್ಬರ ಸ್ನೇಹ

"ಹಾಸ್ಯ ಅಲ್ಲಾಮ್ಮಾ – ಮೆಚ್ಚಿದೆ" ನರಸಿಂಹಯ್ಯ ಮಾತಾಡದೆ ಮುಂದಿದ್ದುದನ್ನು ಮುಗಿಸಿದ

"ಮಂಜುಳಾಗೆ ಗೊತ್ತೆನೋ?"

"ಇನ್ನೂ ಹೇಳಿಲ್ಲ"

"ಹೇಳಬೇಕಾಗಿತ್ತು"

"ನಾನಂತೂ ಹೇಳಲಾರೆ ಸೀತಾರಾಮು ನೀನೇ ತಿಳಿಸಿಬಿಡು"

"ನೀನು ಹುಡುಗಿಯನ್ನು ಒಪ್ಪಿರುವೆಯಾ?"

"ನನ್ನ ಒಪ್ಪಿಗೆ ಕೇಳುವವರು ಯಾರು ಸೀತಾರಾಮು ಎಲ್ಲಾ ಅಮ್ಮನ ದರ್ಬಾರು"

"ಹಾಗಾದರೆ ನಿನಗಿಷ್ಟವಿಲ್ಲ"

"ಕಣೀ ಕೇಳುಹೋಗು ನನ್ನಮಾತೇ ಕೇಳಿಲ್ಲವೆಂದು ಆಗಿನಿಂದ ಹೇಳ್ತಾ ಇದೀನಿ"

"ಹಾಗಂತ ನಿಮ್ಮಮ್ಮನಿಗೆ ತಿಳಿಸಿ ಸತ್ಯಾಗ್ರಹಮಾಡಬೇಕಾಗಿತ್ತು"

"ಅದೊಂದೂ ನಡೆಯುವುದಿಲ್ಲ ಸೀತಾರಾಮು ಮಾತೆತ್ತಿದರೆ ಸಾಯ್ತೀನಿ – ಸಾಯ್ತೀನಿ ಅಂತ ಹೆದರಿಸ್ತಾಳೆ"

"ಅಯ್ಯೋ ಹುಚ್ಚಪ್ಪಾ! ಸಾಯೋರು ಡಂಗೂರ ಹೊಡೆದು ಸಾಯ್ತಾರೆಯೇನೋ?"

"ಒಂದು ಪಕ್ಷ ಹಾಗೇ ಮಾಡಿದರೆ ಮಗುವಿನ ಗತಿ ಏನು ಹೇಳು"

"ಇಬ್ಬರೂ ಸರಿಯಾಗಿದ್ದೀರಿ – ಮದುವೆ ಅಂದ್ರೆ ಆಟ ಆಗಿದೆ" ಎಂದು ಸೀತಾರಾಮು ಸುಮ್ಮನಾದ

ಗೆಳೆಯನ ಸ್ಥಿತಿಗಾಗಿ ಸೀತಾರಾಮು ಮರುಗಿದ ನರಸಿಂಹಯ್ಯ ತಾನು ಒಪ್ಪಿಗೆ ಇತ್ತುದಕ್ಕೆ ಕಾರಣ ಸೂಚಿಸುತ್ತಾ,

"ನಾನು ಸುತರಾಂ ಒಪ್ಪುತ್ತಿರಲಿಲ್ಲ ಸೀತಾರಾಮು ಆದರೆ ನೋಡು ಮೀನಾ ಎಲ್ಲವನ್ನೂ ನಿರ್ಧರಿಸಿ ಅಮ್ಮನ ಕೈಲಿ ವಚನ ತೆಗೆದುಕೊಂಡಿದ್ದಳು. ಅದಕ್ಕೇ ಅಮ್ಮನೂ ಒಂದೇ ಪಟ್ಟು ಹಿಡಿದಿರುವುದು – ಸುಮಿಯ ಭವಿಷ್ಯವನ್ನೂ ಯೋಚಿಸಬೇಕು ನೋಡು."

"ಇದ್ದಾಗ ಹೊಟ್ಟೆ ಉರಿಸಿಕೊಂಡು ಸತ್ತಮೇಲೆ ಆತ್ಮಕ್ಕೆ ಶಾಂತಿ ತೋರುವುದೆ – ಸುಮ್ಮನಿರಪ್ಪಾ ಸದ್ಯ – ನನ್ನನ್ನು ಕೆರಳಿಸಬೇಡ "

ಗಂಟೆ ಹೊಡೆದುದನ್ನು ಕೇಳಿ ಇಬ್ಬರೂ ಶಾಲೆಯತ್ತ ತೆರಳಿದರು. ಗೆಳೆಯನ ಮುಂದ ಪುನಃ ಮಾತೆತ್ತಲೂ ನರಸಿಂಹಯ್ಯನಿಗೆ ಧೈರ್ಯವಾಗ ಲಿಲ್ಲ ನಾನು ತಪ್ಪುಮಾಡುತ್ತಿರುವೆನೇ? ಎಂದು ತನ್ನನ್ನೇ ಪ್ರಶ್ನಿಸಿ ಕೊಂಡ

ಗೆಳೆಯನ ಸಪ್ಪೆಮುಖ ಕಂಡು ಸೀತಾರಾಮು, 'ತಪ್ಪು ತಿಳಿಯಬೇಡಾ ನರಸಿಂಹ ಸುಮಿತ್ರ ತನ್ನ ಚಿಕ್ಕಮ್ಮನ ಕೈಕೆಳಗೆ ಸುಖವಾಗಿದ್ದರೆ ಸಾಕು" ಎಂದು ತನ್ನ ತೀರ್ಪು-ಕೊಟ್ಟ

ಸಂಜೆ ಸೀತಾರಾಮು ಮಂಜುಳೆಯ ಮನೆಗೆ ಹೋದಾಗ ಆವಳು ಆದೇ ತಾನೆ ಶಾಲೆಯಿಂದ ಬಂದು ಮುಖ ತೊಳೆಯುತ್ತಿದ್ದಳು ಹೊರಗಿದ್ದ ಶ್ರೀಕಂಠ ಸೀತಾರಾಮುವನ್ನು ರೂಮಿನಲ್ಲಿ ಕುಳ್ಳಿರಿಸಿ,

"ಅಕ್ಕಾ ಸೀತಾರಾಮಯ್ಯ ಬಂದಿದ್ದಾರೆ" ಎಂದು ಸುದ್ದಿ ತಿಳಿಸಿದ.

"ಬಂದೆ – ಐದು ನಿಮಿಷ" ಎಂದು ಮಂಜುಳಾ ಹಣೆಗೆ ಕುಂಕುಮ ಇಟ್ಟುಕೊಂಡು ಬಂದು,

"ಬಡವರ ನೆನಪಾಯಿತೇ?" ಎಂದಳು

"ಸೀತಾರಾಮು ನಕ್ಕು, "ಬರಲು ಅವಕಾಶವಾಗಲಿಲ್ಲ ನರಸಿಂಹ ಬಂದಿದ್ದನೇ?"

'ಇಲ್ಲ ಅವರು ಬಂದು ವಾರದಮೇಲಾಯಿತು – ಊರಲ್ಲಿಲ್ಲಾಂತ ಕಾಣುತ್ತೆ "

"ಇದಾನಲ್ಲಾ"

"ಹಾಗಾದರೆ ಯಾಕೆ ಬಂದಿಲ್ಲ?"

ಮಂಜುಳೆಯ ಪ್ರಶ್ನೆಗೆ ಸೀತಾರಾಮು ಕೂಡಲೇ ಉತ್ತರಕೊಡಲಿಲ್ಲ ಮಂಜುಳೆ ಕಾಫಿ ತರಲು ಒಳಗೆ ಹೋದಳು ಮೇಜಿನ ಮೇಲಿದ್ದ ಪುಸ್ತಕ ಗಳ ಮೇಲೆ ಕೈಯಾಡಿಸುತ್ತಾ,

"ನೀನೇನು ಮಾಡುತ್ತಿರುವೆ? ಶ್ರೀಕಂಠಾ "

"ಚಿತ್ರಕಲೆ ಕಲಿಯುತ್ತಿದ್ದೀನಿ ಸಾರ್."

"ಕಲಾಶಾಲೆ ವಿದ್ಯಾರ್ಥಿ ನೀನು"

"ಹೌದು ಸಾರ್"

"ಮುಂದೇನು ಮಾಡಬೇಕೆಂದಿರುವೆ ಶ್ರೀಕಂಠ?"

"ಈ ಕೋರ್ಸ್ ಮುಗಿದ ಮೇಲೆ ಬೊಂಬಾಯಿಗೆ ಹೋಗಿ ಜೆ ಜೆ ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಕಲಿಯಬೇಕೆಂದು ಆಸೆಯಿದೆ – ನೋಡಬೇಕು"

"ನಿನ್ನ ಪೇಯಿಂಟಿಂಗ್ಸ್ ತೋರಿಸುವೆಯಾ?"

"ಹೊಗಳುವಂಥಾದ್ದು ಏನೂ ಮಾಡಿಲ್ಲ ಸಾರ್"

"ಇರಲಿ ತೋರಿಸು"

"ಮತ್ತೊಮ್ಮೆ ಖಂಡಿತಾ ತೋರಿಸುತ್ತೇನೆ ಸಾರ್"

ಅಷ್ಟರಲ್ಲಿ ಕಾಫಿ ಬಂತು ಕಾಫಿ ಮುಗಿಸಿ ಸಂಭಾಷಣೆಯನ್ನು ಪ್ರಾರಂಭಿಸಿದ

"ಅವರ ಮನೆಯಲ್ಲಿ ಮದುವೆ ಗಲಾಟೆ ಅದಕ್ಕೆ ನರಸಿಂಹ ಈ ಕಡೆ ಸುಳಿದಿಲ್ಲ"

"ಯಾರ ಮದುವೆ?"

"ಇನ್ಯಾರದ್ದು? ನರಸಿಂಹನದೇ"

"ಹಾಂ ಕೊನೆಗೂ ಒಪ್ಪಿಬಿಟ್ಟರು"

"ಅವನ ಒಪ್ಪಿಗೆಯಿಂದ ನಡೆಯುತ್ತಿಲ್ಲವಲ್ಲ ಇದು ಅವನ ತಾಯಿಯ ಇಷ್ಟ ಮೇಲಾಗಿ ಮೊದಲ ಹೆಂಡತಿಯ ಆಕಾಂಕ್ಷೆ"

ಮಂಜುಳಾ ಮಾತಾಡಲಿಲ್ಲ ಅವಳು ಅಸಮಾಧಾನಗೊಂಡುದನ್ನು ಗಮನಿಸಿ,

"ಎಲ್ಲವೂ ನಿಶ್ಚಯವಾದ ಮೇಲೆ ನಾವೇನೂ ಮಾಡುವಹಾಗಿಲ್ಲ"

ಅವರದೇ ಒಪ್ಪಿಗೆ ಇರುವಾಗ ನಾವೇನು ಮಾಡುವುದು" ಎಂದು ಮಂಜುಳಾ ಸುಮ್ಮನಾದಳು

"ಇವತ್ತು ನಾಳೆಯಲ್ಲೇ ನರಸಿಂಹ ಬರುತ್ತಾನೆ ನೀವು ಅವನ ಮನಸ್ಸಿಗೆ ನೋವಾಗದ ಹಾಗೆ ನಡೆದುಕೊಳ್ಳಬೇಕು"

" . "

"ನನಗಾಗಿ ಮಾತುಕೊಡಿ."

"ಆಗಲಿ."

ಸೀತಾರಾಮು ಪುರುಸೊತ್ತಾದಾಗ ಪುನಃ ಬರುತ್ತೇನೆಂದು ಹೇಳಿ ಹೊರಟ

ಸೀತಾರಾಮು ತನಗಾಗಿ ಮಾಡಿದ ಮುಖಸ್ತಿಕೆಯಿಂದ ನರಸಿಂಹಯ್ಯ ಸಂತೋಷಗೊಂಡ ಮಾರನೆಯ ದಿನ ನರಸಿಂಹಯ್ಯ ಮನೆಗೆ ಬಂದಾಗ ಮಂಜುಳೆ ತನಗೆ ವಿಷಯ ತಿಳಿದಿದೆಯೆಂದು ತೋರಗೊಡಲಿಲ್ಲ ಎಂದಿನಂತೇ ಸತ್ಕರಿಸಿ ಆದರಿಸಿದಳು

"ಮಂಜೂ ನಾಲ್ಕು ದಿನಕ್ಕೆ ಹಾಸನಕ್ಕೆ ಹೋಗಬೇಕು" ಎಂದು ತಾನೇ ಮಾತೆತ್ತಿದ

"ಹೋಗಿ ಬನ್ನಿ"

"ಸೀತಾರಾಮು ವಿಷಯ ತಿಳಿಸಿರಬೇಕು"

"ಹೇಳಿದನು ಅದೇಕೆ ಹಾಗೆ ಮಾಡಿದಿರಿ?"

"ಅಮ್ಮನ ಮುಂದೆ ನನ್ನ ನಿರ್ಧಾರವೆಲ್ಲಾ ಗಾಳಿಪಾಲಾಗುತ್ತವೆ ಮಂಜೂ - ನಾನೇನು ಮಾಡಲಿ"

ಅವನ ಅಸಹಾಯಸ್ಥಿತಿಗಾಗಿ ಮಂಜುಳೆ ಮರುಗಿ ಸುಮ್ಮನಾದಳು ಹೊರಡುವಾಗ ನರಸಿಂಹಯ್ಯನ ಕೈಗೊಂದು ಪೊಟ್ಟಣವಿತ್ತಳು

"ಇದೇನು?"

"ಸುಮಿತ್ರೆಗೆ ಕೊಡಿ"

ನರಸಿಂಹಯ್ಯ ಬಿಚ್ಚಿ ನೋಡಿದ ತಿಳಿನೀಲೀ ಬಣ್ಣದ ಮೈಸೂರು ಸಿಲ್ಕಿನ ಕಣ - ಅಂದವಾಗಿತ್ತು ಮಂಜುಳೆಯ ಅಂತಃಕರಣಕ್ಕೆ ಅವನು ಮಾರುಹೋದ

"ಪುನಃ ನೋಡುವುದಕ್ಕೆ ಒಂದು ವಾರವಾಗಬಹುದು ಬರಲೇ ಮಂಜೂ"

"ಹೋಗಿ ಬನ್ನಿ ಒಳ್ಳೆಯದಾಗಲಿ"

೬

ಮದುವೆ ಮನೆಯಲ್ಲಿ ಜನ ಕಿಕ್ಕಿರಿದು ತುಂಬಿದ್ದರು ಸಂಬಂಧಸ್ಥರು, ಸ್ನೇಹಿತರು, ಎಲ್ಲರೂ ಸೇರಿ ಕೆಲಸವನ್ನು ಸುನಾಯಾಸವಾಗಿ ನೆರವೇರಿಸಲು ಹಟತೊಟ್ಟಂತಿದ್ದಿತು ಎಲ್ಲರೂ ಕೆಲಸ ಮಾಡುವವರೇ ಮಗಳ ಮದುವೆಯ ಕಾರ್ಯ ನಿರ್ವಿಘ್ನವಾಗಿ ನಡೆಯುತ್ತಿರುವುದನ್ನು ಕಂಡು ರಂಗಮ್ಮನಿಗಂತೂ ಅಪರಿಮಿತ ಆನಂದ – ಮಗಳನ್ನು ಎಷ್ಟು ಬಾರಿ ನೋಡಿದರೂ ಸಾಲದು – ಎಷ್ಟು ವಿವೇಕ ಹೇಳಿದರೂ ತೃಪ್ತಿಯಿಲ್ಲ

ಉಮೆಗಂತೂ ಎಲ್ಲರಿಗೂ ಹೆಚ್ಚಿನ ಸಂಭ್ರಮ ವರಪೂಜೆ ದಿವಸ ಈ ಸೀರೆ – ಧಾರೆ ದಿನ ನೀಲಿ ಕಲಾಬತ್ತಿನ ಸೀರೆ – ಸಂಜೆ ಆರತಕ್ಷತೆಗೆ ಮರೂನ್ ಬಣ್ಣದ ಸೀರೆ ಎಂದು ತನ್ನ ಅಲಂಕಾರದ ಪಟ್ಟಿ ಹಾಕುವುದರಲ್ಲೇ ಅವಳ ಕಾಲ ಕಳೆದುಹೋಗುತ್ತಿದ್ದಿತು

ಅವಳ ಹಂಬಲ ಈಡೇರುವ ದಿನಗಳೂ ಬೇಗ ಬೇಗ ಬರುತ್ತಿದ್ದವು

ನಿಶ್ಚಿತವಾದ ದಿನ ಸಂಜೆ ಗಂಡಿನ ಪರಿವಾರ ಪಾತಕ್ಕ–ನರಸಿಂಹಯ್ಯ–ಸುಮಿತ್ರಾ – ಸೀತಾರಾಮು ಅವನ ಹೆಂಡತಿ ಮತ್ತು ನಾಲ್ಕು ಮಕ್ಕಳು ಬಂದಿಳಿದರು

ನಂಜುಂಡಯ್ಯ ವಿತರಣೆಯಿಂದ ಎಲ್ಲಾ ಕಾರ್ಯಗಳನ್ನೂ ನಡೆಸುತ್ತಿದ್ದರಿಂದ ಮದುವೆ ಸುಸೂತ್ರವಾಗಿ ನೆರವೇರಿತು

ಸಂಜೆ 'ಆರತಕ್ಷತೆ'ಯ ಸಮಾರಂಭದಲ್ಲಿ ನಂಜುಂಡಯ್ಯ ಊರಿನ ಪ್ರಮುಖರಿಗೆಲ್ಲಾ ಆಹ್ವಾನ ನೀಡಿದ್ದರು ಗುಂಡಮ್ಮ ತಮ್ಮ ಪರಿವಾರವನ್ನು

ಆಹ್ವಾನಿಸಲು ಮರೆತಿರಲಿಲ್ಲ ವಧೂವರರು ಇನ್ನೇನು ಕುಳಿತುಕೊಳ್ಳಬೇಕು – ಅಷ್ಟರಲ್ಲಿ ಒಂದು ಪ್ರಸಂಗ ನಡೆದುಹೋಯಿತು

ತಂದೆಯ ಜೊತೆ ತಾನೂ ಕುಳಿತುಕೊಳ್ಳಬೇಕೆಂದು ಸುಮಿತ್ರೆ ಹಟ ಹಿಡಿದಿದ್ದಳು ಯಾರೆಷ್ಟು ಸಮಾಧಾನ ಹೇಳಿದರೂ ಸುಮಿತ್ರೆ ಕೇಳಲಿಲ್ಲ – ಅಪ್ಪಪ್ಪಾವರನ್ನೇ ಹಿಡಿದಿದ್ದಳು ನಂಜುಂಡಯ್ಯ ಅವಳನ್ನು ತೊಡೆಯ ಮೇಲೆ ಕೂರಿಸಿಕೊಂಡೇ ಕೂತ – ರಾಜಮ್ಮನಿಗೆ ಅಸಮಾಧಾನವಾಯಿತು ಮುಳ್ಳಿನ ಮೇಲೆ ಕೂತಂತೆ ಗಂಟುಮೋರೆ ಹಾಕಿಕೊಂಡೇ ತಾನೂ ಕುಳಿತಳು ಆರತಿ ಮುಗಿದುದೇ ತಡ ಒಂದು ರೂಮಿಗೆ ಹೋಗಿ ಮನಸ್ಸು ಪೂರ್ತಿ ಅತ್ತು ಹೃದಯವನ್ನು ಹಗುರ ಮಾಡಿಕೊಂಡಳು ಯಾರ ಸಮಾಧಾನವೂ ಪ್ರಯೋಜನಕಾರಿಯಾಗಲಿಲ್ಲ ರಂಗಮ್ಮನೂ ಬುದ್ಧಿ ಮಾತು ಹೇಳಿ ಬೇಸತ್ತರು

'ಹೀಗೆ ಮಾಡಬಾರದು ರಾಜು ನಿನಗೆ ಶ್ರೇಯಸ್ಸಲ್ಲ"

'ನನ್ನ ಶ್ರೇಯಸ್ಸು ಯಾರಿಗೆ ಬೇಕಾಗಿದೆ?"

'ಬೇಕಂತಲೇ ಇಷ್ಟೆಲ್ಲಾ ಮಾಡುತ್ತಿದ್ದೀಯೆಯೋ?"

"ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಋಣ ತೀರಿಸುತ್ತಿರುವೆ'

"ಈಗೇನಾಯಿತು ನಿನಗೆ? ಅದನ್ನಾದರೂ ಹೇಳು? ಹೊರಗೆ ಎಲ್ಲರೂ ಊಟಕ್ಕೆ ಕಾದಿದ್ದಾರೆ ನಿನ್ನದು ಬೇರೆ ರಾಮಾಯಣ'

'ಇದ್ದಾಳಲ್ಲ ಪುಣ್ಯಪುತ್ರಿ – ಅವಳ ಜೊತೆ ಮಾಡಲಿ"

ರಂಗಮ್ಮನಿಗೆ ಕಾರಣ ತಿಳಿಯಿತು

"ಆ ಮಗುವಿನ ಮೇಲೆ ನಿನ್ನ ದ್ವೇಷವೇ? ಛೀ - ಹಾಗೆ ಮಾಡಬಾರದು"

"ನಾನು ಬರುವುದಿಲ್ಲ"

"ಹಾಳಾಗು" ಎಂದು ರಂಗಮ್ಮ ಹೊರಟುಹೋದರು

ನಂಜುಂಡಯ್ಯ ಗದರಿಸಿ – ಬೈಯ್ದು – ಕಣ್ಣೀರು ಹಾಕಿ ರಾಜಮ್ಮನನ್ನು ಕರೆತಂದರು

ಊಟದ ಶಾಸ್ತ್ರ ಮುಗಿಸಿ, ಯಾರೊಂದಿಗೂ ಮಾತಾಡದೇ ರಾಜಮ್ಮ ತನ್ನ ರೂಮು ಸೇರಿದಳು

ಹೆಣ್ಣಿನ ಮನೆಯಲ್ಲಿ ನಡೆದ ಪ್ರಸಂಗ ಅಲ್ಪಸ್ವಲ್ಪ ನರಸಿಂಹಯ್ಯನ ಕಿವಿಗೆ ಬಿದ್ದಿತ್ತು. ತನ್ನ ಕೋಪವನ್ನು ತಾಯಿಯ ಮೇಲೆ ತೋರಿಸಿದ,

'ಬೇಡಾ – ಬೇಡಾಂತ ಬಡ್ಕೊಂಡೆ. ನೀನು ಕೇಳಿದೆಯಾ? ನೋಡು ಈಗಲೇ ಸುಮಿಯನ್ನು ಕಂಡರೆ ಹೇಗೆ – ಮುಂದೆ ಒಂದು ತುತ್ತು ಅನ್ನ ಹಾಕ್ತಾಳೆಯೋ?"

"ನೀನು ಸರಿಯಾಗಿದ್ದರೆ ಎಲ್ಲರೂ ಬಾಲ ಮುದುರ್ಕೋತಾರೆ"

"ಇವಳು ಒಂದಕ್ಕೊಂತ ಸುಮೀನ್ನ ಅಟ್ಟಿ ಕಳುಹಿಸಬೇಕಾಗಿತ್ತೇನು?"

"ಹೋಗಲಿ ಸುಮ್ಮನಿರು' ಎಂದು ಸೀತಾರಾಮಯ್ಯ ವ್ಯಾಜ್ಯ ಪರಿಹರಿಸಿದ. ರಾಜಮ್ಮ ತೊಡಿಸಿದ ಕಿಚ್ಚು ನರಸಿಂಹಯ್ಯನ ಮನದಲ್ಲಿ ಹೊಗೆಯಾಡುತ್ತಲೇ ಇದ್ದಿತು – ಆ ಕ್ಷಣದಲ್ಲಿ ಅವನಿಗೆ ಮಾಂಜಾಳಿಯ ನೆನಪಾಯಿತು 'ಮಾಂಪೂ ಮಾಂಜೂ' ಎಂದು ತನ್ನಲ್ಲೇ ಹೇಳಿಕೊಂಡ.

ರಾಜಮ್ಮನ ನಡವಳಿಕೆ ಶಾಂತಮ್ಮನಲ್ಲಿ ಸಂಶಯ ಹುಟ್ಟಿಸಿದ್ದರೂ,

"ಮೊದಲು ಮನೆಗೆ ಬರಲಿ – ಇವಳನ್ನು ಬಗ್ಗಿಸುವುದಷ್ಟರಲ್ಲಿದೆ?" ಎಂದು ಸಮಾಧಾನತಂದುಕೊಂಡಳು.

೧೦

ಮದುವೆಯ ತಿಂಡಿ ಸಹಿತ ಬಂದ ಸೀತಾರಾಮುವನ್ನು ಮಂಜುಳೆ ಉಪಚರಿಸಿ ಆಮೂಲಾಗ್ರವಾಗಿ ವಿಷಯ ಸಂಗ್ರಹಿಸಿದಳು ಹಾಗೂ ತಪ್ಪವಂತೆ ಸೀತಾರಾಮು ಹೊರಟ.

"ಜಗದೀಶನೂ ಒಬ್ಬ ಯುವಕ ಆದರೆ ಹುಡುಗಿಯದೇ ಅನುಮಾನ ಸುಮಿತ್ರೆಯೂ ಇವನ ಕೋಪಾಗ್ನಿಗೆ ತುತ್ತಾಗಬೇಕೋ ಎನ್ನಿಸುತ್ತಿದೆ"

"ಹೌದು ಈಗಲೇ ಹೀಗೆ – ಮುಂದೆ ಸರಿಯಾಗಿ ಬಾಳಿಸುವನೇ" ಎಂದು ಮಂಜುಳೆ ಕಳವಳಪಟ್ಟಳು ತಾಯಿಯಿಲ್ಲದ ಆ ಮಗುವಿಗಾಗಿ ಅವಳ ಹೃದಯ ಮಿಡಿಯಿತು

ರಾಜಮ್ಮ ಮದುವೆಯಾದ ಮೂರು ತಿಂಗಳಲ್ಲೇ ಗಂಡನ ಮನೆ ಸೇರಿದಳು ಪಾತಕ್ಕ ಸೊಸೆಗೆ ಬುದ್ಧಿ ಹೇಳಿ ದಾರಿಗೆ ತರಲು ಯತ್ನಿಸಿದರು

"ನೋಡು ತಾಯಿ ಆ ಮಗುವಿಗಾಗಿಯೇ ನರಸಿಂಹ ಮದುವೆಗೆ ಒಪ್ಪಿಗೆ ಕೊಟ್ಟ ನೀನು ಮಗುವನ್ನು ಅನಾದರಿಸಿ ಅವನ ಮನಸ್ಸನ್ನು ಕಹಿ ಮಾಡಬೇಡ"

ಅತ್ತಿಗೆ ರಾಜಮ್ಮ ಯಾವ ಜವಾಬನ್ನೂ ಹೇಳಲಿಲ್ಲ ಅವಳ ತಲೆಯಲ್ಲಿ ಅದೇ ಮಾತುಗಳು ಝೇಂಕರಿಸುತ್ತಿದ್ದವು

'ಸುಮಿತ್ರೆಗಾಗಿಯೇ ನಿನ್ನನ್ನು ಮದುವೆಯಾದುದು'

'ಹಾಗಾದರೆ ಅವರು ನನ್ನನ್ನು ಬಯಸಲಿಲ್ಲ'

'ತಮ್ಮಿಬ್ಬರ ಮಧ್ಯೆ, ತನ್ನ ಗಂಡನ ಪ್ರೇಮದಲ್ಲಿ ಪಾಲುಗಾರಳಾಗಲು

ಇದೊಂದು ಪೀಡೆ ಇವೆಯಲ್ಲಾ' ಎಂದು ರಾಜಮ್ಮನಿಗೆ ಸುಮಿತ್ರೆಯ ಮೇಲೆ ಬಹಳ ಕೋಪ ಬರುತ್ತಿದ್ದಿತು

ಮನೆಗೆ ಹೆಂಡತಿ ಬಂದ ಮೇಲೂ ನರಸಿಂಹಯ್ಯ ತನ್ನ ದಿನಕ್ರಮದಲ್ಲಿ ಯಾವ ಬದಲಾವಣೆಯನ್ನೂ ಮಾಡಲಿಲ್ಲ ರಾತ್ರಿಯೆಲ್ಲಾ ಹೊರಗಿರುತ್ತಿದ್ದವನು ಈಗ ಅರ್ಧರಾತ್ರಿಯಲ್ಲಿ ಮನೆ ಸೇರುವುದಕ್ಕಾರಂಭಿಸಿದ - ಹೆಂಡತಿಯ ಕೈಲಿ ಮಾತಾಡಲೂ ಪುರುಸೊತ್ತಿಲ್ಲ - ಬಲವಂತಕ್ಕೆ ಮನೆಯಲ್ಲಿ ನಿಂತರೆ ಮನಸ್ಸು ಎತ್ತಲೋ!!

ಗಂಡನ ಚರ್ಯೆಯನ್ನು ಕಂಡು ರಾಜಮ್ಮನಿಗೆ ಬೇಸರವೇ ಆಯಿತು ಅವಳು ಕಟ್ಟಿದ್ದ ಆಶಾಗೋಪುರ ಕಳಚಿಬಿದ್ದಿತ್ತು 'ಪಾತಕ್ಕ, ಸುಮಿತ್ರಾ ಇವರೊಡನೆ ಸಂಸಾರ ಮಾಡಲು ನಾನು ಮದುವೆಯಾದೆನೇ?' ಎಂದು ಯೋಚಿಸುತ್ತಿದ್ದಳು 'ಇವತ್ತು ಕೇಳೇಬಿಡುತ್ತೇನೆ' ಎಂದು ಮನಸ್ಸು ಗಟ್ಟಿ ಮಾಡಿಕೊಂಡು ಕುಳಿತುಕೊಳ್ಳುವಳು - ಆ ದಿನ ನರಸಿಂಹಯ್ಯ ಮನೆಗೆ ಬರುವಷ್ಟರಲ್ಲಿ ಯೋಚಿಸಿ ಬೆಂದಾದ ರಾಜಮ್ಮ ನಿದ್ರಾಪರವಶಳಾಗುತ್ತಿದ್ದಳು

ಮಗನ ಬೇಜವಾಬ್ದಾರಿ ಕಂಡು ಪಾತಕ್ಕನೂ ಸಿಡಿಮಿಡಿಗೊಂಡರು

"ಮನೆ ಅಂದ್ರೆ ನಿನಗೆ ಛತ್ರವಾಗಿದೆಯೇನೋ ಮಗು? ಬೇಯಿಸಿಹಾಕಿದ್ದನ್ನ ತಿಂದು ಹೊರಟುಬಿಡುತ್ತೀಯಲ್ಲಾ"

"ಏನಾದರೂ ಸಾಮಾನು ತರಿಸಬೇಕಾಗಿತ್ತೇ?"

"ಸಾಮಾನು ಯಾರಿಗೆ ಬೇಕು? ಸ್ವಲ್ಪ ಜವಾಬ್ದಾರಿ ಮೈಗೆ ಹಾಕಿಕೋ ಪಾಪ - ಆ ಹುಡುಗಿ ಒಂದೇ ಸಮನೆ ಕೊರಗುತ್ತಿದ್ದಾಳೆ ನಿನ್ನ ಕೈ ಹಿಡಿದದ್ದಕ್ಕೆ ಏನು ಸುಖ ಅನುಭವಿಸಿದಂತಾಯಿತು? ಯೋಚಿಸಿ ನೋಡಪ್ಪಾ."

ತಾಯಿಯ ಬುದ್ಧಿವಾದ ಮಗನ ಮೇಲೆ ತಾತ್ಕಾಲಿಕ ಪರಿಣಾಮ ವುಂಟುಮಾಡುತ್ತಿದ್ದಿತು ರಾಜಮ್ಮನಿಗೆ ಆ ಕೆಲವು ದಿನಗಳು ಸುಖ ಸಾಮ್ರಾಜ್ಯದ ದರ್ಶನ ಮಾಡಿಸುತ್ತಿದ್ದವು ಆ ಸುಖ ರಾಜಮ್ಮನ ಪಾಲಿಗೆ ಸ್ಥಿರವಾಗಿ ನಿಲ್ಲುತ್ತಿರಲಿಲ್ಲ ನರಸಿಂಹಯ್ಯ ಕೂಡಲೇ ಪ್ರಪಾತಕ್ಕೆ ತಳ್ಳಿಬಿಡು

ತ್ತಿದ್ದ. ಆ ದಿನಗಳಲ್ಲಿ ನರಸಿಂಹಯ್ಯ ಹೆಚ್ಚು ಮಾತನ್ನು ಆಡುತ್ತಿರಲಿಲ್ಲ. ಆಡಿದರೆ ಒಂದೆರಡು ಮಾತುಗಳು:

'ಸುಮಿ ಊಟಮಾಡಿ ಮಲಗಿದಳೇ?'

'ಸುಮಿ ಸ್ಕೂಲಿಗೆ ಸರಿಯಾಗಿ ಹೋಗುತ್ತಿರುವಳೇ?'

ಸುಮಿ ಅದು ಮಾಡಿದಳೇ? — ಇದು ಮಾಡಿದಳೇ? — ಯಾವಾಗಲೂ ಸುಮಿ — ಸುಮಿ — ತಾವು ಅವಳನ್ನು ಸರಿಯಾಗಿ ಪಾಲಿಸುತ್ತಿಲ್ಲವೇನೋ ಎಂದು ಅನುಮಾನ ಇದ್ದಹಾಗೆ — ಅದಕ್ಕೆ ಈ ರೀತಿ ಎಂದುಕೊಳ್ಳುತ್ತಿದ್ದಳು ರಾಜಮ್ಮ. ಗಂಡನಿಗೆ ತನ್ನನ್ನು ಕಂಡರಷ್ಟು ಉಪೇಕ್ಷೆ ಎಂದು ಭಾವಿಸುತ್ತಿದ್ದಳು. ಸಾತಕ್ಕ ಅವಳ ಕಣ್ಣೀರನ್ನು ಕಂಡೂ ಕಾಣದಂತಿರುತ್ತಿದ್ದಳು.

ಚಿಕ್ಕಮ್ಮ ಒಬ್ಬಳೇ ಯೋಚಿಸುವುದನ್ನು ಕಂಡರೆ ಸುಮಿತ್ರಾ ಆಟಕ್ಕೂ ಹೋಗದೆ ತನ್ನ ನಿರ್ಮಲ ಹೃದಯದಿಂದ ಅವಳನ್ನು ಸಮಾಧಿಯುರೆತ್ತಿಸುತ್ತಿದ್ದಳು. ತನ್ನ ಗೆಳತಿಯರ ವೃತ್ತಾಂತ - ಸ್ಕೂಲಿನ ಸಂಗತಿ ಎಲ್ಲವನ್ನೂ ಆತ್ಯಾಸಕ್ತಿಯಿಂದ ವರ್ಣಿಸುತ್ತಿದ್ದಳು. ರಾಜಮ್ಮ ನೆಪಮಾತ್ರಕ್ಕೆ ಹೂಗುಟ್ಟುತ್ತಿದ್ದರೂ ಅವಳ ಚಿತ್ತ ಬೇರೆಡೆ ಹಾರಾಡುತ್ತಿದ್ದಿತು — ಸ್ವಲ್ಪ ಹೊತ್ತಾದ ಮೇಲೆ ಸುಮಿತ್ರೆ ಬೇಸರದಿಂದ

"ಹೋಗು ಚಿಕ್ಕಮ್ಮಾ, ನೀನು ನನ್ನ ಮಾತೇ ಕೇಳೋಲ್ಲ."

"ಇಲ್ಲ ಹೇಳು ಸುಮೂ."

ಸುಮಿತ್ರೆಯ ಗಮನ ಬೇರೆಡೆ ಹರಿಯುತ್ತಿದ್ದಿತು.

"ಯಾಕೆ ಚಿಕ್ಕಮ್ಮ ಯಾವಾಗಲೂ ಒಂದು ತರಾ ಇರುತ್ತೀ?"

ಮಗುವಿಗೂ ತನ್ನ ಗುಟ್ಟು ಗೊತ್ತಾಗಿದೆಯೆಂದು ತಿಳಿದು ರಾಜಮ್ಮ ನಾಚುತ್ತಿದ್ದಳು. ಅವರೂ ತೋರಗೊಡುತ್ತಿರಲಿಲ್ಲ.

"ಅಣ್ಣ ಯಾಕೆ ಸುಮ್ಮನೆ ರೇಗಾಡುತ್ತಾನೆ"

"ಯಾಕೋಮ್ಮ ಗೊತ್ತಿಲ್ಲ"

"ನಾ ಕೇಳುತ್ತೇನೆ ಸುಮ್ಮನಿರು" ಎಂದು ಚಿಕ್ಕಮ್ಮನನ್ನು ಸಂತೈಸುತ್ತಿದ್ದಳು.

ಒಬ್ಬಳೇ ಕಾಲಕಳೆಯುತ್ತಿದ್ದ ರಾಜಮ್ಮನಿಗೆ ಪಕ್ಕದ ಮನೆ

ಭಾಗೀರತಿಯ ಸ್ನೇಹವಾಯಿತು ಊಟ – ತಿಂಡಿ ವಿಚಾರಣೆಯ ಪ್ರಾರಂಭವಾದ ಗೆಳೆತನ, ಸಪೃಥಪ್ರೇಮವಾಗಿ ಪರಿಣಮಿಸಿತು

ಭಾಗೀರತಿಯ ಗಂಡ ಇಂಪೀರಿಯಲ್ ಬ್ಯಾಂಕಿನಲ್ಲಿ ಅಕೌಂಟೆಂಟ್ ಗಂಡ – ಹೆಂಡತಿ ಮೂರು ಚಿಕ್ಕಮಕ್ಕಳು ರಾಜಮ್ಮನಿಗಿಂತಾ ಹಿರಿಯವಳಾದ ಭಾಗೀರತಿ ಕಿರಿಯವಳಾದ ರಾಜಮ್ಮನಿಗೆ ಮಾರ್ಗದರ್ಶಕಳಾದಳು ಯಾವಾಗಲೂ ಜೋಲುಮುಖ ಹಾಕಿಕೊಂಡಿರುತ್ತಿದ್ದ ರಾಜಮ್ಮನನ್ನು,

“ಇದೇನ್ರೀ ರಾಜಮ್ಮ ಒಣಗಿದ್ದೀರಿ? ಮಾತಾಡ್ರೀ” ಎಂದು ಪದೇ ಪದೇ ಕೇಳುತ್ತಿದ್ದಳು

“ಏನೂ ಇಲ್ಲ”

ಆ ವಿಷಯ ಅಷ್ಟಕ್ಕೇ ಬಿಟ್ಟು ಭಾಗೀರತಿ ತನ್ನ ವಿಷಯಕ್ಕೆ ಬರುತ್ತಿದ್ದಳು

“ನೋಡ್ರೀ ರಾಜಮ್ಮ ನಿನ್ನೆ ಕಂಟೋನ್ಮೆಂಟಿಗೆ ಹೋಗಿದ್ದೆವು”

“ಅದೇನು?”

“ಅಲ್ಲಿ ಯಾವುದೋ ಇಂಗ್ಲೀಷ್ ಪಿಕ್ಚರಂತೆ – ತುಂಬಾ ಚೆನ್ನಾಗಿದೆ ಅಂತ ಇವರು ಎಳೆದುಕೊಂಡು ಹೋದರು ನನಗೇನರ್ಥವಾಗುತ್ತೆ? ಅಂತ ಎಷ್ಟು ಹೇಳಿದರೂ ಕೇಳಲಿಲ್ಲ”

“ಸಿನಿಮಾ ಹೇಗಿತ್ತು?”

“ಥೂ ಅಸಹ್ಯ ನನಗಂತೂ ತುಂಬಾ ಬೇಜಾರಾಯಿತು.”

ರಾಜಮ್ಮ ನಕ್ಕು ಸುಮ್ಮನಾದಳು ಭಾಗೀರತಿ ಅಲ್ಲಿಗೇ ಬಿಡಲಿಲ್ಲ

“ಬರುವಾಗ ಕಬ್ಬನ್‌ಪಾರ್ಕಿಗೆ ಹೋಗಿದ್ದೆವು ಆ ಹೋಟಲಿನ ದೋಸೆ ತುಂಬಾ ಚೆನ್ನಾಗಿರುತ್ತ ರಾಜಮ್ಮ”

ತಾನು ಅನುಭವಿಸಿದ ರಸನಿಮಿಷಗಳನ್ನು ಭಾಗಿರತಿ ವರ್ಣಿಸುತ್ತಿದ್ದರೆ ರಾಜಮ್ಮನ ಹೊಟ್ಟೆಯಲ್ಲಿ ತಳಮಳವಾಗುತ್ತಿದ್ದಿತು ತನಗೆ ಅದೆಲ್ಲಾ ಲಭ್ಯವಿಲ್ಲವಲ್ಲಾ? ಎಂದು ದುಃಖಿಸುತ್ತಿದ್ದಳು ಅವಳ ಸಿಟ್ಟುಸಿರನ್ನು ಕಂಡು

“ಇದೇಕ್ರೀ?”

ರಾಜಮ್ಮ ಮಾತಿಗೆ ಉತ್ತರ ಕೊಡುತ್ತಿರಲಿಲ್ಲ

“ಸುಮೀ ಜಡೆ ಹಾಕುತ್ತೇನೆ ಬಾ” ಎಂದು ಸುಮಿತ್ರೆಯನ್ನು ಕರೆದು

ಕೂರಿಸಿಕೊಳ್ಳುತ್ತಿದ್ದಳು ಬಾಚಿದ ಕೂದಲನ್ನೇ ಮತ್ತೆ ಮತ್ತೆ ಬಾಚುವಳು– ನೀರು ಸವರುವಳು – ಪುನಃ ಬಾಚುವಳು ಎಷ್ಟು ಹೊತ್ತಾದರೂ ಜಡೆ ಮುಗಿಯುತ್ತಿರಲಿಲ್ಲ ಬೇಸರಗೊಂಡು ಸುಮಿತ್ರೆ

"ಇರ್ಲಿಸು ಚಿಕ್ಕಮ್ಮಾ ಎಷ್ಟು ಹೊತ್ತಾಯಿತು – ನನಗೆ ಕತ್ತು ನೋವು ಬಂತು' ಎಂದು ತಲೆಬಾಗಿಸುತ್ತಿದ್ದಳು

ಎತ್ತೆತ್ತಲೋ ಹಾರಾಡುತ್ತಿದ್ದ ಚಿತ್ತ ಸ್ಥಿಮಿತಕ್ಕೆ ಬರುತ್ತಿದ್ದಿತು

'ಮುಗಿದು ಹೋಯಿತು" ಎಂದು ಹೇಗೋ ಮೂರುಕಾಲು ಸುತ್ತಿ ಕಳುಹಿಸುತ್ತಿದ್ದಳು, ಅವಳ ಅನ್ಯಮನಸ್ಕತೆಯನ್ನು ಕಂಡು ಭಾಗೀರಥಿ,

'ನಿಮ್ಮ ಯಜಮಾನರೆಲ್ಲಿ? ರಾಜಮ್ಮ'

"ಇಲ್ರೀ ಊರಿಗೆ ಹೋಗಿರುವರು"

"ಅಹುದೇನ್ರೀ? ಒಂದುಘಳಿಗೆ ಮನೇಲಿರೋದಿಲ್ಲ ಚಿಕ್ಕಪುಟ್ಟ ಹುಡುಗಿಯನ್ನ ಹೀಗೆ ಬಿಟ್ಟರೆ ಬೇಸರಬರುವುದಿಲ್ಲವೇ?"

"ಏನೋ ಕೆಲಸವಂತೆ!"

ಅದೇನ್ರೀ ಅಂಥಾ ನಿರ್ವಾಹವಿಲ್ಲದ ಕೆಲಸ? ನಾನಂತೂ ನಂಬಲಾರೆ" ಎಂದು ರಾಜಮ್ಮನ ಮನಸ್ಸಲ್ಲಿ ಅನುಮಾನ ಬಿತ್ತಿದಳು

ತನ್ನಲ್ಲೇ 'ನಿಜವಿರಬಹುದು' ಎಂದುಕೊಂಡಳು ರಾಜಮ್ಮ ಅನುಮಾನ ಬಂದಕೂಡಲೇ ಕೂಲಂಕಷವಾಗಿ ತಿಳಿಯಬೇಕೆಂದು ಹಟತೊಟ್ಟಳು

"ನೀವೇ ನನ್ನ ಅಕ್ಕ ಭಾಗೀರತಮ್ಮ ಇವರ ರಹಸ್ಯ ನನಗೆ ಅರ್ಥವೇ ಆಗುವುದಿಲ್ಲ ನೋಡಿ ಕೆಲಸ – ಕೆಲಸ ಅಂತ ಯಾವಾಗಲೂ ಹೇಳ್ತಾರೆ– ರಾತ್ರಿ ಬರುವುದಕ್ಕೂ ಹೊತ್ತುಗೊತ್ತು ಒಂದೂ ಇಲ್ಲ ನನ್ನ ಹತ್ರಾನೂ ಸರಿಯಾಗಿ ಮಾತಾಡೋಲ್ಲಾ"

"ನೀವದನ್ನೆಲ್ಲಾ ನಂಬಿದಿರಾ?"

"ಹೂನ್ರೀ ಇರಬಹುದೂಂತ ಇದ್ದೆ ನೀವು ನನ್ನ ಕಣ್ಣು ತೆರೆಸಿದಿರಿ"

"ಗಂಡಸರನ್ನ ನಂಬಬಾರದು ರಾಜಮ್ಮ ಅವರ ಬುದ್ಧೀನೇ ಅಷ್ಟು– ಒಳಗೊಂದು – ಹೊರಗೊಂದು"

" "

"ನೀವೇನೇ ಹೇಳಿ – ಕೈ ಹಿಡಿದ ಹೆಂಡತಿಗೆ ದ್ರೋಹಮಾಡಬಾರದು."

ಭಾಗೀರತಮ್ಮನಿಗೆ ಅನೇಕ ವಿಷಯಗಳು ತಿಳಿದಿವೆಯೆಂದು ರಾಜಮ್ಮ ನಂಬಿದಳು

"ಏನ್ರೀ ವಿಷಯ ?"

"ನೀವೇನೂ ಅಂದುಕೊಳ್ಳದಿದ್ದರೆ ಹೇಳ್ತೀನಮ್ಮ – ಗಂಡ ಹೆಂಡತಿಗೆ ವೈಷಮ್ಯ ತಂದು ಹಾಕಿದ ಪಾಪಕ್ಕೆ ನಾನೇಕೆ ಗುರಿಯಾಗಲಿ "

'ಇರೋ ವಿಷಯ ತಿಳಿಸಿದರೆ ಪಾಪವೇನು ಬರುತ್ರೀ ? ಹೇಳಿ– ಭಾಗೀರತಮ್ಮ" ಎಂದು ರಾಜಮ್ಮ ಪೀಡಿಸಿದಳು

"ನಿನ್ನೆ ಕಂಟೋನ್ಮೆಂಟಿಗೆ ಹೋಗಿದ್ದೆನಲ್ಲಾ ಅಲ್ಲಿ ನಿಮ್ಮ ಯಜಮಾನ ರನ್ನ ನೋಡಿದೆ "

"ಅವರೂ ಸಿನಿಮಾಕ್ಕೆ ಬಂದಿದ್ದರೆ

"ಹೂಂ – ಒಬ್ಬರೇ ಅಲ್ಲ'

"ಸೀತಾರಾಮು ಇರಬಹುದು "

"ಅವರೂ-ಇದ್ದರೂ - ಜೊತೆಯಲ್ಲಿ ಒಬ್ಬ ಹೆಂಗಸು-ಒಬ್ಬ ಹುಡುಗ ಅವಳ ತಮ್ಮ ಇರಬಹುದು "

"ಯಾವುದೋ ಸೀತಾರಾಮು ಮನೆಯವರಿರಬಹುದು "

"ಅಯ್ಯೋ – ನಿಮ್ಮ ಬುದ್ಧಿಗೇನು ಹೇಳಲಿ ? – ಸೀತಾರಾಮು ಮನೆ ಹೆಂಗಸು ಬಂದು ನಿಮ್ಮ ಯಜಮಾನ್ರ ಪಕ್ಕದಲ್ಲಿ ಕೂತ್ಕೋತಾಳೇನ್ರೀ ?"

ರಾಜಮ್ಮ ನಿರುತ್ತರಳಾದಳು

"ನಾನೂ ಹಾಗೇ ನಂಬಿದೆ ಕಣ್ರೀ, ನಮ್ಮ ಯಜಮಾನರು ಹೇಳಿದರು ಆಕೆ ಸ್ನೇಹಿತಳಂತೆ – ನೀವು ಬರುವುದಕ್ಕೆ ಮುಂಚಿನಿಂದಲೂ ಗೊತ್ತಂತೆ "

"ಅವಳ ಹೆಸರೇನ್ರೀ " ನಿಮಗೆ ಗೊತ್ತೆ "

"ಮಂಜುಳಾ ಯಾವುದೋ ಸ್ಕೂಲಿನ ಮೇಡಮ್ಮಂತೆ "

"ಮಂಜುಳಾನೇ ? ಹಾಂ ಈಗ ತಿಳಿಯಿತು."

"ಏನ್ರೀ"

"ನಿಮ್ಮ ಯತ್ರಾ ಮುಚ್ಚಿಡೋ ಅಂತ ವಿಷಯ ಏನಿದೆ-ಕೇಳಿ–ಈಗ ಸ್ವಲ್ಪದಿನದ ಕೆಳಗೆ ನಿದ್ರೆಯಲ್ಲಿ ಅವರು ಏನೇನೋ ಬಡಬಡಿಸುತ್ತಿದ್ದರು –

ಆಗಾಗ್ಯೆ 'ಮಂಜು – ಮಂಜು' ಅಂತ ಕನವರಿಸಿಕೊಳ್ಳುತ್ತಿದ್ದ ಹಾಗಿತ್ತು. – ನಾನು ಕೇಳಿದ್ದಕ್ಕೆ ಏನೇನೋ ಸುಳ್ಳು ಹೇಳಿ ನಂಬಿಸಿಬಿಟ್ಟರು ನೋಡಿ – ನೀವು ಹೇಳಿದಮೇಲೆ ನನಗೆಲ್ಲಾ ಅರ್ಥ ಆಗುತ್ತಿದೆ"

"ಈ ವಿಷಯ ನಿಮ್ಮತ್ತೆ ಹೇಳಲಿಲ್ಲವೇ ?'

'ಅವರಿಗೂ ಗೊತ್ತೇನು ?"

'ನೀವ್ಹೇಳೋದು ನಿಜ – ಊರಿಗೆ ಊರೇ ಆಡುತ್ತೆ – ನೀವು ಹೊಸದಾಗಿ ಕೇಳ್ತಿದೀರಿ — ಮಾವನೋರ ಹೆಂಡತೀನೂ ಇವರ ಕೊರಗಿನಿಂದ ಪ್ರಾಣಬಿಟ್ಟ ಅಂತ–ನೀವೇನಾದರೂ ಕೊರಗಿ ಕಡ್ಡಿಯಾದೀರಿ – ಎಚ್ಚರಿಕೆ"

'ಎಲ್ಲರೂ ಸೇರಿ ನನಗೆ ಮೋಸಮಾಡುತ್ತಿದ್ದಾರೆ – ನೋಡಿದಿರಾ ಭಾಗೀರತಮ್ಮ"

ಹೌದ್ರೀ ಈ ಪ್ರಪಂಚದಲ್ಲಿ ಯಾರನ್ನೂ ನಂಬುವುದಕ್ಕಾಗುವುದಿಲ್ಲ– ನಮ್ಮವರೇ ನಮ್ಮನ್ನೀತಿ ಕತ್ತು ಹಿಸುಕುತ್ತಾರೆ – ಈ ತೊಂದರೆನೆಲ್ಲಾ ನಾನೂ ಅಷ್ಟಿಷ್ಟು ಅನುಭವಿಸಲಿಲ್ಲಾಮ್ಮ – ಇಂದಿನಸ್ಥಿತಿಗೆ ಬರೋದಕ್ಕೆ ನಾನು ಪಡಬಾರದ ಪಾಡು ಪಟ್ಟೆ'

"ನಿಮಗೇನ್ರಿ – ರಾಣಿ ಇದ್ದ ಹಾಗಿದ್ದೀರ – ಮನೇಲಿ ಅತ್ತೆ ಅತ್ತಿಗೆ ಕಾಟವೇ–ಬಲಿಮುಂಡೆ ಕಾಟವೇ ? ಮುತ್ತಿನಂಥಾ ಗಂಡ – ಮಕ್ಕಳು"

"ಹೇಳುವುದಕ್ಕೆ ಸುಲಭಾಕಣ್ರೀ – ನಾನೂ ತಾಟಕಿ ಅತ್ತೆ ಕೈಲಿ ಅನುಭವಿಸಿರುವುದನ್ನ ನೆನೆಸಿಕೊಂಡರೆ ಈಗಲೂ ನಡುಕ ಬರುತ್ತದೆ – ನಿಮ್ಮ ಪಾತಕ್ಕೆ ಸಾವಿರ ಪಾಲು ವಾಸಿ – ಅವರಿದ್ದಷ್ಟೂ ದಿನವೂ ಹೊರಗೆ ಅವರು ದುಡಿಯುವುದು – ಒಳಗೆ ನಾನು ದುಡಿಯುವುದು – ಮಹಾರಾಯ್ತಿ ಚಿತ್ರಹಿಂಸೆಕೊಟ್ಟಳು"

"ಈಗೆಲ್ಲಿದಾರೆ ?"

"ಇವರು ಸಂಪಾದಿಸಿ ತಂದಿದ್ದನ್ನೆಲ್ಲಾ ಹೆಣ್ಣು ಮಕ್ಕಳ ತೊಳ್ಳೀಗೆ ಸುರೀತಿದ್ರೆ ನಾವೇನ್ರಿ ಮಾಡಬೇಕು ? – ಅನುಭವಿಸುವಷ್ಟೂ ಅನುಭವಿಸಿದೆ – ಕೊನೆಗೆ ಮನೆಯಿಂದಾಚೆಗೆ ಹಾಕಿದೆ"

"ಪಾಪ"

"ನಿಮಗೆ ತಿಳಿಯದು ರಾಜಮ್ಮ ಅವರಿಗೆ ಹಾಗೇ ಮಾಡಬೇಕು –

ಹಾಗೆ ನಾನು ಧೈರ್ಯವಾಗಿ 'ಬಂದ ಅಪವಾದ ಬರಲಿ' ಅಂತ ನಿಲ್ಲದಿದ್ರೆ ಇವತ್ತು ನನ್ನ ಸಂಸಾರ ಈ ಸ್ಥಿತಿಗೆ ಬರುತ್ತಿತ್ತೇ?"

"ನಾನೇನ್ರೀ ಮಾಡಲಿ?"

"ನೀವು ಮಾಡುತ್ತಿರುವುದು ಸರಿಯೇ ಅಂತ ನಿಮ್ಮ ಯಜಮಾನ್ರನ್ನೇ ಕೇಳ್ರೀ"

"ಅವರು ಜೋರಿಗೆ ಬಗ್ಗಿದ್ರೆ?"

"ತೌರು ಮನೆಗೆ ಹೋಗ್ತೀನಂತ ಹೆದರಿಸಿ – ತಾನೇ ದಾರಿಗೆ ಬರ್ತಾರೆ"

"ನನ್ನನ್ನು ಬಾ ಅಂತ ಕರೆಯೋರು ಯಾರಿದ್ದಾರ್ರೀ ಭಾಗೀರತಮ್ಮ"

"ಈಗ ನೀವು ಧೈರ್ಯ ತೆಗೆದುಕೊಳ್ಳದಿದ್ರೆ ಮುಂದೆ ನಿಮಗೇ ಕಷ್ಟ ಕಣ್ರೀ" ಎಂದು ರಾಜಮ್ಮನಿಗೆ ಬುದ್ಧಿ ಹೇಳಿ,

"ಬರ್ತೀನ್ರೀ ನಿಮ್ಮತ್ತೆ ಬಂದರು' ಎಂದಳು. ಸಾತಕ್ಕ ಹತ್ತಿಬುಟ್ಟಿ ಒಂದು ಕೈಲಿ – ಒಡೆದ ತೆಂಗಿನಕಾಯಿ ಹೋಳುಗಳನ್ನು ಇನ್ನೊಂದು ಕೈಲಿ ಹಿಡಿದು ಪ್ರವೇಶಿಸಿದರು. ಭಾಗೀರತಮ್ಮ ಹೊರಬರುವುದನ್ನು ಕಂಡು ಪ್ರಸಾದದ ಕುಂಕುಮ, ಕಾಯಿಚೂರು ಕೊಟ್ಟರು

"ಹರಿಕಥೆಗೆ ಹೋಗಿದ್ದಿರಾ ಅಜ್ಜಿ?"

"ಹೂಮ್ಮ, ಮನೇಲಿ ಕೂತರೆ ಹೊತ್ತು ಹೇಗೆ ಹೋಗುತ್ತೆ ಹೇಳಿ?"

"ಬರ್ತೀನಜ್ಜಿ, ಮಕ್ಕಳಿಗೆ ಬಡಿಸಬೇಕು" ಎಂದು ಭಾಗೀರತಮ್ಮ ಮನೆಗೆ ಹೊರಟಳು.

# ೧೧

ಭಾಗೀರಥಮ್ಮ ನೆಟ್ಟ ಸಸಿ ಬೆಳೆದು ವೃಕ್ಷವಾಗಲು ಬಹಳ ದಿನ ಬೇಕಾಗಲಿಲ್ಲ. ಪಾತಕ್ಕ, ಸಾವಿತ್ರಿ ಎಲ್ಲರೂ ರಾಜಮ್ಮನಿಗೆ ವೈರಿಗಳಂತೆ ಕಂಡರು. ಪಾತಕ್ಕನ ಒಂದೊಂದು ನಡವಳಿಕೆಗೂ ವಿಪರೀತ ಅರ್ಥ ಕಲ್ಪಿಸಿ ರಾಜಮ್ಮ ದೋಷಾರೋಪಣ ಮಾಡುತ್ತಿದ್ದಳು. ಸುಬ್ಬಿ ಪ್ರೀತಿಯಿಂದ 'ಚಿಕ್ಕಮ್ಮ' ಎಂದು ಬಂದರೆ ಅವಳೆಡೆ ಉಗ್ರ ನೋಟ ಬೀರಿ ಸುಮ್ಮನಾಗಿಸುತ್ತಿದ್ದಳು. ಮನೆಯಲ್ಲಾಗುತ್ತಿದ್ದ ಬದಲಾವಣೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಪಾತಕ್ಕ ಆಗಾಗ್ಗೆ ಎಚ್ಚರಿಸುತ್ತಿದ್ದರು.

“ಗಂಡನ ಜೊತೆ ನಾವೂ ಹಟಕಟ್ಟಿದರೆ ಸಂಸಾರ ಛಿದ್ರವಾಗುತ್ತದೆ ರಾಜು – ಹೆಂಗಸು ತಾಳ್ಮೆಯ ಗಣಿಯಂತಿರಬೇಕು.”

“ಹೌದು ಸಿಕ್ಕಿದವರೊಡನೆ ಇವರು ಲಲ್ಲೆಯಾಡುತ್ತಿದ್ದರೆ ನಾನು ತಾಳ್ಮೆಯಿಂದ ಸಹಿಸಿಕೊಂಡಿರಬೇಕು ಅಲ್ಲವೇ ?”

“ಹಾಗೆ ಮಾಡೋರು ಯಾರೇ ?”

“ಅಹಾಹಾ, ಗೊತ್ತಿಲ್ಲದಂತೆ ಯಾರೂ ಅಂತ ಕೇಳ್ತೀರಲ್ಲಾ – ಹೇಳ್ತೀನಿ ಕೇಳಿ – ನಿಮ್ಮ ಮಗ”

“ನಿನಗೆ ಯಾರು ಹೇಳಿದರು”

“ಊರಿಗೆ ಊರೇ ನಿಮ್ಮ ಮಗನ ಕಲ್ಯಾಣಗುಣವನ್ನು ಹೊಗಳುತ್ತಿರುವಾಗ ಯಾರು ಯಾಕೆ ಹೇಳಬೇಕು ?”

“ಚೆನ್ನಾಗಿದೇಮ್ಮ – ಹೆಂಡತಿ ಅನಿಸಿಕೊಂಡ ನೀನೇ ಹೀಗೆ ಪತಿನಿಂದನೆ ಮಾಡಿದರೆ ಹೊರಗಿನೋರು ಸಂಸಾರದಲ್ಲಿ ಬಾಯಿ ಹಾಕುವುದು ಹೆಚ್ಚೇ.”

"ಚಿಕ್ಕಮ್ಮ ಬೈದಳು" ಎಂದು ಅಳುತ್ತಾ ಬಂದು ಸುವಿ ತನ್ನ ತಟ್ಟೆಯ ಮುಂದೆ ಕೂತಳು

ಸೊಸೆ ಎಷ್ಟು ಹೊತ್ತಿಗೂ ಬಾರದಿದ್ದುದನ್ನು ಕಂಡು ಪಾತಕ್ಕನೇ,

"ಏಳು ರಾಜೂ ಊಟ ಬಿಡಬಾರದು '

"ಸಾಕು ಹೋಗಿ–ನಿಮ್ಮ ಮನಸ್ಸಿಗೆ ತೃಪ್ತಿಯಾಯಿತೋ ಇಲ್ಲವೋ?"

"ಅವನು ದುಡುಕಬಾರದಾಗಿತ್ತು – ಏಳು"

"ತಾನೇ ಚುಚ್ಚಿಕೊಟ್ಟು ಈಗ ತಪ್ಪು ಬೇರೊಬ್ಬರ ಮೇಲೆ ಹಾಕ್ತೀರಲ್ಲಾ"

"ನಿನ್ನ ನಾಲಿಗೆಗೆ ಲಂಗೂ ಲಗಾಮು ಯಾವುದೂ ಇಲ್ಲ" ಎಂದುಕೊಂಡು ಪಾತಕ್ಕ ಒಳಗೆ ಹೋದರು

ರಾಜಮ್ಮ ಸಟೆದುಕೊಂಡೇ ಕುಳಿತಳು

ನರಸಿಂಹಯ್ಯ ಹೆಂಡತಿಯ ಹಟ ಕಂಡು ಬೇಸತ್ತರೂ ತಾನು ಹಾಗೆ ವಿವೇಕಶೂನ್ಯನಂತೆ ವರ್ತಿಸಬಾರದಾಗಿತ್ತು ಎಂದು ಪಶ್ಚಾತ್ತಾಪಗೊಂಡ ಸಮಾಧಾನಪಡಿಸಬೇಕೆನ್ನಿಸಿತು, ಊಟವಾದೊಡನೇ ಬಂದು ಹತ್ತಿರ ಕುಳಿತು,

"ರಾಜೂ ನನ್ನ ಮೇಲೆ ಕೋಪ ಬಂತೇ?" ಎಂದು ಅಂತಃಕರಣದಿಂದ ಕೇಳಿದ

ಗಂಡನ ಮಾತಿನಿಂದ ರಾಜಮ್ಮನ ದುಃಖ ಹೆಚ್ಚಿತು ಬಿಕ್ಕಿ ಬಿಕ್ಕಿ ಅತ್ತು ಸಮಾಧಾನ ತಂದುಕೊಂಡಳು

"ನಾನು ದುಡುಕಿದೆ ಕ್ಷಮಿಸು ರಾಜು"

" "

"ನಾನು ಹಾಗೆ ಹೊಡೆಯಬಾರದಾಗಿತ್ತು ಕೋಪದಲ್ಲಿ ನನಗೆ ಬುದ್ಧಿ ಮಂಕಾಯಿತು ಇನ್ನೆಂದಿಗೂ ನಿನ್ನ ಮೇಲೆ ಕೈಮಾಡುವುದಿಲ್ಲ ಏಳು – ಊಟ ಮುಗಿಸಿ ಬಾ"

ಕಣ್ಣೊರಸಿಕೊಂಡು ರಾಜಮ್ಮ ಊಟ ಮುಗಿಸಿ ಬಂದಳು ತನ್ನ ಮಾತಿನಂತೇ ನಡೆದುದನ್ನು ಕಂಡು ನರಸಿಂಹಯ್ಯನಿಗೆ ಹರ್ಷವಾಯಿತು. ನಗುತ್ತಾ, "ಇನ್ನೂ ಕೋಪವಿದೆಯೆ?" ಎಂದ

"ಸುಮ್ಮನೆ ಅಳುವುದಕ್ಕೆ ನನಗೇನು ಹುಚ್ಚಿ ? ಈ ಮನೆಯಲ್ಲಿ ನಾನು ಯಾರಿಗೆ ಬೇಕಾಗಿವೆ - ಕಟ್ಟಿಕೊಂಡ ನಿಮಗೇಬೇಕಿಲ್ಲ, ಅಂದಮೇಲೆ ನಾನು ಕಸಕ್ಕಿಂತಾ ಕಡೆ "

"ನಾನೇನಾವಮೂ ನಿನಗೆ ಕಡಿಮೆ ಮಾಡಿರುವೆನೇ ?'

"ಹೊಟ್ಟೆ - ಬಟ್ಟೆಗೆ ಹಾಕಿಬಿಟ್ಟರೆ ಮುಗಿದುಹೋಯಿತೇ ? ಈ ಸಂಪತ್ತಿಗೇ ನನ್ನನ್ನು ಮದುವೆಯಾದುದು ?"

" "

"ವಾರ - ಹದಿನೈದು ದಿನಗಳಾದರೂ ನನ್ನ ಕಡೆ ತಿರುಗಿಯೂ ನೋಡುವುದಿಲ್ಲವಲ್ಲಾ - ನಾನು ಹೇಗಿರಬೇಕು ?"

'ನಾನು ನಿನಗೆ ಅನ್ಯಾಯ ಮಾಡುತ್ತಿದ್ದೇನೆ ಕ್ಷಮಿಸು ರಾಜು "

ಕ್ಷಮಿಸು - ಕ್ಷಮಿಸು ಸುಮ್ಮನೆ ಕ್ಷಮಿಸಿನೆನೆಂದರೆ ಏನು ಬಂದ ಹಾಗಾಯಿತು ? ಇನ್ನುಮೇಲೆ ಹೀಗೆ ಮಾಡುವುದಿಲ್ಲವೆಂದು ಮಾತುಕೊಡಿ "

ರಾಜಮ್ಮ ಎಲಡಿಕೆ ಮಡಿಸಿಕೊಡುತ್ತಾ, "ಅಲ್ಲಾಂದ್ರೆ ಈ ಮನೆಯಲ್ಲಿ ನನಗಷ್ಟು ಸ್ವತಂತ್ರವಿಲ್ಲವೇ ?"

'ಯಾಕಿಲ್ಲ "

"ಭಾಗೀರಥಮ್ಮನಿಗೆ ಒಂದು ಚೂರು ತಿಂಡಿ ಕೊಟ್ಟಿದ್ದಕ್ಕೆ ಸಾಯಬೀಳ ಹೊಡೆದಿರಲ್ಲಾ "

"ದಿನವೂ ಕೊಡುತ್ತೀಯಂತೆ "

"ನನಗೇನು ಬುದ್ಧಿ ಇಲ್ಲವೇ ? ಯಾರು ಏನು ಹೇಳಿದರೂ ನಂಬಿ ಕೊಂಡು ಎಲ್ಲರೂ ಸೇರಿ ನನ್ನನ್ನೇ ಬೈಯುವಿರಲ್ಲಾ - ಮುಖ್ಯ ನಾನಿರ ಬಾರದು "

"ಪುನಃ ಗಂಗಾ ಭವಾನಿ ಹಂಸಬೇಡ "

"ಆಗಲಿ ಪ್ರಯತ್ನಿಸುತ್ತೇನೆ "

ಒಗಟಿನಂತೆ ಮಾತಾಡುತ್ತೀರಲ್ಲಾ "

"ಆ ಮಾತು ಈಗ ಬೇಡ ಬಾ ರಾಜೂ "

ರಾಜಮ್ಮ ವಿಷಯವನ್ನು ಅಲ್ಲಿಗೇ ಬಿಡಲಿಲ್ಲ ಗಂಡ ನಿದ್ರಿಸಲೆತ್ನಿಸು ತ್ತಿದ್ದುದನ್ನು ಕಂಡು,

"ಅವಳು ಯಾರೊಂಪ್ರೇ?"

"ಯಾರೇ?"

"ನೀವು ಯಾರ ಜತೆಯೋ ಸಿನಿಮಾಕ್ಕೆ ಹೋಗಿದ್ದರಂತೆ"

"ನಿನಗೆ ಯಾರು ತಿಳಿಸಿದರು?"

"ಭಾಗೀರತಮ್ಮ"

"ಇಂಥಾ ಮನೆಮುರುಕಿ ನಿನ್ನ ಸ್ನೇಹಿತಳೋ"

"ಮನೆಮುರುಕತನ ಏನು ಬಂತು? ಇರೋ ವಿಷಯ ತಿಳಿಸಿದಳು"

"ಅವಳಿಗೇನು ಗೊತ್ತು ನನ್ನ ವಿಷಯ?"

"ಊರಿಗೆ ಊರೇ ಹೇಳುತ್ತೆ."

"ಏನಂತ"

"ಮಂಜುಳಾ ಅನ್ನೋಳನ್ನ ನೀವು 'ಇಟ್ಟುಕೊಂಡಿದೀರಿ' ಅಂತಾ"

"ಮುಚ್ಚೇ ಬಾಯಿ" ಎಂದು ನರಸಿಂಹಯ್ಯ ಗದರಿಸಿದ

"ಅವಳಿರುವಾಗ ನಾನು ಹೇಗೆ ಬೇಕಾಗುತ್ತೆ ಹೇಳಿ? ನಿಮ್ಮ ಮಗಳನ್ನ ಸಾಕಲು ನಾನು ಬೇಕಾಗಿತ್ತು – ಮದುವೆಯಾದಿರಿ" ಎಂದು ರಾಜಮ್ಮ ಪುನಃ ಅಳಲು ಪ್ರಾರಂಭಿಸಿದಳು

"ಮೂರು ಹೊತ್ತು ಅಳು" ಎಂದ

ನರಸಿಂಹಯ್ಯ ಎದ್ದು ಕೋಟು ಹಾಕಿಕೊಂಡು ಅಭ್ಯಾಸ ಬಲದಂತೆ ಮಂಜುಳೆಯ ಮನೆಗೆ ಹೊರಟ

ನಿಶಿರಾತ್ರಿಯಲ್ಲಿ ತನ್ನನ್ನರಸಿಕೊಂಡು ಬಂದ ನರಸಿಂಹಯ್ಯನನ್ನು ಕಂಡು ಮಂಜುಳೆಗೆ ಮಹದಾನಂದವಾಯಿತು ಅವಳ ಗಾಢಾಲಿಂಗನದಲ್ಲಿ ನರಸಿಂಹಯ್ಯ ಲೋಕವನ್ನೇ ಮರೆತುಬಿಟ್ಟ

# ೧೨

ಪಾತಕ್ಕ ಮತ್ತೊಂದು ಮೊಮ್ಮಗುವಿಗೆ ಅಜ್ಜಿಯಾಗುವ ದಿನ ಬರಲು ತಡವಾಗಲಿಲ್ಲ ಸೊಸೆ ಗರ್ಭಿಣಿಯೆಂದು ತಿಳಿದ ಕೂಡಲೇ ಅವರು ಆನಂದ ತುಂದಿಲರಾದರು

'ಈ ಮಗುವಿನ ಪುಣ್ಯದಿಂದಲಾದರೂ ಗಂಡ – ಹೆಂಡತಿಯರಲ್ಲಿ ವಿಶ್ವಾಸ ಬೆಳೆಯಲಿ' ಎಂದು ಪ್ರಾರ್ಥಿಸಿದರು ಸೊಸೆ ತಮ್ಮನ್ನು ಕಡೆಗಾಣಿಸುತ್ತಿರುವುದನ್ನು ಲಕ್ಷಿಸದೆ ಅವಳ ಬಯಕೆಗಳನ್ನು ತೀರಿಸಲು ಅತ್ಯಾಸಕ್ತರಾದರು ತಾನೆಷ್ಟು ಹೇಯವಾಗಿ ವರ್ತಿಸಿದ್ದರೂ ಮನಸ್ಸಿಗೆ ಹಾಕಿಕೊಳ್ಳದ ಅತ್ತೆಯ ಔದಾರ್ಯ ರಾಜಮ್ಮನನ್ನು ದಂಗುಬಡಿಸಿದ್ದಿತು ಭಾಗೀರಥಮ್ಮನ ಮಂತ್ರಕ್ಕೆ ಮಾರುಹೋಗಿದ್ದ ರಾಜಮ್ಮನಿಗೆ ಅತ್ತೆ – ಗಂಡನ ಒಳ್ಳೆಯತನವನ್ನು ಲೆಕ್ಕಿಸುವಷ್ಟು ವಿವೇಚನೆ ಇರಲಿಲ್ಲ ಇಷ್ಟೇ ದಿನ ಪಾತಕ್ಕ ದುಡಿದು ಹಣ್ಣಾಗುತ್ತಿದ್ದರೂ ರಾಜಮ್ಮ ಲಕ್ಷಿಸುತ್ತಿರಲಿಲ್ಲ ತನ್ನ ಪಾಡಿಗೆ ತಾನು ರೂಮಿನಲ್ಲೋ, ಭಾಗೀರತಿಯ ಸಹವಾಸದಲ್ಲೋ ಕಾಲ ಕಳೆಯುತ್ತಿದ್ದಳು

ತಾನು ಗರ್ಭಿಣಿಯೆಂದು ತಿಳಿದ ರಾಜಮ್ಮ, "ಇನ್ನೊಂದು ಪೀಡೆ – ನನಗೆ ಯಾಕೆ ಬೇಕಾಗಿತ್ತು" ಎಂದು ಬೇಸರದಿಂದ ನುಡಿದಿದ್ದಳು

"ಹಾಗನ್ನಬೇಡ್ರೀ ರಾಜಮ್ಮ ಈ ಮಗುವಿನ ಮೇಲಿನ ವ್ಯಾಮೋಹದಿಂದಲಾದರೂ ನಿಮ್ಮ ಯಜಮಾನರು ಮನೆ ಸೇರಬಹುದು" ಎಂದು ಭಾಗೀರತಿ ಸಮಾಧಾನಪಡಿಸಿದ್ದಳು.

ದೂರದ ಆಸೆಯಿಂದ ರಾಜಮ್ಮ ದಿನ ಕಳೆಯುತ್ತಿದ್ದಳು ನರಸಿಂಹಯ್ಯ ಯಾವುದನ್ನೂ ಗಮನಕ್ಕೇ ತಾರದೆ ಮನೆಯಲ್ಲೂ 'ಹೊರಗಿನವನಂತೆ' ಇದ್ದು ಬಿಡುತ್ತಿದ್ದ

"ಮಗೂ ರಾಜು ಏನಾದರೂ ಹೇಳಿದಳೇ ?" ಎಂದೊಮ್ಮೆ ಪಾತಕ್ಕನೇ ಮಗನನ್ನು ಕೇಳಿದರು

"ಇಲ್ಲವಲ್ಲಾ "

"ಅವಳಿಗೆ ಮೂರು ತಿಂಗಳು ತುಂಬಿತು "

" "

"ಈಗ ಅವಳನ್ನು ಯಾವ ಯೋಚನೆಯೂ ಇಲ್ಲದಂತೆ ನೋಡಿಕೊಳ್ಳ ಬೇಕಪ್ಪ – ಸಂಕಟಪಡಿಸಬಾರದು "

" "

"ಅವಳಿಗೂ ಬೇಸರ ಎಲ್ಲಾದರೂ ಕರೆದುಕೊಂಡು ಹೋಗು "

ತಾನು ಹೆಂಡತಿಯನ್ನು ತೀರಾ ಅಲಕ್ಷಿಸುತ್ತಿರುವೆನೆಂದು ನರಸಿಂಹಯ್ಯ ಕಂಡುಕೊಂಡ ಅವನ ಕಣ್ಮುಂದೆ ಮೀನಾಕ್ಷಮ್ಮ ಹಾದುಹೋದಳು ತನ್ನ ಅನಾದರಣೆ ಮೀನಾಕ್ಷಮ್ಮನ ಪ್ರಾಣವನ್ನೇ ಅಪಹರಿಸಿತ್ತು – ಅದರ ಪುನರಾವೃತ್ತಿ ಮಾಡಬಾರದೆಂದು ಯೋಚಿಸಿ ಹೆಂಡತಿಯ ಬಳಿ ಬಂದ.

ರಾಜಮ್ಮ ಸ್ವೆಟರ್ ಹೆಣೆಯುವ ಸಂಭ್ರಮದಲ್ಲಿದ್ದಳು ಅದನ್ನು ಕಂಡು ನರಸಿಂಹಯ್ಯ, "ಯಾರಿಗೆ – ಇಷ್ಟು ಪುಟ್ಟ ಸ್ವೆಟರ್ " ಎಂದ

" "

"ಕೋಪವೇ ರಾಜೂ "

"ನನಗೇಕೆ ಕೋಪ ? – ಕೋಪಮಾಡಿಕೊಳ್ಳುವ ಅಧಿಕಾರವಾದರೂ ನನಗೆಲ್ಲಿದೆ ?"

"ಹೋಗಲಿ ನನ್ನ ಹತ್ತಿರ ಯಾಕೆ ವಿಷಯ ಬಚ್ಚಿಟ್ಟೆ ?"

"ಯಾವುದು."

"ನನಗೆಲ್ಲವನ್ನೂ ಅಮ್ಮ ತಿಳಿಸಿದಳು "

"ಸರಿ."

"ಎಲ್ಲಾದರೂ ಹೊರಗೆ ಹೋಗಿಬರೋಣ – ಬರ್ತೀಯಾ ?"

"ಎಲ್ಲಿಗೆ ?"

"ನಿನ್ನಿಷ್ಟ ಬಂದ ಕಡೆಗೆ – ಸಿನಿಮಾಕ್ಕೆ ಹೋಗೋಣವೇ ?"

ರಾಜಮ್ಮನಿಗೆ ಗಂಡ ಹಿಂದೆ ಮಾಡಿದ್ದೆಲ್ಲಾ ಮರೆತುಹೋಯಿತು ತಾನೂ ಭಾಗೀರತಮ್ಮನಂತೆ ಗಂಡನ ಜೊತೆ ಹೋಗಿ ನಾಳೆ ಅವಳ ಹತ್ತಿರ ಜಂಭ ಹೊಡೆಯಬಹುದು – ಎಂದು ಕಲ್ಪಿಸಿಕೊಂಡು ಹಿಗ್ಗಿದಳು

"ಯಾರು ಯಾರು ಹೋಗುವುದು ?"

"ನಾನೂ – ನೀನು – ಸುಮಿ"

ರಾಜಮ್ಮನಿಗೆ ಆಶಾಭಂಗವಾಯಿತು

"ನಾನು ಬರುವುದಿಲ್ಲ"

"ಯಾಕೆ ?"

"ನಾವಿಬ್ಬರೇ ಹೋಗೋಣ – ಸುಮಿ ಬೇಡ"

ಸುಮಿತ್ರೆಯ ಬಗ್ಗೆ ರಾಜಮ್ಮ ತಳೆದಿದ್ದ ವಿಶ್ವಾಸ ಕಂಡು ನರಸಿಂಹಯ್ಯನಿಗೆ ಬೇಸರವಾಯಿತು – ಕೋಪವೂ ಬಂತು

"ಅವಳೆಂದರೇ ನೀನು – ಇದನ್ನು ಮನಸ್ಸಿನಲ್ಲಿಟ್ಟುಕೋ" ಎಂದು ಗದರಿಸಿದ

ರಾಜಮ್ಮನ ಕಣ್ಣುಗಳಲ್ಲಿ ಹನಿಗೂಡಿದುವು ಅದನ್ನು ಕಂಡೂ – ಕಾಣದಂತೆ ನರಸಿಂಹಯ್ಯ ಹೊರಹೊರಟ

"ಅವಳನ್ನೂ ಕರೆದುಕೊಂಡು ಹೋಗೋ" ಎಂದು ಪಾತಕ್ಕ ಹೇಳಿದರು

"ನೀನು ಸುಮ್ಮನಿರಮ್ಮ"

"ನಿನ್ನ ಬುದ್ಧಿಯೇ ನನಗರ್ಥವಾಗುವುದಿಲ್ಲಪ್ಪಾ" ಎಂದು ತೆಪ್ಪಗಾದರು

ಸಂಜೆ ಬಂದ ಭಾಗೀರತಮ್ಮನ ಕೈಲಿ ರಾಜಮ್ಮ ತನ್ನ ಕಷ್ಟಸುಖ ಹೇಳಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು

"ಹೀಗೆ ಮಾಡಬಹುದೇನ್ರೀ – ನೀವೇ ಹೇಳಿ"

"ತಪ್ಪು – ತಪ್ಪು ನಿಮ್ಮೆಜಮಾನ್ರಿಗೆ ಅಷ್ಟೂ ತಿಳುವಳಿಕೆ ಬೇಡ ವೇನ್ರೀ ? ಸುಮಿ ಏನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ? ಹಿಂದೆ ಹಿಂದೆ ಕಟ್ಟಿಕೊಂಡು ಅಲೆಯೋದಕ್ಕೆ ?"

"ಅವಳಿಂದಲೇ ನನಗೊಂದು ಸ್ಥಾನವಂತೆ!"

"ಚೆನ್ನಾಗಿದೆ ಕಣ್ರೀ – ನೀವು ಕೈಹಿಡಿದ ಹೆಂಡತಿ ಅಲ್ವೇ ? - ಈ ಮನೇಗೆ ನೀವಲ್ಲವೇ ಯಜಮಾನಿ ?"

"ನನಗೀ ಮನೆಯಲ್ಲಿ ಯಾವ ಸ್ಥಾನವೂ ಇಲ್ಲ ಭಾಗೀರತಮ್ಮ - ಕೆಲಸ ದವಳಿಗೂ ಕಡೆ ನಾನು ಈ ಮುದುಕಿ ಸೇವೇ ಮಾಡೋದಕ್ಕೆ - ಅನಿಷ್ಟ ಮುಂಡೇದನ್ನ ಸಾಕೋದಕ್ಕೆ ನಾನಿರೋದು"

"ನೀವು ಸೋತು ನಡೆದಷ್ಟೂ ಇವರು ಹೆಚ್ಚಿಕೊಳ್ತಾರ್ರೀ - ನಿಮಗೆ ತಿಳಿಯದು ಅಧಿಕಾರ ನಿಮ್ಮ ಕೈಗ ತೆಗೆದುಕೊಂಡು ದರ್ಪದಿಂದ ಇವರ ನ್ನೆಲ್ಲಾ ಒಗ್ಗಿಸಬೇಕು"

"ನಿಮ್ಮ ಮಾತೇ ನನಗರ್ಥವಾಗುವುದಿಲ್ಲ ಭಾಗೀರತಮ್ಮ"

"ಸುಮಿತ್ರಗಾಗಿ ನೀವು ಅಂತ ತಾನೇ ಇವರು ಹೇಳುವುದು ? ನಿಮ್ಮ ಸ್ಥಾನ ಎಂತಹುದು ಅಂತ ತೋರಿಸಿ"

ರಾಜಮ್ಮ ಏನೋ ಯೋಚಿಸಿಕೊಂಡು ಮುಗುಳ್ನಕ್ಕಳು ಅವಳು ಗೆಲುವಾದುದನ್ನು ಕಂಡು,

"ನಾನು ಬರ್ತೀನ್ರಿ ನಿಮ್ಮೆಜಮಾನರು ಬರೋ ಸಮಯ ಆಯ್ತು"

ರಾಜಮ್ಮ ಕುಂಕುಮ ಕೊಟ್ಟು ಭಾಗೀರತಮ್ಮನನ್ನು ಸಾಗಿಸಿದಳು

ಅಂದಿನಿಂದ ರಾಜಮ್ಮನ ಚರ್ಯೆ ಬದಲಾಯಿಸಿತು ಮನೆಯಲ್ಲಿ ಒಂದು ಕೆಲಸವನ್ನೂ ಅವಳು ಮಾಡುತ್ತಿರಲಿಲ್ಲ ಕಸ - ಮುಸುರೆ ಅಲ್ಲಲ್ಲೇ ಬಿದ್ದಿರುತ್ತಿದ್ದಿತು ಪಾತಕ್ಕ ಕೆಲಸ ಹೇಳಿದರೆ ಕೇಳಿದರೂ ಕೇಳಿಸದಂತೆ ಮುಖ ತಿರುಗಿಸುತ್ತಿದ್ದಳು

"ಎಲ್ಲಾ ಮುದುಕಿ ನಾನು ಮಾಡಬೇಕು - ಇವರೆಲ್ಲಾ ದರ್ಬಾರು ಮಾಡಿಕೊಂಡು ಕೂತಿರಲಿ" ಎಂದು ಪಾತಕ್ಕ ಗೊಣಗಲಾರಂಭಿಸಿದರು

"ಏಳೇ - ಎದ್ದು ಪಾತ್ರೆ ತೊಳೆದುಕೊಡು" ಎಂದು ರೇಗಿದರೆ,

"ನಾನೇನು ಮುಸುರಿ ತಿಕ್ಕುವುದಕ್ಕೆ ಈ ಮನೆಗೆ ಬಂದಿಲ್ಲ" ಎಂದು ಉತ್ತರ ಕೊಡುತ್ತಿದ್ದಳು

"ಇನ್ನೇನು ಮೆರೆಯೋದಕ್ಕೆ ಬಂದಿದ್ದೀಯಾ? - ಇನ್ನೆಲ್ಲಾ ಆ ಮನೆಹಾಳಿ ಉಪದೇಶ ಇರಬೇಕು - ಇನ್ನೊಂದು ಸಲ ಅವಳು ಈ ಮನೆ ಹೊಸಿಲು ತುಳಿಯಲಿ - ಕಾಲು ಮುರಿದು ಕಳಿಸುತ್ತೇನೆ"

"ಹಾಗೇನಾದರೂ ಮಾಡಿ - ನಾನು ನೋಡಿಕೊಳ್ತೀನಿ"

ಸೊಸೆಯ ದಿಟತನ ಕಂಡು ಪಾತಕ್ಕನಿಗೆ ರೋಸಿಹೋಗುತ್ತಿದ್ದಿತು ಅವರ ಕಣ್ಣ ಮುಂದೆ ಪೂರ್ಣಾಕ್ಷಮ್ಮ ಹಿಂಡಿ ಮಾಯವಾಗುತ್ತಿದ್ದಳು ಇಬ್ಬರು ಸೊಸೆಯಂದಿರಿಗೂ ಹೋಲಿಸಿ 'ಅವಳೆಲ್ಲಿ - ಇವಳೆಲ್ಲಿ' ಎಂದು ಕೊಳ್ಳುತ್ತಿದ್ದರು

ರಾಜು ಉಪಾಯವಾಗಿ ಕೆಲಸಗಳನ್ನು ಸುಮಿತ್ರೆಗೇ ತಗುಲಿಸುತ್ತಿದ್ದು ದನ್ನು ಕಂಡ ಪಾತಕ್ಕ ತಮ್ಮಲ್ಲೇ ಕೊರಗಿದರು ತಾವು ಸತ್ತನಂತರ ಸುಮಿತ್ರೆಗೆ ಎಷ್ಟು ಚೆನ್ನಾದ ಅನ್ನ ಸಿಗಬಹುದು ಎಂಬುದನ್ನು ತಿಳಿದು, 'ಅವನಿಗೆ ಬೇಡದ ಮದುವೆಯನ್ನು ಮಾಡಿ ನಾನೇ ಸುಮಿತ್ರೆಯನ್ನು ಕಷ್ಟಕ್ಕೆ ಸಿಕ್ಕಿಸಿದೆ ನಲ್ಲಾ' ಎಂದು ವ್ಯಥಪಟ್ಟರು ಮಗನಿಗೆ ತಿಳಿಸಿದರೆ 'ನನಗೇನೂ ಹೇಳ ಬೇಡಮ್ಮ - ನೀನೇ ಮಾಡಿದೆ - ನೀನೇ ಅನುಭವಿಸು' ಎಂದು ತನ್ನ ಪಾಡು ತಾನು ನೋಡಿಕೊಂಡಿರುತ್ತಿದ್ದ

ಸುಮಿತ್ರೆ ಆ ವಯಸ್ಸಿಗೇ ಮನೆಯ ಕೆಲಸಕಾರ್ಯಗಳಲ್ಲಿ ನಿಷ್ಣಾತ ಳಾದಳು, ಒಂದು ಹಿಡಿಗೆ ಬಟ್ಟೆ ಹಾಕಿಕೊಂಡು ಅವಳು ಒಗೆಯುತ್ತಿದ್ದರೆ ಪಾತಕ್ಕನ ಕರುಳು 'ಚುರ್' ಅನ್ನುತ್ತಿದ್ದಿತು

"ಅರಿಯದ ಹಸುಳೆ ಅದರ ಕೈಲಿ ದುಡಿಸುತ್ತೀಯಲ್ಲಾ - ನೀನೇನು ಮನುಷ್ಯಳೇ" ಎಂದು ಸೊಸೆಯನ್ನು ಬೈಯುತ್ತಾ ತಾವೇ ಅಷ್ಟು ಬಟ್ಟೆಗಳನ್ನೂ ಒಗೆದಿಡುತ್ತಿದ್ದರು ಯಾರು ಮಾಡಿದರೇನು - ತನಗೆ ಸುಖವಾಯಿತಲ್ಲಾ ಎಂದು ರಾಜಮ್ಮ ತೃಪ್ತಳಾಗುತ್ತಿದ್ದಳು

ಮಗಳು ಬಸುರಿಯೆಂದು ತಿಳಿದ ರಂಗಮ್ಮ ಒಂದು ಸಂಜೆ ಹಾಸನ ದಿಂದ ಬಂದಿಳಿದರು ಬೀಗಿತ್ತಿಯನ್ನು ಕಂಡು ಪಾತಕ್ಕ ಮರ್ಯಾದೆಯಿಂದ ಕಂಡರೂ ಹೆಚ್ಚು ಮಾತಿಗೇ ಅವಕಾಶ ಕೊಡಲಿಲ್ಲ ರಾಜಮ್ಮ ಎಂದಿ

ನಂತೇ ಏಕಾಂತವಾಸವನ್ನಪ್ಪುತ್ತಿದ್ದಳು – ಅಳಿಯ ಮನೆಯೇ ಸೇರುತ್ತಿರಲಿಲ್ಲ ಮನೆಯ ಪರಿಸ್ಥಿತಿ ಕಂಡು ಬೇಸರಗೊಂಡ ರಂಗಮ್ಮ, ಅದರ ಪರಿಹಾರಕ್ಕೆ ಸುಮಿತ್ರೆಯ ಮರೆಹೋದರು ಅವಳ ಕೆಲಸದಲ್ಲಿ ತಾವೂ ಭಾಗಿಯಾಗುವರು – ಬಟ್ಟೆ ಒಗೆಯುತ್ತಿದ್ದರೆ – ಪಾತ್ರೆ ತೊಳೆದರ ತಾವು ಕೈಯಿಂದ ಕಿತ್ತುಕೊಂಡು ಆ ಕೆಲಸ ಮುಗಿಸುತ್ತಿದ್ದರು ಅವರ ವಿಶ್ವಾಸ ಕಂಡ ಸುಮಿತ್ರೆ,

"ಬಿಡಿ ಅಜ್ಜಿ ಈ ಕೆಲಸ ಎಲ್ಲಾ ನಂದೇ ?"

"ಏನು ? ಈ ವಯಸ್ಸಿನಲ್ಲೇ ನಿನ್ನನ್ನು ದುಡಿಯಲು ಹಾಕಿದಾಳೆಯೆ ? ಇವಳೇನು ಮನೆಯಲ್ಲಿ ಕಡಿದುಹಾಕುವುದು ?" ಎಂದು ಮಗಳನ್ನು ನಿಂದಿಸುತ್ತಿದ್ದರು

ರಂಗಮ್ಮನ ಸ್ವಭಾವಕ್ಕೆ ಮಾರುಹೋದ ಪಾತಕ್ಕ "ಇಂಥಾ ತಾಯಿ ಹೊಟ್ಟೆಯಲ್ಲಿ ಎಂತಹ ಮಗಳು" ಎಂದುಕೊಂಡರು

ರಂಗಮ್ಮನ ದುಡಿತವನ್ನು ರಾಜಮ್ಮ ಸೂಕ್ಷ್ಮವಾಗಿ ಲಕ್ಷಿಸುತ್ತಿದ್ದಳು ತನ್ನ ತಾಯಿ ಪಾತಕ್ಕ, ಸುಮಿತ್ರ ಇವರ ಕಡೆ ನಿಂತುದನ್ನು ಕಂಡು ರಾಜಮ್ಮನ ಮೈ ಚಿಟಗುಟ್ಟಿತು ತಾಯಿಯನ್ನು ಕೇಳಿಯೇಬಿಟ್ಟಳು

"ನೀನು ಇಲ್ಲಿಗೆ ಬಂದುದು ಯಾಕಮ್ಮಾ? ನನ್ನನ್ನು ನೋಡುವುದಕ್ಕೋ ಅಥವಾ ಸುಮಿತ್ರೆಯ ಶುಶ್ರೂಷೆ ಮಾಡುವುದಕ್ಕೋ ?"

"ಇದೇನೇ ರಾಜೂ ಹೀಗೆ ಮಾತಾಡುತ್ತೀ ? ಒಂದೆರಡು ಕೆಲಸ ಮಾಡಿದರೆ ನನ್ನ ಕೈ ಸವೆದುಹೋಗುತ್ತದೆಯೋ ?"

"ದುಡಿಯಲು ನಿನ್ನನ್ನು ಹಾಕಿ ಅವರು ಸುಮ್ಮನಸ ಹತ್ತಲಿ ದುಡಿ – ದುಡಿ – ನಿನಗೂ ರಟ್ಟೆ ಗಟ್ಟಿಯಾಗಿದೆ"

"ಅವರು ಅಂದ್ರೆ ಯಾರೇ ? ನಿನ್ನ ಮಾತೇ ನನಗರ್ಥವಾಗುವುದಿಲ್ಲವಮ್ಮಾ"

"ಯಾರು ? ಇದಾಳಲ್ಲ ಆ ಮುದಿಗೊರಡು – ಅವಳ ಮುದ್ದು ಮೊಮ್ಮಗಳು"

"ಚೆನ್ನಾಗಿದೆಯಮ್ಮ – ತುಂಬಾ ಚೆನ್ನಾಗಿದೆ – ಅಲ್ಲಾ ಅತ್ತೆ, ಗಂಡ –

ಗುರುಹಿರಿಯರ ಮೇಲೆ ಸ್ವಲ್ಪವಾದರೂ ಭಕ್ತಿ ವಿಶ್ವಾಸ ಇರಬೇಡವೇ ? ಯಾಕೆ ನಿನಗೀ ದುರ್ಬುದ್ಧಿ ಬಂತು ?”

ತಾಯಿ ತನ್ನ ಮಾತಿಗೇನೂ ಸೊಪ್ಪು ಹಾಕುವುದಿಲ್ಲವೆಂದುಕೊಂಡು ರಾಜಮ್ಮ ಸುಮ್ಮನಾದಳು ರಂಗಮ್ಮ ಅಲ್ಲಿಗೇ ಬಿಡಲಿಲ್ಲ

“ಅದೇನೇ ರಾಜೂ – ನಿನ್ನ ಗಂಡ ಒಂದು ನಿಮಿಷ ಮನೆ ಸೇರೋಲ್ಲ– ಏನಾದರೂ ಮನಸ್ತಾಪವೇ ?”

“ಬೀದೀ ಸೂಳೇರಿಲ್ಲಾ ಅವರ ಸೇವೆಗೆ ನಿಂತಿರುವಾಗ ನಾನು ಹೇಗೆ ಬೇಕಾಗುತ್ತೆ ಹೇಳು ?”

“ಅವರ ಗುಣಾವಗುಣಗಳ ವಿಮರ್ಶೆ ಮಾಡುವುದಕ್ಕೋ ನೀನಿರುವುದು ?”

“ಇಲ್ಲ – ನೀನೇ ಇಂದ್ರ – ಚಂದ್ರ ಅಂತ ಹೊಗಳಬೇಕೇ ”

“ನಿನ್ನ ಸಂಸಾರ ನೇರವಾಗಲು ಎಲ್ಲವನ್ನೂ ಮಾಡಬೇಕು ”

“ನನಗದು ಸಾಧ್ಯವಿಲ್ಲ ’

ಮಗಳ ಜೊತೆ ವಾಗ್ವಾದ ಮಾಡಿದರೆ ಪ್ರಯೋಜನವಿಲ್ಲವೆಂದು ರಂಗಮ್ಮ ಸುಮ್ಮನಾದರು

ಮಗಳ ನಡತೆ ರಂಗಮ್ಮನಿಗೆ ಬೇಸರವಾಗಿದ್ದಿತು

“ಪಾತಕ್ಕ ನೀವು ಒಡಹುಟ್ಟಿದ ಅಕ್ಕತಂಗಿಯರಿಗಿಂತಲೂ ಹೆಚ್ಚಾಗಿದ್ದೀರಿ ದಯವಿಟ್ಟು ಅವಳ ತಪ್ಪುಗಳನ್ನು ಮಡಲಿಗೆ ಹಾಕಿಕೊಂಡು ಉದಾರ ಮನಸ್ಸಿನಿಂದ ಕ್ಷಮಿಸಿ ರಾಜು ನಡತೆ ನಮ್ಮ ಕುಲಕ್ಕೇ ಅಪಮಾನಕರವಾಗಿದೆ – ಆ ತಬ್ಬಲಿ ಮಗುವನ್ನು ಹೀಗೆ ಹಿಂಸಿಸಬಾರದು ಗುರುಹಿರಿಯರು ಅಂತಾ ಅನ್ನೋ ಭಾವನೆಯೂ ಅವಳಲ್ಲಿ ಅಳಿಸಿಹೋಗಿದೆ – ತನ್ನ ದುರ್ಬುದ್ಧಿಯಿಂದ ಅಳಿಯಂದಿರ ಮನಸ್ಸನ್ನು ಒಡೆದಿದ್ದಾಳೆಂದು ಕಾಣುತ್ತದೆ ” ಎಂದು ತಮ್ಮ ಅಳಲನ್ನು ತೋಡಿಕೊಂಡರು.

“ನೀವೇನೂ ಯೋಚಿಸಬೇಡಿ ರಂಗಮ್ಮ, ರಾಜೂ ಸ್ವಬುದ್ಧಿಯಿಂದ ಹೀಗೆ ಮಾಡುತ್ತಿಲ್ಲ – ಎಲ್ಲಾ ಆ ಭಾಗೀರತಮ್ಮನ ಚಿತಾವಣೆ – ಬಾಣಂತನ ಮುಗಿಸಿಕೊಂಡು ಮಗುವಿನ ತಾಯಿಯಾಗಿ ಬರಲಿ – ತನಗೇ ಬುದ್ಧಿ ಬರುತ್ತದೆ ಸರಿಯಾಗುತ್ತಾಳೆ ” ಎಂದು ಪಾತಕ್ಕ ಧೈರ್ಯ ಹೇಳಿದರು

ಹೊಸ ಸೀರೆಯುಟ್ಟು ಗಂಡನಿಗೆ ತೋರಿಸುವ ಹಂಬಲದಿಂದ ತಾನಾಗಿಯೇ ಬಂದು ನಮಸ್ಕರಿಸಿದಳು

"ಇದೇನಿದು ?"

"ಸೀರೆ ಚೆನ್ನಾಗಿದೆಯೇ ?"

"ಹೂಂ"

"ಸಂಜೆಯೂ ನೀವು ಮನೆಯಲ್ಲಿ ನಿಲ್ಲಲಿಲ್ಲ - ನಿಮಗೆ ತೋರಿಸಬೇಕೆಂದೇ ನಾನು ಉಟ್ಟಿಲ್ಲ

ಸರಿ"

"ಯಾಕೆ ಇಷ್ಟು ಬೇಜಾರು ?"

'ಇಲ್ಲವಲ್ಲ'

'ನಾನೆಷ್ಟು ಬೇಡದ ವಸ್ತುವೇ ?'

'ಹಾಗೆಂದವರಾರು ? ಈ ಮನೆಯ ಯಜಮಾನಿ ನೀನೇ ಅಲ್ಲವೇ ?"

ದೊರೆತುವ ಒಂದಿನ ಏನನ್ನೂ ಜಗಳವಾಡಬೇಕೆಂದಿರುವಿರಾ ?'

"ನಾನೇನು ಮಾಡಲಿ ? ನೀನೇ ಹಾಗೆ ಮಾಡಿಕೊಂಡಿರುವೆ ?"

'ನಾನೇನು ಮಾಡಿದೆ ?"

"ಹೋಗಲಿ ಬಿಡು - ಈಗ ಯಾಕೆ ಆ ಮಾತು ?" ಎಂದು ಸಮಾಧಾನ ತಂದುಕೊಂಡ

ಜಗಳ - ಕದನವಿಲ್ಲದೆ ಆ ರಾತ್ರಿ ಕಳೆದುದಕ್ಕೆ ನರಸಿಂಹಯ್ಯನಿಗೆ ಸಂತೋಷವಾಯಿತು

"ಇದಕ್ಕೇ ಬಲ್ಲವರು ಗಾದೆ ಕಟ್ಟಿರುವರು'

"ಏನಂತ ?"

"ಒಲಿದರೆ ನಾರಿ - ಮುನಿದರೆ ಮಾರಿ ಅಂತ"

"ಹೋಗಿಂಪ್ರಿ"

"ರಾಜು - ಹೀಗೇ ಯಾಕಿರಬಾರದು ?"

"ಊರಿಗೆ ಹೋದಮೇಲೆ ಕಾಗದ ಬರೀತೀರಾ ?"

"ಆಗಲಿ."

"ಮಾತಿಗೆ ತಪ್ಪಿಸಿಕೊಳ್ಳಕೂಡದು"

"ಆಗಲಿ"

"ಹದಿನೈದು ದಿನಕ್ಕೊಂದು ಸಲವಾದರೂ ಬಂದು ಹೋಗಬೇಕು"

"ಅದೇನು ? ಇಷ್ಟಕ್ಕಿಷ್ಟಂತೆ ನನ್ನ ಮೇಲಿಷ್ಟು ಪ್ರೀತಿ ಬಂದುಬಿಟ್ಟಿದೆ ?"

"ಈಗೇನು ? ನಿಮಗರಿವಾದದ್ದು ಇವತ್ತಾಗಿನ್ನಿ"

"ಇರಬಹುದು"

ಗಂಡ ಸುಲಭವಾಗಿ ತನಗೊಲಿಯುವುದನ್ನು ಕಂಡುಕೊಂಡ ರಾಜಮ್ಮ ಇನ್ನುಮುಂದೆ ಹೀಗೇ ಇದ್ದು ಗಂಡನ ಮನಸ್ಸನ್ನು ಪರಿವರ್ತಿಸಬೇಕೆಂದು ಕೊಂಡಳು

ಮುಂಜಾನೆ ಎದ್ದು ಪಾತಕ್ಕೆ ಸಣ್ಣ ಔತಣ ಸಿದ್ಧಪಡಿಸಿದರು ರೈಲು ಹೊತ್ತಿಗೆ ಮುಂಚೆಯೇ ಊಟ ಮುಗಿಸಿ ಎಲಡಿಕೆ ಅಗಿಯುತ್ತಾ ರಾಜಮ್ಮ ರೂಮಿಗೆ ಬಂದಳು

"ಹೊತ್ತಾಯ್ತು"

"ಇರಲಿ ಬಿಡಿ"

"ರೈಲು ನಿನಗೆ ಕಾಯುತ್ತೆ ?"

"ನಾನು ಹೇಳಿದುದು ನೆನಪಿದೆಯೋ – ಇಲ್ಲವೋ ?"

"ಇಲ್ಲ – ಮರೆತಾಯ್ತು – ಮರೆತಿಲ್ಲ"

"ನಾಳೆ ನಾಳಿದ್ದರಲ್ಲೇ ಬರೀಬೇಕು"

"ಆಗಲಿ"

"ನಾನೇನು ತಪ್ಪುಮಾಡಿದ್ದರೂ ಕ್ಷಮಿಸಿ"

"ಮುಂದಕ್ಕೆ ಮಾಡದಿದ್ದರಾಯ್ತು"

" . . "

"ಈಗದನ್ನೆಲ್ಲಾ ಯೋಚಿಸಿ ಕೊರಗಬೇಡ – ಸುಖವಾಗಿ ಗಂಡುಮಗ ನನ್ನು ಎತ್ತಿಕೊಂಡು ಬಾ"

"ಹೆಣ್ಣಾದರೆ ?"

"ಆದರೇನು ಮಾಡುವುದು ? ಸುಮಾ ಜತೆಗೆ ಅವಳ್ಗೂ ಗಂಡು ಹುಡುವ ಕಷ್ಟ"

"ಈಗಲೇ ನಿಮಗೆ ಯೋಚನೆ."

"ತವರಾಸೆಗೆ ಹೇಳಿದೆ"

ಸುಮಿತ್ರಾ ಚಿಕ್ಕಮ್ಮನನ್ನು ಕರೆದಳು ರಾಜಮ್ಮ ಗಂಡನಿಗೆ ನಮಸ್ಕಾರ ಮಾಡಿ ಹೊರಗೆ ಬಂದಳು ಪಾತಕ್ಕ ತಾವೇ ನಿಂತು ಗುಂಡಮ್ಮನಿಗೆ, ಸೊಸೆಗೆ ಸುಮಿತ್ರೆಯ ಕೈಲಿ ಅರಿಶಿನ ಕುಂಕುಮ ಕೊಡಿಸಿದರು ರಾಜಮ್ಮ ಅತ್ತೆಯಿಂದಲೂ ಆಶೀರ್ವಾದ ಪಡೆದು ಗಾಡಿಹತ್ತಿದಳು ರಂಗಮ್ಮ ಸುಮಿತ್ರೆಯ ಕೈಗೊಂದು ರೂಪಾಯಿ ಇಟ್ಟು, 'ತಿಂಡಿ ತೆಗೆದುಕೋ" ಎಂದರು

'ಅಣ್ಣನ ಜೊತೆ ನಾನೂ ಬರ್ತೀನಿ ಚಿಕ್ಕಮ್ಮ"

"ಬಾ"

"ಎಷ್ಟು ಒಳ್ಳೆಯ ಜನ – ನೀನೇ ಹುಚ್ಚುಚ್ಚಾಗಿ ವರ್ತಿಸಿ ನಿಷ್ಠುರ ಮಾಡಿಕೊಳ್ಳುತ್ತೀಯಾ ಸುಮೂದು ಚಿನ್ನದಂಥಾ ಗುಣ" ರಂಗಮ್ಮ ಎಂದು ಹೊಗಳಿದರು ರಾಜಮ್ಮ ಮಾತಾಡಲಿಲ್ಲ ಗಾಡಿ ಚಲಿಸಿತು

ಭಾಗೀರತಮ್ಮ ಮನೆಯ ಮುಂದೆ ನಿಂತಿದ್ದವಳು ರಾಜಮ್ಮನನ್ನು ಕಂಡು, 'ತೌರುಮನೆಗೇ" ಎಂದು ಕೇಳಿದಳು

ರಂಗಮ್ಮ "ಹೌದಮ್ಮಾ – ಪಾಪ ನಿಮಗೆ ಬೇಜಾರು – ಅಲ್ವೇ ?" ಎಂದು ಕೇಳಿದರು ರಾಜಮ್ಮ ತಲೆಯಲ್ಲಾಡಿಸಿ ಉತ್ತರಕೊಟ್ಟಳು

## ೧೩

ಹೊರಡುವ ಸೂಚನೆಯನ್ನು ತೋರಿಸದೆ ಇದ್ದ ನರಸಿಂಹಯ್ಯನನ್ನು ಕಂಡು ಮಂಜುಳೆಗೆ ಆಶ್ಚರ್ಯವಾಯಿತು

"ಇದೇನಿವತ್ತು ? ಮನೆಯಲ್ಲಿ ದಂಡಿಸುವವರಾರೂ ಇಲ್ಲವೇ ?"

"ನಿನಗೆ ಬೇಜಾರೇ ? ಹಾಗಾದರೆ ಹೋಗ್ತೀನಿ"

"ತಮಾಷೆಗಂದೆ – ಏನು ಸಮಾಚಾರ ?"

"ರಾಜೂ ತೌರುಮನೆಗೆ ಹೋದಳು"

"ಬಾಣಂತನಕ್ಕೆ ?"

"ಹೂಂ"

ಮಂಜುಳೆಯ ಮುಖ ಸಪ್ಪಗಾಯಿತು ಅದನ್ನು ನೋಡಿ ನರಸಿಂಹಯ್ಯ ಗಾಬರಿಯಿಂದ, "ಯಾಕೆ ಮಂಜೂ ?"

"ಹೋಗಲಿ ಬಿಡಿ"

"ಏನು ವಿಷಯ ? ಹೇಳು" ಎಂದು ಪೀಡಿಸಿದ

"ನನಗೂ ಆ ಭಾಗ್ಯ ಇದೆಯೋ ಅಂತ ಯೋಚಿಸುತ್ತಿದ್ದೆ"

"ಮಕ್ಕಳೆಂದರೆ ನಿನಗಷ್ಟು ಪ್ರೇಮವೇ ?"

"ಯಾರಿಗಿರುವುದಿಲ್ಲ ?"

ನರಸಿಂಹಯ್ಯನ ಮುಖ ಗಂಭೀರವಾದುದನ್ನು ಕಂಡು ಮಂಜುಳೆಯೇ ಮಾತು ಬದಲಾಯಿಸಿದಳು

"ಸುಮಿತ್ರ ಈಗ ಯಾವ ಕ್ಲಾಸು ?"

"ಮುಂದಿನ ವರ್ಷ ನಿಮ್ಮ ಸ್ಕೂಲಿಗೇ ಬರುತ್ತಾಳೆ. ಸುಮ್ಮನಿರು."

"ಜೀವನ ಆರಂಭ ಆದಮೇಲೆ ಸಾಹಿತ್ಯ ಹೇಗೆ ಸಾಗಬೇಕು ಹೇಳು ?"

"ಹಾಗೆ ಮಾಡಬಾರದಾಗಿತ್ತು "

ನರಸಿಂಹಯ್ಯನ ಚಿತ್ತಫಲಕದಮೇಲೆ ತಾನು ವಿದ್ಯಾರ್ಥಿಯಾಗಿದ್ದಾಗ, ಕಿಶೋರವಸ್ಥೆಯ ಕೆಚ್ಚಿನಲ್ಲಿ ಕಾಣುತ್ತಿದ್ದ ಕನಸುಗಳು ಸರಿದು ಹೋದುವು ಸಂಸಾರದ ನೊಗ ಹೆಗಲಮೇಲೆ ಬಿದ್ದು ಅವನ ಸ್ಫೂರ್ತಿಯನ್ನೇ ಇಂಗಿಸಿಬಿಟ್ಟಿತು ತನ್ನ ಕೈಯಿಂದಲೇ ತನ್ನ ಹಂಬಲಗಳನ್ನು ಹುಟ್ಟಿಲ್ಲದಂತೆ ಅಳಿಸಿದ್ದ ಪರಿಣಾಮಕಾರಿಯಾದ ಒಂದು ನಿಟ್ಟುಸುರು ಮಾತ್ರ ಹೊರಬಿತ್ತು ಅದನ್ನು ಕಂಡು ಮಂಜುಳೆಗೆ ಕಸಿವಿಸಿಯಾಯಿತು ನರಸಿಂಹಯ್ಯನ ವ್ಯಕ್ತಿತ್ವವನ್ನು ಕಂಡು ಬೇಸರವೂ ಬಂತು

"ಮನಸ್ಸಿನಲ್ಲಿದ್ದುದನ್ನು ಕಾರ್ಯತಃ ಮಾಡಲಾರದು ಹೇಡಿ " ಎಂದು ಕೊಂಡಳು

"ನಿಮ್ಮ ಹೆಂಡತಿಯಿಂದ ಪತ್ರಬಂದಿತ್ತೇ "

"ಹೂಂ ಬರೆದಿದ್ದಳು "

"ನೀವು ಬರೆದಿರಾ ?"

"ಇಲ್ಲ "

"ಬರೆಯಿರಿ " ಎಂದು ಕಾಗದ – ಪೆನ್ನನ್ನು ಮುಂದಿಟ್ಟಳು

"ಏನು ಬರೆಯಲಿ ?"

"ನಿಮ್ಮ ಹೆಂಡತಿಗೆ ಬರೆಯುವುದನ್ನು ನಾನು ಹೇಳಿಕೊಡಬೇಕೇ ?"

"ಮಂಜೂ ನಿನ್ನ ಬುದ್ಧಿಯಲ್ಲಿ ಒಂದಂಶ ರಾಜುವಿಗೆ ಬಂದರೂ ನಾನೆಷ್ಟೋ ಸುಖಿಯಾಗುತ್ತೇನೆ "

ಮಂಜುಳೆ ಒಳಗೆ ಕೆಲಸ ಹುಡುಕಿಕೊಂಡು ಹೊರಟಳು. ನರಸಿಂಹಯ್ಯ ಕಾಗದ ಬರೆದು ಅಂಟಿಸಿ ಶ್ರೀಕಂಠನ ಕೈಲಿ ಕೊಟ್ಟು ಅಂಚೆ ಪೆಟ್ಟಿಗೆಗೆ ಹಾಕಿಸಿದ.

## ೧೪

ಸಾವಿತ್ರಿಯ ಉತ್ಸಾಹಕ್ಕೆ ಮಿತಿಯೇ ಇರಲಿಲ್ಲ ಸ್ಕೂಲಿನಿಂದ ಬರುವಾಗ ತಂದೆ ಕೊಟ್ಟಿದ್ದ ದುಡ್ಡಿನಲ್ಲಿ ದಿನವೂ ಒಂದೊಂದು ಬಗೆಯ ಆಟದ ಸಾಮಾನುಗಳನ್ನು ಕೊಂಡು ತಂದು ಆಡಿಸುತ್ತಿದ್ದಳು ಅವಳ ತಮ್ಮ ದಿನದಿನಕ್ಕೂ ಬೆಳೆಯುತ್ತಿದ್ದುದನ್ನು ಕಂಡು ಪಾತಕ್ಕ,

ಇವನು ನೋಡು ನಿನ್ನ ಹುಚ್ಚಾಟ ತಿಂಡೀಗೆ ಅಂತಾ ಕಾಸಿಸಿ ಕೊಂಡು ಆಟದ ಸಾಮಾನು ತಾರಿ ವೇಸ್ಟಾ ಇದೆಯಾ? ಯಾರಿಗೆ ಇವೆಲ್ಲಾ"

ನಾಳೆ ಚಿಕ್ಕಮ್ಮನ ಮಗು ಕರೆದುಕೊಂಡು ಬಂದರೆ ಇವೆಲ್ಲಾ ಬೇಡವೇ? ನೀನು ಸುಮ್ಮನಿರು ಅಜ್ಜಿ" ಎಂದು ಅಜ್ಜಿಯ ಬಾಯಿ ಮುಚ್ಚಿಸುತ್ತಿದ್ದಳು

ಸಾವಿತ್ರಿಯ ಮುಗ್ಧ ಮನಸ್ಸು ಪಾತಕ್ಕನನ್ನು ಮೂಕರನ್ನಾಗಿ ಮಾಡುತ್ತಿದ್ದಿತು

"ಇಂಥಾ ಮಗುವನ್ನು ಗೋಳುಹುಯ್ದುಕೊಳ್ಳುತ್ತಿದ್ದಳಲ್ಲಾ – ಪಾಪಿ" ಎಂದು ಸೊಸೆಯನ್ನು ನಿಂದಿಸುತ್ತಿದ್ದರು

ಬಹಳ ದಿನಗಳ ಮೇಲೆ ಮನೆಗೆ ಹೆಣ್ಣುಮಗಳು ಬಂದುದರಿಂದ ನಂಜುಂಡಯ್ಯ ಗುಂಡಮ್ಮ ಇಬ್ಬರಿಗೂ ಸಂತೋಷವಾಯಿತು ಉಮಾ, ಗೀತಾ, ರಾಧ, ಕೃಷ್ಣಮೂರ್ತಿ ರಾಜಮ್ಮನ ಸುತ್ತುಗಟ್ಟಿದರು ತಂದಿದ್ದ ತಿಂಡಿಯನ್ನು ಮಕ್ಕಳಿಗೆ ಹಂಚಿ ರಾಜಮ್ಮ ಎಲ್ಲರ ಯೋಗಕ್ಷೇಮ ವಿಚಾರಿಸಿಕೊಂಡಳು.

"ಎಷ್ಟು ಬೆಳೆದುಬಿಟ್ಟೆಯೋ ಉಮಾ—ಇನ್ನು ನಿನ್ನ ಮದುವೆಯದೊಂದು ಓಡಾಟವಿದೆ."

"ಗುಂಡಮ್ಮ, ಹೇಗಿದ್ದರೂ ನೀನು ಬೆಂಗಳೂರಿನಲ್ಲಿದ್ದೀಯಾ – ಅವಳಿಗೂ ಒಂದು ಗಂಡು ಹುಡುಕು – ಸಾಧ್ಯವಾದರೆ ಈ ವರ್ಷವೇ ಮುಗಿಸಿಬಿಡೋಣ"

"ಈಗೇನು ಮಾಡುತ್ತಿದ್ದೀಯಾ ಉಮಾ ?"

"ಈ ಅಮ್ಮನಿಂದ ಯಾವುದೂ ಸಾಗಲ್ಲ – ಹೈಸ್ಕೂಲಿಗೆ ಸೇರ್ತೀನೀಂತ ಅಂದೆ – ಅಣ್ಣ ಒಪ್ಪಿದ್ದ – ಇವಳು ಕಲ್ಲುಹಾಕಿದಳು"

"ಎಷ್ಟು ಓದಿದರೂ ಮುಸುರೆ ತಿಕ್ಕೋದೇನೂ ತಪ್ಪುವುದಿಲ್ಲ – ಸುಮ್ಮನೆ ಯಾಕೆ ಹೇಳು ?"

"ನಿನ್ನ ತೀರ್ಮಾನ ಚನ್ನಾಗಿದೇಮ್ಮ' ಎಂದು ತನ್ನ ಅಸಮ್ಮತಿಯನ್ನು ರಾಜಮ್ಮ ಸೂಚಿಸಿದಳು

ರಾಜಮ್ಮನೊಬ್ಬಳೇ ಇದ್ದಾಗ ಉಮಾ ಅವಳ ವಿಷಯ ಸಂಗ್ರಹಿಸಿದಳು.

"ಏನು ಒಡವೆ ಮಾಡಿಸಿಕೊಂಡೆಯೋ ರಾಜು – ಹೊಸದಾಗಿ ಎಂಥೆಂಥಾ ಸೀರೆ ಕೊಂಡುಕೊಂಡೆ" ಎಂದು ಪೆಟ್ಟಿಗೆತೆಗೆಸಿ ಪರೀಕ್ಷೆಮಾಡಿದಳು ರಾಜಮ್ಮ ಒಂದೆರಡು ಸೀರೆ ತೋರಿಸಿದಾಗ,

"ಇಷ್ಟೇನೇ ?" ಎಂದು ತಾತ್ಸಾರದಿಂದ ರಾಗವೆಳೆದಳು.

"ಆ ದರಿದ್ರದ ಮನೆಯಲ್ಲಿ ಏನು ಸಾಧ್ಯವಾಗುತ್ತೆ ಹೇಳು – ಬರೋದೆಲ್ಲಾ ಆ ಪ್ರಾರಬ್ಧಕ್ಕೆ ಸುರೀತಾರೆ"

"ಥೂ . ನಿನ್ನನ್ನು ಮೊದಲನೇ ವರಕ್ಕೆ ಕೊಡಬೇಕಾಗಿತ್ತು – ಎಲ್ಲಾ ಅಮ್ಮನಿಂದ ಆಯಿತು"

"ನನ್ನ ಹಣೆಯಬರಹಕ್ಕೆ ಅವರೇನು ಮಾಡ್ತಾರೆ ಹೇಳು ?"

"ಯಾವುದಾನರೂ ಸಿನಿಮಾಕ್ಕೆ ಹೋಗಿದ್ದೆಯಾ ?"

"ಇಲ್ಲಮ್ಮಾ . ಆ ಪುಣ್ಯ ನಾನು ಕೇಳಿ ಬಂದಿಲ್ಲ"

"ಮತ್ತೆ ಹೊತ್ತನ್ನು ಹೇಗೆ ಕಳೆಯುತ್ತೀ."

"ಬೆಳಗ್ಗಯಿಂದ ಸಂಜೆವರೆಗೂ ಚಾಕರಿ ಬಿದ್ದಿರುತ್ತೆ – ಮನೇಲಿ ಕೆಲಸ

ದವಳಿಲ್ಲ – ಎಲ್ಲಾ ನನ್ನ ತಲೇಗೆ ಹಚ್ಚಿದುದು" ಎಂದು ತನ್ನ ಕಷ್ಟ ತೋಡಿಕೊಂಡಳು

ಅವಳ ಕಣ್ಣು ಹಸಿಗೂಡಿದುದನ್ನು ಕಂಡು ಉಮೆಯ ಮನಸ್ಸು ಕರಗಿತು

"ಹೋಗಲಿ ಬಿಡು ರಾಜು ಇಲ್ಲಾದರೂ ನಾಲ್ಕುದಿನ ಹಾಯಾಗಿ ಇದ್ದು ಹೋಗುವಂತೆ' ಎಂದು ಸಮಾಧಾನಪಡಿಸಿದಳು

ಉಮೆ ವಿಷಯವನ್ನು ಅಲ್ಲಿಗೇ ಬಿಡಲಿಲ್ಲ ತಾಯಿ ರಂಗಮ್ಮ ಇಬ್ಬರೆದುರೂ –

"ರಾಜೂಗೆ ಮದುವೆಮಾಡಿದ್ದು ಸಾಲದೂಂತ ನನಗೂ ಹವಣಿಸುತ್ತಿದ್ದಿರಿ ?–ನನಗೂ ಯಾವನಾದರೂ ಎರಡನೇ ವರನೋ ಮೂರನೇ ವರನನ್ನ ನೋಡಿ ಗಂಟುಹಾಕಿ" ಎಂದು ಹಂಗಿಸಿದಳು ಗುಂಡಮ್ಮ ಸುಮ್ಮನಾದರೂ ರಂಗಮ್ಮ ಸುಮ್ಮನಿರಲಿಲ್ಲ

"ಈಗ ರಾಜೂಗೇನು ಅನ್ಯಾಯವಾಗಿದೆಯೋ ?" ಎಂದು ಕೇಳಿದರು

"ದಿನವೆಲ್ಲಾ ದುಡಿದು ಹಣ್ಣಾಗೋದಲ್ಲವೆ ಅವಳಿಗಿನ್ನೇನು ಕೆಲಸವಿದೆ ? ಈ ಸಂಪತ್ತಿಗೆ ಯಾಕೆ ಮದುವೆಯಾಗಬೇಕು ?"

"ಅವಳು ದುಡಿದು ಹಣ್ಣಾಗಿದ್ದಾಳೇಂತ ನಿನಗೆ ಯಾರು ತಿಳಿಸಿದರು."

"ಅವಳೇ"

"ಆಹಾ - ಇಬ್ಬರೂ ಸರಿಯಾಗಿದ್ದೀರಿ – ನನ್ನ ಕಣ್ಣಿಂದಲೇ ರಾಜೂ ಸಂಸಾರ ನಾನು ನೋಡಿ ಬಂದಿದ್ದೇನೆ – ಆ ಮನೆಯಲ್ಲಿ ಇವಳಿಗೇನು ಕಡಿಮೆಯಾಗಿದೆ ? – ಇವಳು ಆಡಿದಾಟವಾಗಿದೆ – ದುಡಿದು ಹಣ್ಣಾಗೋದು ಆ ಮುದುಕಿ - ಆ ತಬ್ಬಲಿ ಮಗು"

"ಹೌದೇ" ಎಂದರು ಗುಂಡಮ್ಮ

"ಹೂಮ್ಮ - ನನ್ನ ಮಗಳೂಂತ ನನಗೇನೂ ಪೆಚ್ಚಿಲ್ಲ - ಈಕಡೆ ಕಡ್ಡಿ ಎತ್ತಿ ಆಕಡೆ ಇಡೋದಿಲ್ಲ"

"ಈ ಕಾಲಕ್ಕೆ ಅವರೇ ವಾಸಿ ರಂಗಮ್ಮ - ಪಾತಕ್ಕನಂತೆ, ಈ ವಯಸ್ಸಿನಲ್ಲೂ ದುಡಿಯೋದಕ್ಕೆ ಯಾರಿಗೆ ಸಾಧ್ಯ ?"

ದ್ದಾಳೆ ಈ ಸೌಭಾಗ್ಯಕ್ಕೆ ಕಾಗದ ಯಾಕೆ ಬರಿಯಬೇಕಾಗಿತ್ತು " – ಇದು ಬರಲಿಲ್ಲಾಂತ ಅಳುತ್ತಿದ್ದರು ಯಾರಂತೆ ?"

"ಈ ಸಲ ಬರಲಿ ಸುಮ್ಮನಿರು – ನಾನು ಹೇಳಿಕೊಡುತ್ತೇನೆ "

"ಏನು ಹೇಳಿಕೊಡುತ್ತೀಯಾ ?"

"ಹೆಂಡತಿಗೆ ಕಾಗದ ಬರೆಯುವುದನ್ನು ಕಲಿಸಿ ಕಳುಹಿಸುತ್ತೇನೆ "

ಉಮೆಯ ಮಾತಿನಿಂದ ರಾಜಮ್ಮನಿಗೆ ನಗು ಬಂತು

"ಏಳು – ಅಮ್ಮ ಗಾಬರಿಪಟ್ಟುಕೊಳ್ಳುತ್ತಾಳೆ – ಮುಖ ತೊಳೆದು ಕುಂಕುಮ ಹಚ್ಚಿಕೋ " ಎಂದು ರಾಜಮ್ಮನನ್ನು ಎಬ್ಬಿಸಿದಳು

ಇದೇ ಒಂದು ವಾದ್ಯಾಂತವಾದೀತೆಂದು ರಾಜಮ್ಮ ಕಣ್ಣೊರಸಿಕೊಂಡು ಬಂದಳು ಗುಂಡಮ್ಮ, "ಏನು ಬರೆದಿರುವರು ? – ಆರೋಗ್ಯವಾಗಿರುವರೇ " ಎಂದು ಅಳಿಯನ ಯೋಗಕ್ಷೇಮವನ್ನು ವಿಚಾರಿಸಿಕೊಂಡರು

ರಂಗಮ್ಮ, 'ಬರುವ ಸಮಾಚಾರ ಬರೆದಿರುವರೇ ?"

"ಇನ್ನೂ ಈಗಾಗಲೇ ಎಲ್ಲಿ ಬರುತ್ತಾರೆ ? ರಜಾ ಸಿಕ್ಕಬೇಡವೇ ?" ಎಂದು ಉತ್ತರ ಹೇಳಿ ರಂಗಮ್ಮನ ಅನುಮಾನ ಪರಿಹಾರಮಾಡಿದಳು

ಮಂಜುಳೆಯ ಮೇಲಣ ಮೋಹ ಅವರನ್ನು ಬಲವಾಗಿ ಬಂಧಿಸಿದೆ – ಅದರ ಪ್ರತಿಫಲವಾಗಿಯೇ ನನ್ನ ವಿಷಯದಲ್ಲಿ ತಾತ್ಸಾರ, ಅಸಡ್ಡೆಗಳಿಗೆ ಎಡೆ ಇತ್ತಿದೆ – ನಾನು ಆ ಸ್ಥಾನವನ್ನಾಕ್ರಮಿಸುವುದು ಹೇಗೆ ? ನಾನಿಷ್ಟು ಜಾಗ್ರತೆ ಅವರನ್ನಗಲಿ ಬರಬಾರದಾಗಿತ್ತು – ಈಗೀಗ ಅವರು ಸ್ವಲ್ಪ ಬದಲಾಯಿಸುತ್ತಿದ್ದರು – ಎಂದು ತನ್ನಲ್ಲೇ ಹಲವು ದಾರಿ ಯೋಚಿಸಿ ಬೇಸತ್ತಳು

# ೧೫

ನರಸಿಂಹಯ್ಯ ಶಬ್ದವಾಗದಂತೆ ಎಚ್ಚರಿಕೆಯಿಂದ ಪ್ರವೇಶಿಸಿದ. ಮಂಜುಳಾ ಒಳಗೆ ಕೆಲಸದಲ್ಲಿದ್ದಳು. ತದೇಕಚಿತ್ತನಾಗಿ ಶ್ರೀಕಂಠ ಏನನ್ನೋ ನೋಡುತ್ತಿದ್ದ. ಅವನ ಅತ್ಯಾಸಕ್ತಿ ಕಂಡು ನರಸಿಂಹಯ್ಯನಿಗೆ ಕುತೂಹಲವಾಯಿತು. ಹಿಂದಿನಿಂದ ಬಂದು ನೋಡಿ

"ಇದೇನು ಶ್ರೀಕಂಠಾ? ಏನನ್ನೋ ಪರೀಕ್ಷಿಸುತ್ತಿರುವಂತಿದೆ?"

ಶ್ರೀಕಂಠ ಬೆಚ್ಚಿದ. ನರಸಿಂಹಯ್ಯನನ್ನು ಕಂಡಮೇಲೆ ನಸುನಗುತ್ತಾ,

"ನಾನು ಹೆದರಿಬಿಟ್ಟೆ - ಮಂಜುಳ ಒಳಗಿದ್ದಾಳೆ - ಕುಳಿತುಕೊಳ್ಳಿ" ಎಂದು ಕುರ್ಚಿ ತೋರಿಸಿದ.

"ಇದಿರಲಿ - ನೀನೇನು ಮಾಡುತ್ತಿದ್ದೆ?"

"ಏನೂ ಇಲ್ಲ" ಎಂದು ಶ್ರೀಕಂಠ ನಾಚಿದ. ಅವನ ಮುಖ ಕೆಂಪಾದುದನ್ನು ಕಂಡು, "ಹುಡುಗಿಯಂತೆ ನಾಚುತ್ತೀಯಲ್ಲಯ್ಯಾ - ಕೊಡಿಲ್ಲಿ ನೋಡೋಣ"

"ಅಷ್ಟೇನೂ ಚೆನ್ನಾಗಿಲ್ಲ ಸಾರ್"

"ಇರಲಿ ಕೊಡು" ಎಂದು ಚಿತ್ರವನ್ನು ಕೈಗೆ ತೆಗೆದುಕೊಂಡ.

ಶ್ರೀಕಂಠ 'ಪಾರ್ಥಸಾರಥಿ'ಯನ್ನು ಚಿತ್ರಿಸಿದ್ದ - ತನ್ನ ಬಂಧು ಬಾಂಧವರ ರುಂಡವನ್ನೇ ಚೆಂಡಾಡಬೇಕಲ್ಲಾ ಎಂದು ಪಾರ್ಥ ರಣರಂಗದಲ್ಲಿ ಚಿಂತಿಸುತ್ತಿದ್ದಾನೆ - ನೀಲಮೇಘಶ್ಯಾಮ ಅರ್ಜುನನ ಸಂತಾಪಕ್ಕೆ ನಸುನಗುತ್ತಾ ಗೀತೋಪದೇಶ ಮಾಡುತ್ತಿರುವನು. ಅರ್ಜುನನ ನಿರ್ವಿಣ್ಣತೆಯನ್ನು ಶ್ರೀಕಂಠ ಚೆನ್ನಾಗಿ ಚಿತ್ರಿಸಿದ್ದ - ಇದೆಲ್ಲವೂ ತನ್ನ ಲೀಲಾಜಾಲ

ಏನೋದ ಎಂದು ಮುಗುಳ್ನಗೆಯು ಹೊಂಬೆಳಕಿನ ಕಿರಣದಿಂದ ಕುಂತೀಸುತ ನನ್ನು ಭಗವಂತ ಸೆರೆಹಿಡಿದಂತೆ ನರಸಿಂಹಯ್ಯನನ್ನೂ ಬಂಧಿಸಿದ್ದ

"ಇದನ್ನು ನೀನೇ ಬರೆದೆಯಾ ಶ್ರೀಕಂಠಾ ?"

"ಹೇಗಿದೆ ಸಾರ್ ?"

"ನನಗೆ ಚಿತ್ರಕಲೆಯ ವಿಷಯ ಏನೇನೂ ತಿಳಿಯದು ಶ್ರೀಕಂಠಾ - ಆದರೂ ನನ್ನ ಅಭಿಪ್ರಾಯ ತಿಳಿಸುತ್ತೇನೆ —'ಪಾರ್ಥಸಾರಥಿ' ತುಂಬಾ ಚೆನ್ನಾಗಿದೆ - ಇನ್ನೇನು ಬರೆದಿರುವೆ ?"

"ಮಂಜುಳಾನೂ ಇದನ್ನೇ ಒಪ್ಪಿದಳು - ಹಾಗಾದರೆ ಇದನ್ನೇ ಪ್ರದರ್ಶನಕ್ಕೆ ಕಳುಹಿಸುತ್ತೇನೆ '

"ಯಾವ ಪ್ರದರ್ಶನ ?"

"ದಸರಾ ಎಕ್ಸಿಬಿಷನ್‌ಗೆ ನಮ್ಮ ಕಲಾಶಾಲೆಯಿಂದಲೂ ಕೆಲವು ಚಿತ್ರ ಕಳಿಸಬೇಕೆಂದಿರುವರು

"ಖಂಡಿತಾ ಕಳುಹಿಸು - ಬಹುಮಾನ ಸಿಗುತ್ತದೆ "

"ನಿಮ್ಮ ಆಶೀರ್ವಾದ " ಎಂದು ಶ್ರೀಕಂಠ ಉಳಿದ ಚಿತ್ರಗಳನ್ನು ತೋರಿಸಿದ. ಧ್ರುವ, ನೀಲಮೇಘಶ್ಯಾಮ, 'ರಾಧಾ-ಕೃಷ್ಣ '- ಎಲ್ಲವನ್ನು ನೋಡಿದ ನರಸಿಂಹಯ್ಯ "ಶ್ರೀ ಕೃಷ್ಣ ನಿನ್ನ ಆರಾಧ್ಯಮೂರ್ತಿಯೋ?"

ಶ್ರೀಕಂಠ ನಕ್ಕು ತನ್ನ ಉತ್ತರ ಸೂಚಿಸಿದ

ಚಿತ್ರಗಳನ್ನು ಜೋಡಿಸುತ್ತಾ "ಅಲ್ಲಯ್ಯಾ, ಇಷ್ಟೊಂದು ಪ್ರತಿಭೆ ಅಡಗಿಸಿಕೊಂಡೂ ಬೂದಿಮುಚ್ಚಿದ ಕೆಂಡದ ಹಾಗಿರುವೆಯಲ್ಲಾ ? - ನೀನು ಇಷ್ಟು ಚೆನ್ನಾಗಿ ಚಿತ್ರ ಬರಯುತ್ತೀಯೆಂದು ನನಗೇ ಗೊತ್ತಿರಲಿಲ್ಲ "

ಪರಿಚಿತ ಧ್ವನಿ ಕೇಳಿದ ಮಂಜುಳ ಬೇಗ ಕೆಲಸಮುಗಿಸಿ ಕೈಯೊರಸಿ ಕೊಂಡು ಬಂದಳು

"ಏನು ? ಚಿತ್ರವಿಮರ್ಶೆಗೆ ಕುಳಿತಂತಿದೆ ?"

"ಶ್ರೀಕಂಠ ಎಷ್ಟು ಚೆನ್ನಾಗಿ ಬರೀತಾನೇ ? ನೀನು ನನಗೆ ಹೇಳಲಿಲ್ಲ "

"ನನಗೆ ತಿಳಿದಿದ್ದರೆ ತಾನೇ ಹೇಳುವುದು ? ಏನೋ ಕಲಿತಾನೆ ಎಂದೂ ನಾನು ಅಸಡ್ಡೆಯಿಂದಿದ್ದೆ " —ಮೊನ್ನೆ 'ಪಾರ್ಥಸಾರಥಿ ' ನೋಡಿದಾಗ ನನಗೇ ಆಶ್ಚರ್ಯವಾಯಿತು "

ಶ್ರೀಕಂಠ ಇದೇ ಸಮಯ ಸಾಧಿಸಿ,

"ಮುಂದೆ ಕಲಿಯಲು ಬೊಂಬಾಯಿಗೆ ಹೋಗುತ್ತೇನೆಂದರೆ ಇವಳು ಒಪ್ಪುವುದಿಲ್ಲ" ಎಂದ

"ಇಲ್ಲಿ ಕಲಿತಿದ್ದು ಮುಗಿಯಿತೇ ?"

"ಇಲ್ಲ ಇನ್ನೂ ಒಂದು ವರ್ಷವಿದೆ"

"ಕಾಲಾವಕಾಶವಿದೆಯಲ್ಲಾ - ಯೋಚಿಸಿದರಾಯ್ತು" ಎಂದು ನರಸಿಂಹಯ್ಯ ಅಡ್ಡಗೋಡೆಯಮೇಲೆ ದೀಪ ಇಟ್ಟಂತೆ ತೀರ್ಪನ್ನಿತ್ತ

ಪ್ರೋಲೀ ಅಲೆಯುತ್ತಾ ಅಮ್ಮನ ಕೈಲಿ ಪೆಟ್ಟು ತಿನ್ನುತ್ತಿದ್ದ ಶ್ರೀಕಂಠ ಇವನೇ ಎಂದರೆ ಆಶ್ಚರ್ಯವಾಗುತ್ತವೆ ಎಂದು ಹಿಂದಿನದನ್ನು ಮಂಜುಳೆ ನೆನಪಿಗೆ ತಂದುಕೊಂಡಳು

"ಈಗ ನೆನಪಾಯ್ತು - ನಿನ್ನೆ ಸ್ವಾಮಿ ಸಿಕ್ಕಿದ್ದರು"

"ಆಂ ಮನೆಗೇ ಬರಲಿಲ್ಲ ? ಕರೆವೆಯೋ ಇಲ್ಲವೋ ?"

"ಕರೆಯುವೇ ಇರುವೆನೇ ? ಯಾವುದೋ ಕೋರ್ಟು ಕೆಲಸಕ್ಕೆ ಬಂದಿದ್ದರಂತೆ - ಪುರುಸೊತ್ತಿಲ್ಲ-ಪುನಃ ಬಂದಾಗ ಖಂಡಿತಾ ಬರುತ್ತೇನೆ ಮಂಜುಳೆಗೆ ತಿಳಿಸು ಎಂದು ಹೇಳಿದರು"

"ನಮ್ಮನ್ನು ಮರೆತಿಲ್ಲ"

"ಆಗಿನಂತಿಲ್ಲ - ತುಂಬಾ ಇಳಿದುಹೋಗಿರುವರು"

"ಪಾಪ"

"ನನ್ನ ವಿಷಯ ಕೇಳಿದರು - ಹೇಳಿದೆ - 'ಪುನಃ ಬಂದಾಗ ಬರೆದುದೆಲ್ಲವನ್ನೂ ತೋರಿಸು - ನೋಡುತ್ತೇನೆ - ಮುಂದೆ ಯೋಚಿಸೋಣ - ನಿನಗೇನು ಸಮಯವಾದರೂ ಸಂಕೋಚಪಡಬೇಡ - ಕಾಗದ ಬರಿ - ನಿಮಗಾಗಿ ಮರುಗುವ ಆತ್ಮೀಯ ಬಂಧುವೊಬ್ಬನಿರುವನೆಂದು ನಂಬಿ - ನನ್ನ ಕೈಲಾದ ಸಹಾಯ ಖಂಡಿತಾ ನಾನು ಮಾಡುತ್ತೇನೆ' ಎಂದು ಧೈರ್ಯ ಹೇಳಿದರು"

"ಅವರಂತಹ ಮನುಷ್ಯ ಸಿಕ್ಕುವುದು ದುರ್ಲಭ" ಎಂದು ಮಂಜುಳೆ ಸ್ವಾಮಿಯ ಬಗ್ಗೆ ವಿಶ್ವಾಸದ ಮಾತನ್ನಾಡಿದಳು

ಸ್ವಾಮಿಯ ಸುದ್ದಿ ನರಸಿಂಹಯ್ಯನಿಗೆ ಹಿಂದಿನ ನೆನಪು ತರಿಸಿತು -

ತನ್ನ ಮಂಜುಳೆಯ ಸ್ನೇಹ – ವತ್ಸಲಮ್ಮನ ಮಮತೆ – ತನ್ನ ಮಗಳ ಭವಿಷ್ಯ ಭದ್ರವಾಗಬೇಕೆಂದು ಅವರ ಯತ್ನ – ನಿರಾಶೆ – ವತ್ಸಲಮ್ಮನ ಸಾವು —

'ತಾನು ಧೈರ್ಯದಿಂದ ಮಂಜುಳೆಯನ್ನು ಮಡದಿಯನ್ನಾಗಿ ಮಾಡಿಕೊಂಡಿದ್ದರೆ ವತ್ಸಲಮ್ಮ ಸಾಯುತ್ತಿರಲಿಲ್ಲ'

'ಇಂದು ಮಗನ ಶ್ರೇಯಸ್ಸನ್ನು ಕಂಡು ಆನಂದಬಾಷ್ಪ ಹರಿಸುತ್ತಿದ್ದರು'

'ವತ್ಸಲಮ್ಮನನ್ನು ನಾನೇ ಕೊಂದೆನೇ ?'

ಒಂದು ಕಡೆ ಮೀನಾಕ್ಷಮ್ಮ - ಒಂದು ಕಡೆ ವತ್ಸಲಮ್ಮ ನಿಂತು 'ಕೊಲೆಪಾತಕ' ಎಂದು ದೂಷಿಸುತಿದ್ದಂತೆ ಭಾಸವಾಯಿತು

ಸುಮಿತ್ರೆ - ಶ್ರೀಕಂಠ ಇಬ್ಬರೂ ತನ್ನೆದುರು ನಿಂತು 'ನಮ್ಮನ್ನು ತಬ್ಬಲಿ ಮಾಡಿದೆಯಾ ?' ಎಂದು ಕೇಳುವಂತೆ ತೋರಿತು

'ನಾನು ಪಾಪಿ - ಪಾಪಿ' ಎಂದು ತನ್ನಲ್ಲೇ ಗೊಣಗಿಕೊಂಡು ನರಸಿಂಹಯ್ಯ ಮುಖ ಮುಚ್ಚಿಕೊಂಡು ದುಃಖಿಸಿದ

ವಿಷಣ್ಣವದನನಾದ ನರಸಿಂಹಯ್ಯನನ್ನು ಕಂಡು ಮಂಜು ಭಯಪಟ್ಟು

"ಯಾಕೆ ? ಏನಾಯಿತು ?"

"ಏನೂ ಇಲ್ಲ – ನನ್ನ ಪಾಡಿಗೆ ನನ್ನನ್ನು ಬಿಡು ಮಂಜು"

ನರಸಿಂಹಯ್ಯನೊಬ್ಬನನ್ನೇ ಕೊಠಡಿಯಲ್ಲಿ ಬಿಟ್ಟು ಮಂಜುಳಾ, ಶ್ರೀಕಂಠ ಹೊರಕ್ಕೆ ಬಂದರು

# ೧೬

"ಏನಪ್ಪಾ ಸೀತಾರಾಮೂ, ನೀನೂ ಹೊರಗಿನವನಂತೇ ಆಗಿಬಿಟ್ಟೆಯಲ್ಲಾ" ಎನ್ನುತ್ತಲೇ ಮಾತಕ್ಕೆ ಚಾಪೆ ಹಾಕಿದರು

"ನರಸಿಂಹ ಇಲ್ಲವೇ?" – ಅವನ ದರ್ಶನವೇ ಈ ನಡುವೆ ಸಿಗೋಲ್ಲವಲ್ಲಾ?'

"ಸುಮ್ಮನಿರೋ ಸಾಕು – ನನಗೇ ಹೇಳ್ತೀಯಲ್ಲಾ"

"ಏನಮ್ಮಾ'

"ನಿನ್ನ ಗುಟ್ಟು ಅವನಿಗೆ, ಗೊತ್ತು – ಅವನದು ನಿನಗೆ ಗೊತ್ತು"

"                "

"ಅಲ್ಲಾ ಕಣೋ ಸೀತಾರಾಮು ನಿನ್ನ ಸ್ನೇಹಿತನಿಗೆ ನೀನಾದರೂ ಸ್ವಲ್ಪ ಬುದ್ಧಿ ಹೇಳಬಾರದೇ?"

"ಯಾವ ವಿಷಯದಲ್ಲಿ?"

"ಅವನ ಸಂಸಾರದ ವಿಷಯದಲ್ಲಿ - ಹೀಗೆ ಮೂರು ಹೊತ್ತೂ ಅವಳ ಮನೆಯಲ್ಲಿ ಸತ್ತರೆ ಮನೆ, ಮಕ್ಕಳ ಗತಿ ಏನು?'

"ಅವನೇನೂ ನಿಮಗೆ ಕಡಿಮೆ ಮಾಡಿದ ಹಾಗೆ ಕಾಣುವುದಿಲ್ಲವಲ್ಲಮ್ಮಾ?"

"ನಿನಗೇನು ಗೊತ್ತು? ಆ ಹುಡುಗಿ ಪಾಪ - ಎಷ್ಟು ನೊಂದುಕೊಳ್ತಾ ಇದೆ - ಊರಿಗೆ ಹೆಂಡತಿಯನ್ನು ಕಳಿಸಿದ ಮೇಲೆ ಗೃಹಸ್ಥ ಒಂದು ಸಲ ಹೋಗಿ ನೋಡಿ ಬರಬಾರದೇ? ಹೇಳು."

"ಈಗೆಲ್ಲಿ ರಜಾ ಸಿಕ್ಕುತ್ತದಮ್ಮಾ - ಪರೀಕ್ಷೆಕಾಲ - ಮಗು ಹುಟ್ಟಿದ ಮೇಲೆ ಹೋಗೇ ಹೋಗ್ತಾನೆ"

"ಏನಾದರೂ ಮಾಡಿ ಆ ಸಂಬಂಧ ತಪ್ಪಿಸೋ ಸೀತಾರಾಮು "

"ನೀವು ತಿಳಿದುಕೊಂಡಿರುವಷ್ಟು ಸುಲಭವಲ್ಲಮ್ಮ ಮಂಜುಳಾ ಒಂದು ಪಕ್ಷ ಒಪ್ಪಿದರೂ ನರಸಿಂಹಯ್ಯನೇ ಅವಳನ್ನು ಬಿಡಲಾರ - ನಿಮ್ಮ ಮಗ ನಿಮಗೆ ದಕ್ಕಬೇಕಾದರೆ ಸುಮ್ಮನಿದ್ದುಬಿಡಿ ಈ ವ್ಯವಹಾರದಲ್ಲಿ ಕೈಹಾಕಿ ಮನಸ್ತಾಪ ತಂದುಕೊಳ್ಳಬೇಡಿ."

ಸೀತಾರಾಮುವಿನ ಖಡಾಖಂಡಿತವಾದ ಮಾತಿನಿಂದ ಪಾತಕ್ಕ ಸುಮ್ಮನಾದರು

ಆ ದಿನವೇ ಸಂಜೆ ಸೀತಾರಾಮು ಮಂಜುಳೆಯ ಮನೆಯಲ್ಲಿ ನರಸಿಂಹಯ್ಯನನ್ನು ಕಂಡ

"ಏನೂ ತಿಳಿದುಕೊಳ್ಳಬೇಡಮ್ಮಾ ಸ್ವಲ್ಪ ನರಸಿಂಹಯ್ಯನನ್ನು ಕರೆದುಕೊಂಡು ಹೋಗುತ್ತೇನೆ "

"ಅದಕ್ಕೇನು ಅಗತ್ಯವಾಗಿ ಹೋಗಿ ಬರಲಿ " ಮಂಜುಳೆ ನಕ್ಕು ನುಡಿದಳು

ಜನಜಂಗುಳಿ ಇಲ್ಲದ ವಿಶಾಲರಸ್ತೆಯಲ್ಲಿ ಇಬ್ಬರೂ ನಡೆಯುತ್ತಿದ್ದರು ಸೀತಾರಾಮು ಎಷ್ಟು ಹೊತ್ತಾದರೂ ಮಾತಾಡುವ ಸೂಚನೆ ತೋರಿಸಲಿಲ್ಲ ಬೇಸರಗೊಂಡ ನರಸಿಂಹಯ್ಯ,

"ಇದೇನಯ್ಯಾ ? ನಿನ್ನ ಚರ್ಯೆಯೇ ಸನಗರ್ಥವಾಗುವುದಿಲ್ಲವಲ್ಲಾ "

"ಅದಕ್ಕೇ ಬರುತ್ತಿದ್ದೇನೆ - ಸ್ವಲ್ಪ ತಡಿ " ಎಂದು,

"ಅಲ್ಲಾ ನರಸಿಂಹ - ನನಗೊಂದು ಸಂಸಾರ ಅನ್ನೋದು ಇದೆ ಅಂತಾನೆ ಮರೆತಿದ್ದೀಯಲ್ಲಾ - ಇದು ಸರಿಯೇ ?"

"ಯಾಕೆ ? ಮನೆಯಲ್ಲಿ ಯಾರಿಗೇನಾಗಿದೆ ?"

"ಗಾಬರಿ ಬೀಳಬೇಡ - ಇದುವರೆಗೆ ಏನೂ ಆಗಿಲ್ಲ - ಮುಂದೆಯೂ ಏನೂ ಆಗದಂತೆ ನೋಡಿಕೊಳ್ಳಬೇಕಾದುದು ನಿನ್ನ ಕರ್ತವ್ಯ "

"ಈಗೇನು ಕರ್ತವ್ಯಲೋಪ ಮಾಡಿದ್ದೇನಿ ಸೀತಾರಾಮು ?"

"ನಿನ್ನ ಸುಖ ನೀನು ನೋಡಿಕೊಂಡರೆ ಮುಗಿಯಿತೇ ನಿನ್ನನ್ನವಲಂಬಿಸಿದ ಎಷ್ಟು ಜೀವಗಳಿವೆ ಯೋಚಿಸು - ಅವರೆಲ್ಲರ ಹಿತಾಹಿತ ನಿನಗೆ ಸೇರಿದುದಲ್ಲವೇ ?"

"ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳಯ್ಯಾ"

"ಪಾತಕ್ಕ ಮುದುಕಿ - 'ರಾಮ-ಕೃಷ್ಣ' ಅಂತ ಹಾಯಾಗಿ ಪ್ರಾಣ ಬಿಡುವುದನ್ನೇ ಕಾಯುತ್ತಿದ್ದಾರೆ – ಸುಮಿತ್ರೆಯ ಯೋಗಕ್ಷೇಮ ರಾಜಮ್ಮನಿಗಲ್ಲವೇ ಸೇರಿದುದು ?"

"ಹೌದು"

"ಸುಮಿತ್ರೆ ಚೆನ್ನಾಗಿರಬೇಕೆಂದು ನಿನ್ನ ಅಭಿಲಾಷೆಯಲ್ಲವೇ ?"

"ಅಷ್ಟಲ್ಲವೇ ಏನು ?"

"ಸರಿ - ಸುಮಿತ್ರೆ ಸುಖವಾಗಿ ಬಾಳಬೇಕೆಂಬ ಆಸೆಯುವಿದ್ದಲ್ಲಿ ರಾಜಮ್ಮ ನನ್ನು ಸರಿಯಾಗಿ ನೋಡಿಕೋ -"

"ಈಗ ಅವಳಿಗೇನು ಅನ್ಯಾಯ ಮಾಡಿರುವೆ ?"

"ಅದು ನಿನಗೇ ಗೊತ್ತು - ಹೆಣ್ಣು ತನ್ನ ಎಲ್ಲಾ ಕೆಲಸಕಾರ್ಯ ಗಳಿಗೂ ಬಯಸುವುದೇನು ? - ಗಂಡನಿಂದ ಉತ್ತೇಜನಕರವಾದ ಒಂದೆರಡು ಹಿತನುಡಿ - ಕೈಹಿಡಿದವನ ಪ್ರೀತಿ - ಅದರಿಂದವಳು ವಂಚಿತಳಾದರೆ ಯಾರಿಗೂ ಸುಖವಾಗಬೇಕೆಂದು ಅವಳು ಬಯಸುವುದಿಲ್ಲ - ನಿನ್ನ ಪ್ರತಿ ಸ್ಪರ್ಧಿಯಂತೆ ತಾನೂ ನಿಂತು ಮನೆಯನ್ನು ರಣರಂಗ ಮಾಡುತ್ತಾಳೆ - ನಿನ್ನ ಪುಣ್ಯ - ಪಾತಕ್ಕನೂ ಕಷ್ಟ ಸುಖ ಅನುಭವಿಸಿದವರಾದ್ದರಿಂದ ಸೊಸೆಯ ತಪ್ಪನ್ನು ಗಮನಕ್ಕೆ ತಾರದೆ ನಿನ್ನದೂ ಒಂದು ಮನೆಯೆನ್ನಿಸಿದ್ದಾರೆ"

"ಅವಳಿಗೆ ಹಿತವಾಗಬೇಕಾದರೆ ನಾನು ಅಸುಖಿಯಾಗಬೇಕು"

"ಹಾಗೇನೂ ಇಲ್ಲ - ರಾಜಮ್ಮನನ್ನು ತಿರಸ್ಕಾರದಿಂದ ಕಾಣದಿದ್ದ ರಾಯಿತು"

"ನಾನೀಗ ಏನು ಮಾಡಬೇಕು ?"

"ಹೋಗಿ ನಿನ್ನ ಹೆಂಡತಿಯನ್ನೊಮ್ಮೆ ನೋಡಿಕೊಂಡು ಬಾ - ಈಗ ನಿನ್ನ ಸನಿಹವನ್ನು ಅವಳು ಬಯಸುವುದು ಸ್ವಾಭಾವಿಕ"

"ಈಗೆಲ್ಲಿ ಸಾಧ್ಯ ? - ಮುಂದೆ ನೋಡೋಣ"

"ಕಿವುಡನ ಮುಂದೆ ಕಿನ್ನರಿ ಬಾರಿಸಿದ ಹಾಗಾಯಿತು - ನಾನೆಷ್ಟೇ ಒರಲಿಕೊಂಡರೂ ನಿನ್ನ ಸ್ವಭಾವ ಬೇರೆ ನೀನು ಬಿಡುವುದಿಲ್ಲ" ಸೀತಾರಾಮು ಬೇಸರದಿಂದ ಸುಮ್ಮನಾದ.

## ೧೭

ಕಾಲಚಕ್ರ ರಾಜಮ್ಮನಂತೆ ಕಾಯಲಿಲ್ಲ ಅದು ಒಂದೇ ಸಮನೆ ಆಶೆ - ನಿರಾಶೆಯ ಸೋಂಕಿಲ್ಲದೆ ಉರುಳುತ್ತಲಿತ್ತು

ಸ್ನಾನ ಮುಗಿಸಿ ಬಂದಿದ್ದ ನರಸಿಂಹಯ್ಯನಿಗೊಂದು ತಂತೀ ವರ್ತಮಾನ ವನ್ನು ಅಂಚೆಯವನು ತಂದಿತ್ತ ಅದನ್ನು ಕಂಡ ಪಾತಕ್ಕ ಕಾತರದಿಂದ ಕೇಳಿದರು

"ಸದ್ಯ ಆರೋಗ್ಯವಂತೇನಪ್ಪಾ ?"

ನರಸಿಂಹಯ್ಯ ಒಡೆದುನೋಡಿ, "ನಿನ್ನೆ ರಾತ್ರಿ ಏಳೂವರೆ ಗಂಟೆಗೆ ಹೆಣ್ಣುಮಗು ಜನಿಸಿತಂತೆ " ಎಂದು ತಿಳಿಸಿದ

ಪಾತಕ್ಕ ದೇವರ ಮುಂದೆ ತುಪ್ಪದ ದೀಪ ಹಚ್ಚಿಟ್ಟು, ಮಗ, ಮೊಮ್ಮಗಳಿಗೆ ಸಕ್ಕರೆ ಹಂಚಿದರು

"ಹೆಣ್ಣಂತಲ್ಲಮ್ಮಾ"

"ಹೆಣ್ಣೇನು ? ಗಂಡೇನು ? ಸದ್ಯ ಸುಖವಾಗಿ ವೈಕಳಿಯಿತಲ್ಲಾ" ಎಂದು ತಮ್ಮ ನಿರಾಶೆಯನ್ನು ಅಡಗಿಸಿಕೊಂಡರು

ತನ್ನ ಜತೆಗೆ ಆಡಲು ಮನೆಗೊಂದು ಮಗು ಬರುತ್ತದಲ್ಲಾ ಎಂದು ಸಂತಸದಿಂದ ಸುಮಿತ್ರೆ ಕುಣಿದಾಡಿದಳು

"ನಾಮಕರಣಕ್ಕೆ ನೀನೂ, ಸುಮಿಾ ಹೋಗಿಬನ್ನಿ,"

"ನೀನು ಬರುವುದಿಲ್ಲವೇನಮ್ಮಾ ?"

"ಈಗಲೇ ಏನವಸರ ? ಇಲ್ಲಿಗೆ ಬಂದಾಗ ನೋಡೇ ನೋಡುತ್ತೇನೆ."

"ಏನೆಂದು ಹೆಸರಿಡುವುದಮ್ಮಾ ?"

"ನೋಡಪ್ಪಾ - ನಿಮಗೇನು ತೋರುತ್ತದೋ ಅದನ್ನಿಡಿ"

"ಅಣ್ಣಾ—ಸ್ವರ್ಣಾಂತ ಕರಿಯೋಣ" ಸುಮಿತ್ರೆ ಹೇಳಿದಳು

"ಅವಳ ಉತ್ಸಾಹ ಕಂಡು ನರಸಿಂಹಯ್ಯ,

"ಹಾಗೇ ಆಗಲಿ – ನೀನೂ ಬರ್ತೀಯಾ ಸುಮಿ ?"

"ಬರ್ವೇ ಮತ್ತೆ ?" ಸುಮಿ ರಾಗವೆಳೆದಳು

"ಅವಳಿಗೂ ಏನೂ ಇಡಲಿಲ್ಲ ಈಗಲೂ ಬರೀಕೈಯಲ್ಲಿ ಹೋಗಬೇಡ."

"ನನಗವೆಲ್ಲಾ ಏನೂ ತಿಳಿಯುದು - ನೀನೇ ಹೇಳು"

"ಸುಮಿತ್ರ ಮಗುವಾಗಿದ್ದಾಗ ಹಾಕಿದ್ದ ಬಳೆ ಇದೆಯಲ್ಲಾ - ಒಪ್ಪ ಹಾಕಿಸಿ ತೆಗೆದುಕೊಂಡು ಹೋಗು"

"ಅವಳಿಗೆ"

'ನಿನಗಾ ಒತನೆ, ಸುಮಿಗಾನೆ ತಾನೆ ? ಇವೊಂದಿಲ್ಲದಿದ್ದರೆ ಏನು ಕೊಳ್ಳೆಹೋಗುತ್ತೆ ?'

'ಸುಮಿ - ನಿನ್ನ ಬಳೆಯನ್ನ ತಂಗೀಗೆ ಕೊಡ್ತೀಯೋನೇ ?"

"ಒಹೋ"

ಹೊರಡುವ ದಿನವಂತೂ ಸುಮಿತ್ರೆಯ ಸಂಭ್ರಮ ಹೇಳತೀರದು ಅವಳ ಸಾಮಾನುಗಳೇ ಒಂದು ದೊಡ್ಡ ಗಂಟಾಗಿತ್ತು

"ಎಲ್ಲವನ್ನೂ ತೆಗೆದುಕೊಂಡು ಹೋಗುವುದಕ್ಕೆ ಸಾಧ್ಯವಿಲ್ಲ - ಇದಿಲ್ಲೇ ಇರಲಿ" ಎಂದು ಒಳಗಿರಿಸಿದ

ಸುಮಿತ್ರೆಗೆ ಅಳು ಬರುವಂತಾಯಿತು

"ಅದರಲ್ಲೇನಿದೆಯೋ ಆಸ್ತಿ ?"

"ಆಟದ ಸಾಮಾನು - ಸ್ವರ್ಣನಿಗೆ ಕೊಡಲು ಇಟ್ಟಿದ್ದೆ"

"ಅಯ್ಯೋ ಹುಚ್ಚಿ - ಮಗು ಈಗ ಆಟ ಆಡುತ್ತದಯೇನೇ ? ಇಲ್ಲೇ ಬಂದಾಗ ಕೊಡುವೆಯಂತೆ - ಸುಮ್ಮನಿರು" ಎಂದು ಸಮಾಧಾನಪಡಿಸಿದ

ಸುಮಿತ್ರೆ ಬಣ್ಣದ ಗಿಲಿಕೀ ಬೊಂಬೆ ಆರಿಸಿಕೊಂಡು, ಉಳಿದುದನ್ನು ಪಾತಕ್ಕನ ಮೇಲ್ವಿಚಾರಣೆಯಲ್ಲಿಟ್ಟಳು

ಪಾತಕ್ಕ "ಸರ ಜೋಪಾನ" ಎಂದು ಸುಮಿತ್ರೆಗೆ ಎಚ್ಚರಿಕೆ ಕೊಟ್ಟರು.

ಸುಮಿತ್ರೆಯ ಆಕಾಂಕ್ಷೆಯಂತೆ ಮಗುವಿಗೆ 'ಸ್ವರ್ಣ' ಎಂದು

ನಾಮಕರಣವಾಯಿತು ಸುಮಿತ್ರೆ ತನ್ನ ಸರಳನಡತೆಯಿಂದ ಎಲ್ಲರ ಹೃದಯವನ್ನೂ ಗೆದ್ದಳು ರಾಜಮ್ಮನಿಗೆ ಮಾತ್ರ ಬಲಮಗಳ ಆಗಮನ ಉರಿಯುವ ಬೆಂಕಿಗೆ ತುಪ್ಪ ಹೊಯ್ದಂತಾಯಿತು ತಾನು ಬರಿಯಕತ್ತಿನಲ್ಲಿದ್ದರೂ ಸುಮಿತ್ರೆ ಎರಡೆಳೆ ಸರ ಹಾಕಿಕೊಂಡಿರುವುದು , ತನ್ನ ಮಗುವಿಗೆ ಸುಮಿತ್ರೆಯಮೇ ಬಳೆ ಇಟ್ಟಿರುವುದು ಎಲ್ಲವನ್ನೂ ತಿಳಿದು ಪಾತಕ್ಕನಮೇಲೆ ಕಿಡಿಕಾರಿದಳು

"ಸುಮಿತ್ರೆಗಾಗಿ ಮಿಕ್ಕಿದುದು ನನ್ನ ಮಗುವಿಗೇ ?" ಎಂದು ತನ್ನಲ್ಲೇ ಹಲವುಬಾರಿ ಪ್ರಶ್ನಿಸಿಕೊಂಡಳು ಸುಮಿತ್ರೆ ರಾಜಮ್ಮನಿಗೆ ಆಶ್ರಿತಳಂತೆ ಕಂಡು ಬರಲಿಲ್ಲ. ಎಲ್ಲಾ ವಿಷಯಗಳಲ್ಲೂ ತನ್ನ ಪ್ರತಿಸ್ಪರ್ಧಿಯಾಗಿ ನಿಂತು, ತನ್ನನ್ನು ಅವಹೇಳನ ಮಾಡುವಂತೆ ತೋರಿತು ಸುಮಿತ್ರೆಯ ಒಂದೊಂದು ಚಲನ ವಲನವನ್ನೂ ಅವಳು ದ್ವೇಷದಿಂದ ಗಮನಿಸಹತ್ತಿದಳು

ಇದಾವುದರ ಅರಿವೂ ಇಲ್ಲದೆ, ಸುಮಿತ್ರೆ ತನ್ನ ಮುದ್ದು ತಂಗಿಯನ್ನು ಆಡಿಸಲು ಬರುತ್ತಿದ್ದಳು ರಾಜಮ್ಮ "ಮಗು ಮಲಗಬೇಕು ಹೋಗು" ಎಂದು ಸಾಗ ಹಾಕುತ್ತಿದ್ದಳು ಸುಮಿತ್ರೆ ಖಿನ್ನಳಾಗಿ ಹೊರಗೆ ಬರುತ್ತಿದ್ದಳು. -

ಗಂಡ ಬಂದರೂ ಎರಡು ದಿನವಿದ್ದು ಹೋದ ಶಾಸ್ತ್ರಮಾಡಿದುದು ರಾಜಮ್ಮನನ್ನು ಕೆರಳಿಸಿತು ಸುಮಿತ್ರೆಯ ಕಾಟದಿಂದ ಒಂದೆರಡು ಮಾತನ್ನಾಡಲೂ ಸಾಧ್ಯವಾಗಿರಲಿಲ್ಲ ತಂದೆಯ ಹಿಂದೆ ಹಿಂದೆ ಅವಳು ಸುತ್ತುತ್ತಿದ್ದುದನ್ನು ಕಂಡು,

"ವಯಸ್ಸಾದಮೇಲೂ ಮಾನ ಮರ್ಯಾದೆ ತಿಳಿಯಕೊಳ್ಳಬೇಡವೇ ? ತಂದೆಯ ಹಿಂದೇ ಓಡಾಡುತ್ತೀಯಲ್ಲಾ - ನೋಡಿದವರೇನಂದುಕೊಳ್ಳುವುದಿಲ್ಲ" ಎಂದು ಸುಮಿತ್ರೆಯನ್ನು ನಿಂದಿಸಿದಳು ಸುಮಿತ್ರೆ ರಾಜಮ್ಮನಿಗೊಂದು ಪೀಡೆಯಾಗಿದ್ದಳು

ಸುಮಿತ್ರೆಯನ್ನು ಗುಂಡಮ್ಮ ಯೋಗ್ಯರೀತಿಯಲ್ಲಿ ಪುರಸ್ಕರಿಸಿ ಕಳುಹಿಸಿದ್ದರು ಅದನ್ನು ಕಂಡು ಪಾತಕ್ಕ ಸಂತೋಷಪಟ್ಟರೂ, ರಾಜಮ್ಮನ ಮಾತುಗಳನ್ನು ಕೇಳಿದಮೇಲೆ,

"ಎಷ್ಟಾದರೂ ಚಿಕ್ಕಮ್ಮ - ಚಿಕ್ಕಮ್ಮನೇ ?" ಎಂದು ಕೊರಗಿದರು.

ಮಗುವಿನೊಡನೆ ಗಂಡನಮನೆ ಸೇರಿದಮೇಲೂ ರಾಜಮ್ಮ ತನ್ನ

ಸ್ವಭಾವ ಬದಲಾಯಿಸಲಿಲ್ಲ ನರಸಿಂಹಯ್ಯನ ವಿಷಯದಲ್ಲಿ ನಮ್ರತೆಯಿಂದ ನಡೆದುಕೊಳ್ಳುತ್ತಿದ್ದರೂ, ಪಾತಕ್ಕ, ಸುಮಿತ್ರೆಯ ವಿಷಯದಲ್ಲಿ ತನ್ನ ಕ್ರೌರ್ಯದ ಪರಮಾವಧಿಯನ್ನು ತೋರಿಸುತ್ತಿದ್ದಳು "ಈ ಮಗು ಒಂದಿಲ್ಲದಿದ್ದರೆ ನಿನ್ನ ಕಾಲುಮುರಿಯುತ್ತಿದ್ದೆ" ಎಂದುಕೊಂಡೇ ಪಾತಕ್ಕ ಸೊಸೆಯ ಅಪರಾಧವನ್ನು ಮನ್ನಿಸುತ್ತಿದ್ದರು ತಮ್ಮ ಮನಸ್ತಾಪದ ಛಾಯೆ ಸುಮಿತ್ರೆಯಮೇಲೆ ಬೀಳದಿರಲೆಂಬುವೇ ಅವರ ಕಾಂಕ್ಷೆ

ಸ್ವರ್ಣ ತನ್ನ ಆಟಪಾಟಗಳಿಂದ ಮನೆಯನ್ನು ಬೆಳಗಿಸಿದ್ದಳು ನರಸಿಂಹಯ್ಯನೂ ಮಗುವಿನ ಸಳೆತದಿಂದ ಮನೆಯಲ್ಲಿ ಸ್ವಲ್ಪ ಹೆಚ್ಚುಸಮಯ ನಿಲ್ಲಲಾರಂಭಿಸಿದ ಸುಮಿತ್ರೆ ತನ್ನೆಲ್ಲಾ ಗೊಂದಲಗಳನ್ನೂ ಮಗುವಿನ ಮುಗ್ಧ ಆಟಗಳಲ್ಲಿ ಮರೆಯುತ್ತಿದ್ದಳು ದಿನವೂ ಸಂಜೆ ಸ್ವರ್ಣನನ್ನು ಕರೆದುಕೊಂಡು ಹೋಗಿಬರುವುದು ಅವಳ ಕಾರ್ಯಕ್ರಮವಾಯಿತು

ಎಂದಿನಂತೆ ಸುಮಿತ್ರೆಯ ಜತೆ ಹೋಗಿದ್ದ ಸ್ವರ್ಣ ಅಳುತ್ತಾ ಮನೆಗೆ ಬಂದಳು ರಾಜಮ್ಮ ಗಾಬರಿಯಿಂದ ಓಡಿಬಂದು ಮಗುವನ್ನು ಕರೆದುಕೊಂಡು ಸಮಾಧಾನಮಾಡಿದಳು ಸುಮಿತ್ರೆಗೆ ಗ್ರಹಚಾರ ಕಾದಿತ್ತು ಸ್ವರ್ಣನ ಮೈ ತರಚಿ ರಕ್ತಬಂದಿತ್ತು–ಅದಕ್ಕೆ ಮುಲಾಮು ಸವರಿ, "ಏನೇ? ಮಗುವನ್ನು ಏನು ಮಾಡಿದೆಯೇ?" ಎಂದು ಗದರಿಸಿದಳು

"ನಾನೇನೂ ಮಾಡಲಿಲ್ಲ ಚಿಕ್ಕಮ್ಮ – ಅದೇ ಬಿದ್ದು ಬಿಡ್ತು"

"ಎಲ್ಲಿಂದ ಬಿತ್ತು?"

"ಒಂದು ಹಸು ಹಾಯಲು ಬಂತು ಹೆದರಿ ನಾನು ಓಡಿದೆ–ದಾರಿಯಲ್ಲಿ ಎಡವಿ ಮುಗ್ಗರಿಸಿದೆ–ಮಗುವಿಗೂ ಪೆಟ್ಟಾಯಿತು"

"ಜ್ಞಾನಗೆಟ್ಟ ಮುಂಡೇವೆ" ಎಂದು ಬೈಯುತ್ತಾ ರಾಜಮ್ಮ ಸುಮಿತ್ರೆಯ ಮೈ ಮೂತಿ ನೋಡದೆ ಚೆನ್ನಾಗಿ ಥಳಿಸಿದಳು

ಪಾತಕ್ಕ ಹರಿಕಥೆಯಿಂದ ಹಿಂತಿರುಗುವವೇಳೆಗೆ ಸುಮಿತ್ರೆ ಒಂದು ಮೂಲೆಯಲ್ಲಿ ಅಳುತ್ತಾ ಕುಳಿತಿದ್ದಳು ಮೈಬಾಸುಂಡೆ ಬಂದಂತೆ ಊದಿತ್ತು

"ಏನಾಯಿತು ಸುಮಾ" ಎಂದು ಹತ್ತಿರ ಕುಳಿತು ಕೇಳಿದರು ಅಜ್ಜಿಯನ್ನು ಕಂಡಮೇಲೆ ಸುಮಿತ್ರೆಗೆ ದುಃಖ ಒತ್ತಿಬಂತು ಪಾತಕ್ಕನ ಮಡಲಿನಲ್ಲಿ ಮುಖವಿರಿಸಿ ಅತ್ತಳು

"ಯಾರು ಏನು ಮಾಡಿದರು—ಹೇಳು ಸುಮಿ"

"ಚಿಕ್ಕಮ್ಮ—ಚಿಕ್ಕಮ್ಮ ನನ್ನ ಹೊಡೆದಳು" ಬಿಕ್ಕುತ್ತಾ ಸುಮಿ ತಿಳಿಸಿದಳು

"ಯಾಕೆ?"

"ನಾನು ಮಗುವನ್ನು ಬೀಳಿಸಿದೆ—ಅದಕ್ಕೆ"

"ಅಷ್ಟಕ್ಕೆ ಹೀಗೆ ಹೊಡೆಯಬೇಕೇ—ಇವಳೇನು ಹೆಣ್ಣೋ—ರಾಕ್ಷಸಿಯೋ?" ಸೊಸೆಯನ್ನು ನಿಂದಿಸುತ್ತಾ ಪಾತಕ್ಕ ಸುಮಿತ್ರೆಯ ಗಾಯಕ್ಕೆ ಕೊಬ್ಬರಿ ಎಣ್ಣೆ ಹಚ್ಚಿ ಸಮಾಧಾನಪಡಿಸಿದರು. ಸುಮಿತ್ರೆ ಪಾತಕ್ಕನ ಅಪ್ಪಿತ ವಾತ್ಸಲ್ಯದಲ್ಲಿ ತನ್ನ ದುಃಖವನ್ನು ಮರೆತಳು. ಅತ್ತು ಸೋತಿದ್ದ ದೇಹ ಪಾತಕ್ಕನ ತೊಡೆಯಮೇಲೆ ವಿಶ್ರಮಿಸಿತು.

ಮೊಮ್ಮಗಳ ಸ್ಥಿತಿ ಕಂಡು ಪಾತಕ್ಕನ ದುಃಖ ಕಟ್ಟೆಯೊಡೆದು ಬಂತು—ಒಂದೊಂದೇ ಹನಿ ಅವರ ಕಣ್ಣಿಂದ ಜಾರುತ್ತಲಿತ್ತು.

ಭಾಗೀರತಮ್ಮನ ಅಭಿಪ್ರಾಯದಂತೆ ರಾಜಮ್ಮ ಗಂಡನನ್ನು ವಶ ಮಾಡಿಕೊಂಡಳು. ನರಸಿಂಹಯ್ಯನವರು ಸುಮಿತ್ರೆಗೆ ಉಪಚಾರ ಕದ್ದದ್ದಾಗಿರುತ್ತಿದ್ದಿತು. ಗಂಡ ಮರೆಯಾದಕೂಡಲೇ ರಾಜಮ್ಮ ಸಿಡಿಮಿಡಿಯಾಗುತ್ತಿದ್ದಳು.

ಸೊಸೆಯ ಹೀನ ನಡತೆ ಕಂಡು ಪಾತಕ್ಕ ಕೊರಗಲಾರಂಭಿಸಿದರು. ಚಿಂತೆ ದಿನೇದಿನೇ ಅವರನ್ನು ದಹಿಸಲಾರಂಭಿಸಿತು. ಸುಮಿತ್ರೆಯನ್ನು ಕೂರಿಸಿಕೊಂಡು,

"ನನಗಾಗಿ ನಾನು ಮರುಗುವುದಿಲ್ಲ ಕಂದಾ-ನಾನು ಹೋದಮೇಲೆ ನಿನ್ನನು ಕೇಳುವವರಾದರೂ ಯಾರೇ?" ಎಂದು ದುಃಖಿಸುತ್ತಿದ್ದರು.

ಅಜ್ಜಿ ಕಣ್ಣೀರು ಹಾಕುವುದು ಕಂಡು ಸುಮಿತ್ರೆಗೂ ದುಃಖ ಉಕ್ಕಿ ಬರುತ್ತಿದ್ದಿತು. ಪರಿಸ್ಥಿತಿ ಅವಳಿಗೆ ವಯಸ್ಸಿಗೆ ಮೀರಿದ ತಿಳುವಳಿಕೆಯನ್ನು ಕಲಿಸಿತ್ತು. ಚಿಕ್ಕಮ್ಮ ತನಗೊಂದು-ಸ್ವರ್ಣನಿಗೊಂದು ಮಾಡುತ್ತಿದ್ದುದು ಅವಳಿಗೆ ನೆನಪಾಯಿತು. ಮಾತುಮಾತಿಗೂ ತನ್ನನ್ನು ನಿಂದಿಸುತ್ತಿದ್ದುದನ್ನು ಜ್ಞಾಪಿಸಿಕೊಂಡಳು. ರಾಜಮ್ಮ ಮಾಡುತ್ತಿದ್ದ ವಂಚನೆಯಿಂದ ಸುಮಿತ್ರೆಗೆ 'ಇವಳು ನನ್ನ ಹೆತ್ತ ತಾಯಲ್ಲ' ಎನ್ನುವುದು ಸ್ಥಿರವಾಯಿತು.

'ತಾಯಿಯಂತೆ ಅಜ್ಜಿಯೂ ಒಂದುದಿನ ತನ್ನನ್ನಗಲಿದರೆ ಕೇಳುವವರು ಯಾರು ?- ತಾನು ಯಾರಬಳಿ ತನ್ನ ದುಃಖ ಹೇಳುವುದು' ಎಂದು ಯೋಚಿಸಿ ಭಯಪಟ್ಟನು

"ಅಜ್ಜಿ ಅಮ್ಮನ ಜತೆ ತಾನೂ ಹೋಗಿದ್ದರೆ ಚೆನ್ನಾಗಿತ್ತು "

'ಅಯ್ಯೋ, ಕಂದಾ-ಏನುಮಾತನಾಡುತ್ತೀ ?" ಎಂದು ಸುಮಿತ್ರೆಯು ಕುತ್ತಿಗೆಯನ್ನಪ್ಪಿ ಗೊಳೋ ಎಂದು ಅತ್ತು ಹೃದಯ ಹಗುರ ಮಾಡಿ ಕೊಂಡರು

ನಾನಿಯ ಉದ್ಧಟತನವನ್ನು ಪಾತಕ್ಕ ತಡೆಯಲಾರವೆ ಅನೇಕ ಸಲ ಸಹನೆಯನ್ನು ಕಳೆದುಕೊಳ್ಳುತ್ತಿದ್ದರು ಮಗನ ಕೈಲಿ ಹೇಳಿ, ಅವನ ಸಹಕಾರದಿಂದಲಾದರೂ ಈ ಸ್ವೈರ ಆಚರಣೆಯನ್ನು ತಡೆಗಟ್ಟಬೇಕೆಂದು ಬಯಸಿ ನಾನಿಯ ನಡವಳಿಕೆಗಳ ವರದಿಯನ್ನೊಪ್ಪಿಸುತ್ತಿದ್ದರು ತಾಯಿಯ ಮಾತನ್ನು ಕಿವಿಗೊಟ್ಟು ಕೇಳುತ್ತಿದ್ದ ನರಸಿಂಹಯ್ಯ,

'ಅಮ್ಮಾ ನೀನು ನನಗೆ ಮದುವೆ ಮಾಡಿಸಿದುದು ಯಾಕೆ ? ನಾನು ಸುಖಿಯಾಗಿರಬೇಕೆಂದೇ ಅಲ್ಲವೇ ?"

'ಹೌದಪ್ಪಾ'

"ಹಾಗಾದರೆ ಈಗ ನಮ್ಮಿಬ್ಬರಲ್ಲಿ ಮನಸ್ತಾಪ ತಂದುಹಾಕಲು ಏಕೆ ಪ್ರಯತ್ನಿಸುತ್ತೀ ?'

"ರಾಮ – ರಾಮ ಏನು ಮಾತೂಂತ ಆಡ್ತೀಯೋ ಮಗು? ಗಂಡ – ಹೆಂಡರಲ್ಲಿ ವ್ಯಾಜ್ಯ ತಂದು ಹಾಕಿ ನಾನು ಯಾವ ನರಕಕ್ಕೆ ಹೋಗಲಿ ? – ನೀವಿಬ್ಬರೂ ಚೆನ್ನಾಗಿರಲೀಂತ ತಾನೇ ನಾನೂ ಬಯಸು ವುದು – ಅವರ ಆ ಕಬ್ಬಲಿ ಮಗುವನ್ನು ಸರಿಯಾಗಿ ನೋಡಿಕೊಳ್ಳ ಬೇಡವೇ ?"

'ಈಗೇನು ಸುಮಿಗೆ ಕಷ್ಟಕೊಡುತ್ತಿರುವುದು ?"

"ಗಂಡಸು – ನಿನಗೆ ಮನೆಯಲ್ಲಿ ನಡೆಯುವುದು ಹೇಗೆ ತಿಳಿಯ ಬೇಕು ?– ಎಂದು ಪಾತಕ್ಕ ಸುಮ್ಮನಾದರು

ನರಸಿಂಹಯ್ಯ ಹೆಂಡತಿಯಿದ್ದೆಡೆ ಬಂದ ರಾಜಮ್ಮ ಸ್ವರ್ಣನಿಗೆ ಅಲಂಕಾರ ಮಾಡಿ, ತಾನೂ ಅಲಂಕರಿಸಿಕೊಂಡಿದ್ದಳು

"ಮುಗಿಯಿತೇ ?"

"ಎಲ್ಲಾ ಸರಿ ಆದರೆ ಬರಿಯ ಕತ್ತಲ್ಲಾಂದ್ರೆ"

"ಮುಂದಿನ ತಿಂಗಳಲ್ಲಿ ಖಂಡಿತಾ ಮಾಡಿಸುತ್ತೇನೆ – ಸುಮ್ಮನಿರು"

"ಸದ್ಯಕ್ಕೇನು ಮಾಡುವುದು ?"

ನರಸಿಂಹಯ್ಯ ಮಾತಾಡಲಿಲ್ಲ

ರಾಜಮ್ಮನೇ, "ಸುಮಿತ್ರೆಯದೇ ಹಾಕಿರೋಣ – ಫೋಟೋ ತೆಗೆಸಿದ ಮೇಲೆ ಕೊಟ್ಟರಾಯಿತು"

ಬೇಡವೆಂದರೆ ಹೆಂಡತಿ ಎಲ್ಲಿ ಮನಸ್ಸು ಚಿಕ್ಕದು ಮಾಡಿಕೊಳ್ಳ ಬಹುದೋ ಎಂದು ಶಂಕಿಸಿ, ಒಪ್ಪಿದ

ತಾಯಿಯನ್ನು ಕೇಳುವಾಗ ನರಸಿಂಹಯ್ಯನ ಮನಸ್ಸು ಮುದುಡಿತು

ಪಾತಕ್ಕ ಮರುಮಾತಾಡದೇ ಸರವನ್ನು ತೆಗೆದು ಮಗನ ಕೈಗೆ ಹಾಕಿದರು

ರಾಜಮ್ಮ ಸಂತೋಷದಿಂದ ಸ್ವರ್ಣನನ್ನೆತ್ತಿಕೊಂಡು ಹೊರಟಳು

ಸುಮಿತ್ರೆ ತಾನೂ ಹೋಗಬೇಕೆಂದು ಹಟಮಾಡುವ ವಯಸ್ಸು ಮೀರಿದ್ದಳು – ಯಜ್ಞಪಶುವಿನಂತೆ ನರಸಿಂಹಯ್ಯ ಹೆಂಡತಿಯನ್ನು ಹಿಂಬಾಲಿಸಿದ

"ನಿಮ್ಮಮ್ಮ ಬದುಕಿದ್ದರೆ ಈ ಸ್ಥಿತಿ ಬರುತ್ತಿತ್ತೇನೇ" ಎಂದು ಸುಮಿತ್ರೆಯನ್ನಪ್ಪಿ ಪಾತಕ್ಕ ಕಂಬನಿಗರೆದರು

"ಹೋಗಲಿ – ಸುಮ್ಮನಿರಜ್ಜಿ – ಎಲ್ಲಾ ನನ್ನ ಅದೃಷ್ಟ" ಸುಮಿತ್ರೆಯೇ ಸಮಾಧಾನ ಹೇಳಿದಳು "ಈ ವಯಸ್ಸಿಗೇ ಏನು ತಿಳುವಳಿಕೆಯೋ" ಎಂದು ಮೊಮ್ಮಗಳ ಮಾತಿಗೆ ಆಶ್ಚರ್ಯಪಟ್ಟರು ಸುಮಿತ್ರೆ ಅಜ್ಜಿ ಕಾಣದಂತೆ ಹೋಗಿ ಅತ್ತು ಮನಸ್ಸಿಗೆ ಸಮಾಧಾನ ತಂದುಕೊಂಡಳು

ಪಾತಕ್ಕನ ಮನಸ್ಸಿಗೆ ಹತ್ತಿದ್ದ ಕೊರಗು ಕ್ರಮೇಣ ದೇಹವನ್ನಾಳಲಾರಂಭಿಸಿತು ಆಗಿಂದಾಗ್ಗೆ ವಾಯು ಕೆರಳಿದೆ, ಜ್ವರ ಬಂದಿದೆ ಎಂದು ಹಾಸಿಗೆ ಹಿಡಿಯಲಾರಂಭಿಸಿದರು ಅವರು ಮಲಗಿದಂದು ಅಡಿಗೆ ಕೆಲಸವೆಲ್ಲಾ ರಾಜಮ್ಮನ ಮೇಲೇ ಬೀಳುತ್ತಿದ್ದಿತು. ಅಂದು ರಾಜಮ್ಮ 'ಮಹಾಕಾಳಿ'ಯಾಗುತ್ತಿದ್ದಳು ಸುಮಿತ್ರೆ ಸ್ಕೂಲು ತಪ್ಪಿಸಿಕೊಂಡು ಚಿಕ್ಕಮ್ಮನ

ಆಜೂಜೂವಾಂಗೆ ನಿಲ್ಲಬೇಕಾಗುತ್ತಿದ್ದಿತು ರಾಜಮ್ಮನ ಮಡಿ–ಮೈಲಿಗೆಯೂ ಪಾತಕ್ಕನಿಗೆ ಸರಿಬೀಳುತ್ತಿರಲಿಲ್ಲ ಒಂದು ತೊಟ್ಟು ಜಲಪಾನವನ್ನೂ ಮಾಡದೆ ಅವರು ಮಲಗುವುದನ್ನು ಕಂಡು ನರಸಿಂಹಯ್ಯನಿಗೆ ಯೋಚನೆ ಯಾಗುತ್ತಿದ್ದಿತು

"ಯಾಕಮ್ಮ – ಹೀಗೆ ಮಾಡ್ತೀ – ಸೇರಿದಷ್ಟು ಗಂಜಿಯೋ ಹಾಲೋ ತೆಗೆದುಕೊಳ್ಳ ಬಾರದೇ ?"

"ದೇವರ ನೈವೇದ್ಯಕ್ಕಿಟ್ಟಿದ್ದ ಹಾಲು ಕುಡಿದಿರುವೆ – ಬೇಕಾದಷ್ಟಾ ಯಿತು" ಎಂದು ಉತ್ತರ ಹೇಳಿಬಿಡುತ್ತಿದ್ದರು

ಸ್ವಲ್ಪ ಹುಷಾರಾದರ ಸಾಕು – ಪುನಃ ಗಾಣದೆತ್ತಿನಂತೆ ದುಡಿಯಲು ಪ್ರಾರಂಭಿಸುತ್ತಿದ್ದರು ತಾಯಿ ಕೆಲಸ ಮಾಡುವುದನ್ನು ಕಂಡು ನರಸಿಂಹಯ್ಯ

"ಇವತ್ತೊಂದು ದಿನ ನೀನು ಮಾಡಬಾರದಾಗಿತ್ತೇ" ಎಂದರೆ ರಾಜಮ್ಮ ಸಿಡಾರನೆ, "ನಾನು ಮಾಡಿದ್ದು ಅವರ ಗಂಟಲಲ್ಲಿಳಿಯುವು ದಿಲ್ಲಾಂತ ಕಾಣುತ್ತೆ – ಬೇಡಾ – ಬೇಡಾಂತ ಅಟ್ಟಿ ಕಳುಹಿಸುತ್ತಾರೆ – ನೀವಿಲ್ಲಿ ಬೈಯುತ್ತೀರಿ"

ಸೊಸಯ ಆಟಕ್ಕೆ ಪಾತಕ್ಕ ಮಣಿಯುತ್ತಿರಲಿಲ್ಲ "ಇರುವಷ್ಟು ದಿನವೂ ಕೈಮೇಲಾಗಿ ಬಾಳಿದೆ ಈಗ ಇವಳ ಅಧೀನಕ್ಕೆ ಸಿಕ್ಕಲೇ ? – ರಟ್ಟೆ ಗಟ್ಟಿಯಾಗಿರುವಷ್ಟು ದಿನವೂ ದುಡಿದು ತಿನ್ನುತ್ತೇನೆ – ಆ ಕಾಲ ಬಂದಾಗ ನೋಡೋಣ" ಎಂದು ನರಸಿಂಹಯ್ಯನ ಬಾಯಿಮುಚ್ಚುತ್ತಿದ್ದರು

ರಾಜಮ್ಮ ಮಗು ಕೈ ಬಿಡುವುದಿಲ್ಲ ಎಂದು ಮೈಲಿಗೆ ಮುಟ್ಟಿಕೊಳ್ಳು ತ್ತಿದ್ದಳು

ತಮ್ಮ ಹಿಂದೆ ಹಿಂದೆ ಸುತ್ತಾಡುತ್ತಿರುವ ಮೊಮ್ಮಗಳನ್ನು ಕಂಡು ಪಾತಕ್ಕ,

"ಇದೇನು ಸುಮಾ – ಬಹಳ ಅನುಸರಿಸ್ತಾ ಇದೀಯಾ ?"

"ನನಗೆ ಪಾಸಾದದ್ದಕ್ಕೆ ಸರಸ್ವತೀಪೂಜೆ ಮಾಡ್ತೀನಿ ಅಜ್ಜಿ"

"ಅಯ್ಯೋ – ಇಷ್ಟೇನೇ ?" ಎಂದು ಪಾತಕ್ಕ ಒಪ್ಪಿಗೆ ಇತ್ತರು

ಶುಕ್ರವಾರ ಸಂಜೆ ಪೂಜೆಯ ಕಾರ್ಯಕ್ರಮ ಏರ್ಪಡಿಸಲಾಯಿತು

ಪಾತಕ್ಕ ಕೋಸುಂಬರಿ, ಕಡಲೆಹಿಟ್ಟು ಸಿದ್ಧಮಾಡಿದರು ಸುಮಿತ್ರೆ ತನ್ನ ಹೊಸ ಲಂಗದಿಂದ ಅಲಂಕರಿಸಿಕೊಂಡಳು

"ಹೋಗಿ ಸ್ನೇಹಿತೆಯರನ್ನು ಕರೆದು ಬಾ ರಾಜು ಕಂಬಕ್ಕೆ ಎಣ್ಣೆ ಬತ್ತಿ ಹಾಕಿಡುತ್ತಾಳೆ"

"ಸ್ವರ್ಣನ್ನ ಕರೆದುಕೊಂಡು ಹೋಗ್ತೀನಿ ಚಿಕ್ಕಮ್ಮ"

"ಏನೂ ಬೇಡ - ನೀನೊಬ್ಬಳೇ ಹೋಗು"

ಸುಮಿತ್ರೆ ಕದಲಲಿಲ್ಲ ಪಾತಕ್ಕ, "ಹೋಗು ಕತ್ತಲೆಯಾದ ಮೇಲೆ ಎಂಥಾ ಪೂಜಮಾಡಾಟ?" ಎಂದು ಹೊರಡಿಸಲೆತ್ನಿಸಿದರು

"ಅಜ್ಜೀ ಅಜ್ಜೀ "

"ಏನು?" ಪಾತಕ್ಕ ಮೆಲ್ಲನೆ ಕೇಳಿದರು

"ಸರ ಕೊಡಿಸು ಅಜ್ಜಿ - ಹಾಕ್ಕೊಂಡು ಹೋಗ್ತೀನೆ"

ಸುಮಿತ್ರೆಯ ಕೋರಿಕೆ ರಾಜಮ್ಮನ ಕಿವಿಗೆ ಬಿತ್ತು ಈಗ ಕೊಟ್ಟರೆ ಪುನಃ ತನಗೆ ದಕ್ಕಲಾರದೆಂದು ನಿರ್ಧರಿಸಿ ನುಡಿದಳು

"ಮೊದಲೇ ಕಳ್ಳರ ಭಯ - ಸರವೂ ಬೇಡ ಏನೂ ಬೇಡ - ಹೋಗು"

ಸೊಸೆಗೆ ವ್ಯತಿರಿಕ್ತವಾಗಿ ನಡೆದರೆ ಪೂಜೆಯ ಬದಲು ಯುದ್ಧ ಆರಂಭವಾಗುವುದೆಂದು ಪಾತಕ್ಕ ತಿಳಿದರು

"ಹಬ್ಬದ ದಿನ ಹಾಕಿಕೊಂಡರಾಯ್ತು - ಹೋಗು ಸುಮಿ"

ಸುಮಿತ್ರೆ ಹತಾಶಳಾಗಿ ಮೆಲ್ಲನೆ ಅಡಿಯಿಟ್ಟಳು

"ನಿನ್ನ ಯಾವ ಆಶೆಯನ್ನೂ ಈ ಜನ್ಮದಲ್ಲಿ ಈಡೇರಿಸಲಾರೆ - ಹೋಗು - ನನ್ನ ಕಂದಾ" ಎಂದು ಪಾತಕ್ಕ ಅಸಹಾಯಕರಂತೆ ತಮಗೇ ಹೇಳಿಕೊಂಡರು

ಪೂಜೆ ಹೇಗೋ ಮುಗಿಯಿತು

ಹಬ್ಬದ ಮೇಲೆ ಹಬ್ಬಗಳು ಬಂದು ಹೋದರೂ ಸುಮಿತ್ರೆಯ ಸರ ವಾಪಸು ಬರಲಿಲ್ಲ

"ಹೋದರೆ ಹೋಗಲಿ - ಸುಮಿತ್ರೆಯನ್ನಾದರೂ ಸರಿಯಾಗಿ ಬಾಳಿಸಿದರೆ ಸಾಕು" ಎಂದು ಪಾತಕ್ಕ ಸಮಾಧಾನತಂದುಕೊಂಡರು

ಸುಮಿತ್ರೆಗೆ ತೇರ್ಗಡೆಯಾದುದು ಮನೆಯಲ್ಲಿ ಎಲ್ಲರಿಗೂ ಸಂತಸದ

ಸುದ್ದಿಯಾಯಿತು ರಾಜಮ್ಮ ಮಾತ್ರ, "ಮುಂದಕ್ಕೆ ಓದುತ್ತಾಳಂತೆ – ಅದೊಂದು ಕುಹೆತಕ್ಕೆ ನಾನು ಗಜ್ಜ ಕಟ್ಟಿಕೊಳ್ಳಬೇಕು" ಎಂದು ಭಾಗೀರತಮ್ಮನ ಹತ್ತಿರ ತನ್ನ ಮನಬಿಚ್ಚಿದಳು

"ಏನು ಓದಾಟವೋ – ಮನೆತನಸ್ಥರ ಮನೆ ಹುಡುಗಿಯರಿಗೆ ಓದು ಯಾಕ ಬೇಕ್ರೀ ರಾಜಮ್ಮ? - ಈಗ ನಾವೆಲ್ಲಾ ಸಂಸಾರ ಮಾಡಿಕೊಂಡು, ಕಷ್ಟವೋ ಸುಖವೋ ನಿಭಾಯಿಸಿಕೊಂಡು ಹೋಗುತ್ತಿಲ್ಲವೇ?"

"ಆ ಮುದುಕಿಯದೂ ಹಟವಾಗಿದೆ ಭಾಗೀರತಮ್ಮ"

"ಹೋಗಲಿಬಿಡಿ – ಕಟ್ಟಿಮೇಲ ಅವರಿಗೇ ಬುದ್ಧಿ ಬರುತ್ತೆ"

"ಇನ್ನು ಇವಳ ಪುಸ್ತಕ – ಬಟ್ಟೆಬರೆ ಇವಕ್ಕೆಲ್ಲಾ ದುಡ್ಡು ಹೊಂದಿಸೋದು ಹೇಗ್ರೀ? ಇವಳಿಗೇ ಮಾತ್ತಾಬಂತ್ರ ನಾಳೆ ಸ್ವರ್ಣನ ಕೈಗೆ ಚಿಪ್ಪುಕೊಡಬೇಕು ಅಷ್ಟೆ"

"ಸ್ವಲ್ಪ ಕೈಹಿಡಿತವಾಗ್ರೀ – ತಾನೇ ಮನೇಲಿ ಕೂತುಕೊಳ್ತಾಳೆ – ನಿಮ್ಮ ಮೇಲೂ ಅಪವಾದಬರುವುದಿಲ್ಲ – ಈಗಿನ ಹುಡುಗರು ವಿದ್ಯೆ ಕಲಿಯಲು ಸ್ಕೂಲಿಗೆ ಹೋಗುವುದಿಲ್ಲ ರಾಜಮ್ಮ – ಸೂಳೆಯರ ಹಾಗೆ ಮೆರೆಯಲು ಹೋಗುತ್ತಾರೆ"

"ಅದೇ ಸರಿ"

"ಈಗ ನಿಮ್ಮಜಮಾನ್ರಿಗೆ ಬಹಳ ಬುದ್ಧಿ ಬಂದುಬಿಟ್ಟಿದೆಯಲ್ರೀ?"

'ಹೂಮ್ಮ – ಅವರಿಗೇ ನನ್ನ ಸ್ಥಿತಿ ಕಂಡು ಮನಸ್ಸು ಕರಗಿರಬೇಕು – ಮುಂಚಿನಂತೆ ಅವಳ ಮನೆಗೂ ಹೋಗುವುದಿಲ್ಲ"

"ಭ್ರಾಂತು - ಆ ಸಂಬಂಧ ಎಲ್ಲಿ ತಪ್ಪುತ್ತೇ? - ಬೇಗ ಬಂದುಬಿಡ್ತಾರೇಂತ ಹೇಳಿ - ನಂಬುತ್ತೇನೆ?"

"ನಿಮಗೆ ಹೇಗೆ ಗೊತ್ತು ಭಾಗೀರತಮ್ಮ?"

"ನಾನು ಸರಿಯಾಗಿ ತಿಳಿಯದೇ ಒಂದು ವಿಷಯವನ್ನೂ ಆಡುವುದಿಲ್ಲ ರಾಜಮ್ಮ - ನನ್ನ ದೊಡ್ಡಣ್ಣನ ಮನೆ ಮಂಜುಳೆ ಮನೆ ಹತ್ತಿರ ಇದೆಯೆಂದು ಹೇಳಿದ್ದೆ - ನೆನಪಿದೆಯೇ?"

"ಹೂ - ಅವತ್ತು ಅವರ ಮಗುವಿನ ನಾಮಕರಣಕ್ಕೇಂತ ಬೆಳಿಗ್ಗೆ ಹೋಗಿ ರಾತ್ರಿ ಬಂದಿರಲ್ಲಾ."

"ಸರಿಯಾಗಿ ಹೇಳಿದಿರಿ - ಆ ದಿನ ನಿಮ್ಮ ಯಜಮಾನ್ರು ಸುದ್ದಿ ಬಂತು ನಮ್ಮಣ್ಣನಿಗೆ ನಿಮ್ಮವರು ಗೊತ್ತಂತೆ - ದಿನವೂ ಬರುತ್ತಾರ ಅಂತ ಹೇಳಿದರು "

"ನೋಡಿದಿರಾ ? ಆ ದಿನ ಪ್ರಮಾಣ ಮಾಡಿದರಲ್ಲಾ "

"ಅಯ್ಯೋ - ನಾನು ಮೊದಲೆ ಹೇಳಿರಲಿಲ್ಲವೇನ್ರೀ - ಗಂಡಸರನ್ನ ನಂಬಬಾರದೂಂತ - ನಿಮಗೂ ಬುದ್ಧಿ ಇಲ್ಲ "

"ನಾನೇನು ಮಾಡಲೀ ಭಾಗೀರತಮ್ಮಾ - ನನಗಂತೂ ಬುದ್ಧೀನೇ ಓಡೋಲ್ಲ " ಎಂದು ತಲೆಯ ಮೇಲೆ ಕೈಹೊತ್ತು ಕುಳಿತಳು

"ತಿಳಿಯದವರಂತೆ ಇದ್ದು ಬಿಡಿ "

"ಒಳಗೆ ಇವರು - ಹೊರಗೆ ಅವಳು ದೊಗರಲಾರಂಭಿಸಿದರೆ ನನ್ನ ಗತಿಯೇನ್ರೀ ? ನಾನೂ ನನ್ನ ಮಗು ಎಲ್ಲಿಗೆ ಹೋಗಬೇಕು ಭಾಗೀರತಮ್ಮಾ – ಸಾಲದ್ದಕ್ಕೆ ನಾನು ಪುನಃ "

"ಏನ್ರೀ ?"

"ಹೌದು ಭಾಗೀರತಮ್ಮ ಎರಡು ತಿಂಗಳಾಗಿರಬಹುದು "

"ಕೈ ಹಿಡಿತಪಲ್ಲಿಡಿ ರಾಜಮ್ಮ - ನಾಳೆ ನಿಮ್ಮ ಸಮಯಕ್ಕೆ ಯಾರೂ ಆಗುವುದಿಲ್ಲ" ಎಂದು ಭಾಗೀರತಮ್ಮ ಬುದ್ಧಿ ಹೇಳಿ ಕಳುಹಿಸಿದಳು

ಸುಮಿತ್ರೆಯನ್ನು ಮುಂದಕ್ಕೆ ಓದಿಸುವ ವಿಷಯದಲ್ಲಿ ರಾಜಮ್ಮನ ಮಾತಿಗೆ ಯಾರೂ ಕಿವಿಕೊಡಲಿಲ್ಲ ಸುಮಿತ್ರೆಯ ಅಭೀಷ್ಟವನ್ನು ಪೂರೈಸುವುದಕ್ಕಿಂತಾ ನರಸಿಂಹಯ್ಯ ಮಂಜುಳೆಯ ಮಾತು ನಡೆಸಬೇಕಾಗಿದ್ದಿತು ಮೂರು ದಿನ ಸತತವಾಗಿ ನರಸಿಂಹಯ್ಯನೊಡನೆ ಜಗಳವಾಡಿ ತನ್ನ ಹಟ ಸಾಧಿಸಿಕೊಂಡಳು ಸುಮಿತ್ರೆಯ ಪರವಾಗಿ ಅವಳು ನಡೆಸಿದ ವಕಾಲತ್ತನ್ನು ಕಂಡು,

"ಸುಮಿತ್ರೆ ನಿನ್ನ ಮಗಳೇ ಅನ್ನುವಂತೆ ಅವಳ ಹಿತಚಿಂತನೆಮಾಡ್ತೀಯಲ್ಲಾ" ಎಂದು ಹಾಸ್ಯಮಾಡಿದ

"ಒಂದು ವಿಧದಲ್ಲಿ ನೋಡಿದರೆ ನನಗೂ ಮಗಳೇ ಅಲ್ಲವೇ ?" ಎಂದು ಪ್ರತಿಯಾಗಿ ನಕ್ಕಳು.

ಸುಮಿತ್ರೆ ಮಂಜುಳೆಯ ವಿದ್ಯಾರ್ಥಿನಿಯಾದಳು.

# ೧೮

"ಸುಮಿತ್ರಾ, ಎಸ್"

"ಪ್ರೆಸೆಂಟ್ ಮೇಡಮ್"

ಧ್ವನಿ ಕೇಳಿ ಮಂಜುಳೆ ತಲೆಯೆತ್ತಿದಳು ಲಕ್ಷಣವಾದ ಹುಡುಗಿ - ಆಡಂಬರರಹಿತವಾದ ಉಡುಪಿನಿಂದ ಅಲಂಕೃತಳಾಗಿದ್ದಳು ಆ ಸೌಂದರ್ಯ ದಲ್ಲಿ ಹುರುಡಿರಲಿಲ್ಲ - ದೈನ್ಯತೆ ತುಂಬಿ ತುಳುಕಾಡುತ್ತಿದ್ದುದನ್ನು ಮಂಜುಳೆ ಗಮನಿಸಿ ಪ್ರಯತ್ನಪೂರ್ವಕವಾಗಿ ತನ್ನ ಗಮನವನ್ನು ಹಾಜರಿ ಹಾಕುವ ಕೆಲಸದಲ್ಲಿ ಹರಿಸಿದಳು

ಸುಮಿತ್ರೆಯ ಮೇಲೆ ಹೆಚ್ಚು ವಿಶ್ವಾಸ ತೋರಿಸುತ್ತಿದ್ದ ತಮ್ಮ ತರಗತಿಯ ಉಪಾಧ್ಯಾಯಿನಿಯನ್ನು ಕಂಡು ಇತರ ಹುಡುಗಿಯರು ಆಶ್ಚರ್ಯ ಪಟ್ಟರು

ಎಂದಿನಂತೆ ತರಗತಿಯಲ್ಲಿ ಹುಡುಗಿಯರು ನಿಶ್ಶಬ್ದರಾಗಿ ಕುಳಿತಿದ್ದರು ಮಂಜುಳೆ ಅವರ ಉತ್ತರದ ಪುಸ್ತಕಗಳನ್ನು ವಾಪಸು ಮಾಡುತ್ತಿದ್ದಳು ಸುಮಿತ್ರೆಯ ಸರದಿ ಬಂತು. ಹೆಚ್ಚಿನ ಅಂಕಗಳನ್ನೇ ಅವಳು ಪಡೆದಿದ್ದುದು ಮಂಜುಳೆಗೆ ಸಂತಸವನ್ನುಂಟುಮಾಡಿತ್ತಾದರೂ, ಅವಳ ಪುಸ್ತಕದೆಡೆ ಗಮನ ವಿಟ್ಟಳು ಅದನ್ನು ಹಿಡಿದು ತೋರಿಸುತ್ತಾ,

"ಸರಿಯಾದ ಒಂದು ಪುಸ್ತಕವಿಡಬಾರದೇ ಸುಮಿತ್ರಾ - ಇದೇನು ಪುಸ್ತಕವೋ ಹಾಳೆಯ ಚೂರೋ ನೀನೇ ಹೇಳು ?"

ನಾಲ್ಕಾರು ಹಾಳೆ ಕೂಡಿಸಿ ಸುಮಿತ್ರೆ ಪುಸ್ತಕ ಮಾಡಿದ್ದಳು ಅದನ್ನು ಕಂಡು ಇತರ ಹುಡುಗಿಯರು ಮುಸಿಮುಸಿ ನಕ್ಕರು ಸುಮಿತ್ರೆಗೆ

ದೇಹಾದ್ಯಂತ ನಡುಕ ಹುಟ್ಟಿತು - ಕಣ್ಣಲ್ಲಿ ನೀರೂರಿತು - ಮರುಮಾತಾಡದೆ ತನ್ನ ಹಾಳೆಯನ್ನು ಪಡೆದು ಮನದಲ್ಲೇ ಮಂಜುಳೆಯನ್ನು ಶಪಿಸುತ್ತಾ ಸ್ವಸ್ಥಾನ ಸೇರಿದಳು

ಮಂಜುಳೆ ಅಲ್ಲಿಗೇ ಪ್ರಕರಣವನ್ನು ಮುಗಿಸಲಿಲ್ಲ "ವಿರಾಮ ಕಾಲದಲ್ಲಿ ನನ್ನನ್ನು ಬಂದು ಕಾಣಬೇಕು" ಎಂದು ಸುಮಿತ್ರೆಗೆ ಆಜ್ಞೆ ವಿಧಿಸಿದಳು

ಇನ್ನೂ ಎಷ್ಟು ಅವಮಾನ ಅನುಭವಿಸಬೇಕೋ ಎಂದು ಸುಮಿತ್ರೆಗೆ ದುಃಖವಾಯಿತು ಮಂಜುಳೆಯ ಮಾತು ಮೀರುವಂತೆಯೂ ಇರಲಿಲ್ಲ

ಮಂಜುಳಾ ಸುಮಿತ್ರೆಗೆ ಕಾಫಿ ತರಿಸಿಕೊಟ್ಟು ಆದರದಿಂದ ಬರಮಾಡಿ ಕೊಂಡಳು ಸುಮಿತ್ರೆಗೆ ಪರಮಾಶ್ಚರ್ಯವಾಯಿತು ಇದೇನು ಕನಸೋ - ನನಸೋ ಎಂದು ಭ್ರಾಂತಳಾದಳು - ಮಂದಹಾಸ ಬೀರುತ್ತಾ ಕುಳಿತಿದ್ದ ಮಂಜುಳೆ,

"ನನ್ನ ಮೇಲೆ ಕೋಪ ಬಂತೇ ಸುಮಿತ್ರಾ"

"ಇಲ್ಲ - ಮೇಡಮ್"

"ನಿನಗೆ ಮನೆಯಲ್ಲಿ ಸರಿಯಾದ ಪುಸ್ತಕಗಳನ್ನು ತರಿಸಿಕೊಡುವುದಿಲ್ಲವೇ ?"

"ಇಲ್ಲ - ಮೇಡಮ್"

"ಯಾಕೆ ?"

'ಹೇಳಲೋ - ಬೇಡವೋ' ಎಂದು ಸುಮಿತ್ರೆ ಅನುಮಾನಪಡಹತ್ತಿದಳು ಅವಳ ತೊಳಲಿಕೆಯನ್ನು ಗ್ರಹಿಸಿ ಮಂಜುಳೆ ಆಶ್ವಾಸನವಿತ್ತಳು

"ನನ್ನಲ್ಲಿ ಹೇಳು - ಸುಮಿ - ಭಯಪಡಬೇಡ"

ಮಂಜುಳೆ 'ಸುಮಿ' ಎಂದು ಸಂಬೋಧಿಸಿದುದು ಸುಮಿತ್ರೆಯ ಹೃದಯದಲ್ಲಿ ಪ್ರತಿಧ್ವನಿಸಿತು

"ನನ್ನ ಚಿಕ್ಕಮ್ಮ ಅದಕ್ಕೆಲ್ಲಾ ದುಡ್ಡು ಕೇಳಿದರೆ ಬೈತಾರೆ - ಮೇಡಂ"

"ನಿಮ್ಮ ತಂದೆಯೂ ಕೇಳುವುದಿಲ್ಲವೇ ?"

"ಅಣ್ಣನಿಗೆ ಹೇಳಿದರೆ 'ಚಾಡಿ ಹೇಳ್ತೀಯಾ ?' ಅಂತ ಚಿಕ್ಕಮ್ಮ ಹೊಡೆಯುತ್ತಾಳೆ" ಇಷ್ಟು ಹೇಳಿ ಮುಗಿಸುವ ಹೊತ್ತಿಗೆ ಸುಮಿತ್ರೆಯ ಗಂಟಲುಬ್ಬಿ ಬಂತು.

"ಸಂಜೆ ನನ್ನ ಜೊತೆ ಬಾ" ಎಂದು ಸುಮಿತ್ರೆಯು ವೈದಡವಿ ಕಳುಹಿಸಿದಳು

ಮಂಜುಳೆಯ ಮೃದು ಹೃದಯ ಕಂಡು ಸುಮಿತ್ರೆ ಮೂಕಳಾದಳು ಮಂಜುಳೆಯು ಪ್ರೀತಿಯಿಂದಾಡಿದ ಮಾತುಗಳು ಸುಮಿತ್ರೆಗೆ ಹೊಸ ಚೇತನವನ್ನುಂಟುಮಾಡಿತ್ತು

ತನಗೆ ತಾನೇ ಹಲವು ಬಾರಿ, 'ಎಷ್ಟು ಒಳ್ಳೆಯವರು–ನಮ್ಮ ಮೇಡಂ' ಎಂದುಕೊಂಡಳು ಮಧ್ಯಾಹ್ನ ಸುಮಿತ್ರೆಯನ್ನು ಕಂಡ ಇತರ ಹುಡುಗಿಯರು ಅವಳ ಮುಖದ ಮೇಲೆ ಮಿನುಗುತ್ತಿದ್ದ ಮುಗುಳ್ನಗೆಯನ್ನು ಕಂಡು ಕುತೂಹಲದಿಂದ,

'ಮೇಡಂ ಏನು ಕೊಟ್ಟರೇ ?" ಎಂದು ಪೀಡಿಸಿದರು

ಸುಮಿತ್ರೆಯ ಪಾಲಿಗೆ ಮಧ್ಯಾಹ್ನದ ಆ ಮೂರು ಗಂಟೆಗಳೂ ಮೂರು ಯುಗಗಳಂತೆ ಭಾಸವಾಯಿತು

ಗಂಟೆ ಹೊಡೆಯುವುದೇ ತಡ ಸುಮಿತ್ರೆ ಓಡಿಬಂದು ಮಂಜುಳೆಯನ್ನು ಸೇರಿದಳು ದಾರಿಯಲ್ಲಿ ಮಂಜುಳೆ ಮನೆ ತಲಪುವವರೆಗೂ ಯಾವ ಮಾತನ್ನೂ ಆಡಲಿಲ್ಲ ಮಂಜುಳೆಯ ಮೌನ ಕಂಡು ಭಯ, ಆಶ್ಚರ್ಯಗಳಿಂದ ಮೂಕಳಂತೇ ಹಿಂಬಾಲಿಸುತ್ತಿದ್ದ ಸುಮಿತ್ರೆ, ಬಾಗಿಲ ಬಳಿಯೇ ನಿಂತಳು

"ಒಳಗೆ ಬಾ ಸುಮಿ"

ಸುಮಿತ್ರೆ ಸುತ್ತ ಮುತ್ತ ನೋಡಿ ಒಂದೊಂದೇ ಅಡಿಯಿಟ್ಟಳು ಸುಮಿತ್ರೆಯನ್ನು ಕುಳ್ಳಿರಿಸಿ ಮಂಜುಳೆ ಒಳಗೆ ಹೋದಳು ಮಂಜುಳೆ ಕಾಫಿ - ತಿಂಡಿ ತಂದಿಟ್ಟುದನ್ನು ಕಂಡು ಸುಮಿತ್ರೆಗೆ ಆಶ್ಚರ್ಯವಾಯಿತು ಅವಳ ಅನುಮಾನ ಕಂಡು ನಗುತ್ತಾ, "ತಗೋ ಸುಮಿ–ನಾನೂ ಬೇಕಾದರೆ ನಿನ್ನ ಜತೆಯೇ ತಿನ್ನುತ್ತೇನೆ" ಎಂದು ತನ್ನ ಪಾಲನ್ನೂ ತಂದು ತಿನ್ನಲಾರಂಭಿಸಿದಳು – ಸುಮಿತ್ರೆಯೂ ತನ್ನ ತಟ್ಟೆಗೆ ಕೈಹಚ್ಚಿದಳು

ಸುಮಿತ್ರೆಗೆ ಮುಂದೇನು ಮಾಡಬೇಕೆಂದು ತೋರಲಿಲ್ಲ ಮಂಜುಳೆ ಒಳಗಿನಿಂದ ಒಂದು ಕಟ್ಟು ತಂದು,

"ಇದು ನಿನಗೇ – ಸುಮಿ ನಿನಗೇನು ಬೇಕಾದರೂ ಸಂಕೋಚ ಪಡದೆ ನನ್ನಲ್ಲಿ ತಿಳಿಸಬೇಕು – ತಿಳಿಯಿತೇ ?"

"ಆಗಲಿ ಮೇಡಂ"

ಸುಮಿತ್ರೆ ಪುಸ್ತಕದ ಕಟ್ಟನ್ನು ತನ್ನ ಪುಸ್ತಕದ ಜತೆ ಜೋಡಿಸಿ ಕೊಂಡು

"ಬರಲೇ ಮೇಡಂ"

"ಹೂಂ ಆಗಾಗ್ಗೆ ಬರುತ್ತಿರು"

"ಖಂಡಿತಾ ಬರುತ್ತೇನೆ ಮೇಡಂ"

ಮಂಜುಳೆಯ ಸೌಹಾರ್ದ ಸುಮಿತ್ರೆಯನ್ನು ಸೆರೆಹಿಡಿಯಿತು ಮನೆಗೆ ಬಂದೊಡನೇ ಅಜ್ಜಿಗೆ ತಿಳಿಸಬೇಕೆಂದು ಧಾವಿಸಿದಳು – ಪಾತಕ್ಕ ಕಾಣಿಸಲಿಲ್ಲ – ಅವರ ಬದಲು ರಾಜಮ್ಮನ ಉಗ್ರಸ್ವರೂಪ ಪ್ರತ್ಯಕ್ಷ ವಾಯಿತು

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆಯೇ ?"

" "

"ಬೊಗಳೇ – ಬ್ರಹ್ಮೇತಿ – ಸ್ಕೂಲಿಂದ ಸೀದಾ ಬರದೆ ಎಲ್ಲಿ ಅಲೀತಾ ಇದ್ಯೇ ?"

" "

ಸುಮಿತ್ರೆ ನಿರುತ್ತರಳಾದುದನ್ನು ಕಂಡು ರಾಜಮ್ಮ ಮತ್ತೂ ಕೋಪಿಷ್ಟಳಾದಳು

"ಒಳ್ಳೆಯ ಮಾತಿನಲ್ಲಿ ಹೇಳಿದರೆ ನಿನಗೆ ಬುದ್ಧಿ ಬ್ರರುವುದಿಲ್ಲ – ತಡೀ" ಎಂದು ಕೋಲು ತಂದು ಸುಮಿತ್ರೆಯನ್ನು ಹೊಡೆಯಲು ಸಿದ್ಧಳಾದಳು

ಸುಮಿತ್ರೆ ನಡುಗುತ್ತಾ "ಬೇಡ ಚಿಕ್ಕಮ್ಮಾ – ಹೊಡೆಯಬೇಡ – ನಿನ್ನ ದಮ್ಮಯ್ಯ – ಹೇಳ್ತೀನೆ" ಎಂದು ಅಳಹತ್ತಿದಳು

"ಹೊಡೆಯುವ ಮುಂಚೆಯೇ ಆರ್ಭಟ ಮಾಡ್ತೀಯಾ" ಎಂದು ರಪ ರಪನೆ ಬಡಿಯಲಾರಂಭಿಸಿದಳು

ಸುಮಿತ್ರೆಯ ಕೈಯಿಂದ ಪುಸ್ತಕಗಳು ಜಾರಿಬಿದ್ದವು ಹೊಸದಾದ ಕಟ್ಟನ್ನು ಕಂಡು ರಾಜಮ್ಮ ಹೊಡೆಯುವುದನ್ನು ನಿಲ್ಲಿಸಿ ಪರೀಕ್ಷಿಸಿದಳು –

ಆರು ಸ್ಟೂಡೆಂಟ್ ನೋಟು ಬುಕ್ಕುಗಳು – ಎಲ್ಲವೂ ಹೊಸದು

"ಇದಕ್ಕೆಲ್ಲಾ ಕಾಸೆಲ್ಲಿತ್ತೇ ? – ಕದೀತೀಯಾ ?" ಪುನಃ ಎರಡೇಟು ಬಿಗಿದಳು

"ನನ್ನಾಣೆ – ಕದಿಯಲಿಲ್ಲ ಚಿಕ್ಕಮ್ಮ–"

"ಇನ್ನೆಲ್ಲಿಂದ ಬಂತೇ"

"ನಮ್ಮ ಮೇಡಂ ಕೊಟ್ಟರು – ಹೊಡೀಬೇಡ ಚಿಕ್ಕಮ್ಮ – ಕಾಲಿಗೆ ಬೀಳ್ತೀನಿ"

"ಈ ಆಟ ಎಲ್ಲಾ ನಿಲ್ಲಿಸು – ಯಾರವಳು ? – ನಿಮ್ಮ ಮೇಡಂ - ಬೊಗಳು"

ಹೇಳದಿದ್ದರೆ ಚಿಕ್ಕಮ್ಮನ ಕೈಯಿಂದ ಪಾರಾಗುವುದು ಸಾಧ್ಯವಿಲ್ಲನೆಂದು ಸುಮಿತ್ರ ನಿಜ ಹೇಳಿದಳು

"ಮಂಜುಳಾಂತ ಇದಾರೆ - ಅವರು ಕೊಟ್ಟರು"

"ಏನು ?"

"ನಿಜ - ಚಿಕ್ಕಮ್ಮ - ಅವರೇ ಕೊಟ್ಟರು"

ರಾಜಮ್ಮನ ಕೈಯಿಂದ ಕೋಲು ಜಾರಿತು - ಪುನಃ ಕೋಲು ಹಿಡಿದುದನ್ನು ಕಂಡು ಸುಮಿತ್ರ ತನಗೆ ವಿಮೋಚನೆಯೇ ಇಲ್ಲವೆಂದು ನಡುಗಿದಳು

ತನ್ನ ಮನಃಪೂರ್ತಿ ಹೊಡೆದು, "ಇನ್ನೊಂದು ಸಲ ಅವಳ ಮನೆಗೆ ಹೋದದ್ದು ನನ್ನ ಕಿವಿಗೆ ಬೀಳಲಿ - ನೀನು ಹುಟ್ಟಲಿಲ್ಲಾಂತ ಅನಿಸಿಬಿಡುತ್ತೇನೆ" ಎಂದು ಸ್ವರ್ಣನನ್ನೆತ್ತಿಕೊಂಡು ಭಾಗೀರತಮ್ಮನ ಮನೆಯತ್ತ ಹೊರಟಳು

ಸುಮಿತ್ರ ನಿಶ್ಚೇಷ್ಟಿತಳಾಗಿ ಒರಗಿದಳು ಹೊಡೆತದ ನೋವಿಗಿಂತಾ ಮಂಜುಳೆಯ ಮನೆಗೆ ಹೋಗಲು ಸಾಧ್ಯವಿಲ್ಲವಲ್ಲಾ ಎಂದೇ ಅವಳಿಗೆ ದುಃಖವಾಯಿತು

ಸುಮಿತ್ರೆಯ ಸ್ಥಿತಿಯನ್ನು ಕಂಡ ಪಾತಕ್ಕ, "ಭಗವಂತಾ ನನ್ನ ಮೇಲೆ ನಿನಗಿನ್ನೂ ಕರುಣೆ ಬಂದಿಲ್ಲವೇ ? - ಎಂದಿಗೆ ನಿನ್ನ ಪಾದಕ್ಕೆ ಸೇರಿಸಿಕೊಳ್ಳುತ್ತೀಯಾಪ್ಪಾ" ಎಂದು ದೀನರಾಗಿ ಮೊರೆಯಿಟ್ಟರು.

ತಾನು ಹೊಡೆದುದರ ಪರಿಣಾಮವಾಗಿ ಸುಮಿತ್ರೆ ಹಾಸಿಗೆ ಹಿಡಿಯ

ಬಹುದೆಂದು ರಾಜಮ್ಮ ಊಹಿಸಿರಲಿಲ್ಲ ಸುಮಿತ್ರೆಗೆ ಹಿಡಿದ ಜ್ವರ ಒಂದೇ ಸಮನೆ ಮೂರು ದಿನಗಳವರೆಗೆ ಕಾಯಿತು ಜ್ವರದತಾಪದಲ್ಲಿ ಸುಮಿತ್ರೆ ಏನೇನೋ ಬಡಬಡಿಸುತ್ತಿದ್ದಳು ಅವಳ ಸ್ಥಿತಿ ಮನೆಯಲ್ಲಿ ಎಲ್ಲರನ್ನೂ ಗಾಬರಿಪಡಿಸಿತು

ಸುಮಿತ್ರೆ ರಾಜಮ್ಮನ ಮುಖ ಕಂಡೊಡನೇ ಚೀರುತ್ತಿದ್ದಳು ನರಸಿಂಹಯ್ಯ ರಜೆಗೆ ಬರೆದು ಹಾಕಿ ಸುಮಿತ್ರೆಯ ಶುಶ್ರೂಷೆಗಾಗಿ ಮನೆಯಲ್ಲುಳಿದ

ಮಗಳ ವರ್ತನೆ ನರಸಿಂಹಯ್ಯನಿಗೆ ಬಿಡಿಸಲಾರದ ಸಮಸ್ಯೆಯಾಯಿತು ರಾಜಮ್ಮ ಏನು ತಂದಿತ್ತರೂ ಸುಮಿತ್ರೆ ಮುಟ್ಟುತ್ತಿರಲಿಲ್ಲ ಇದೇ ಸಮಯ ಸಾಧಿಸಿ ರಾಜಮ್ಮ ಸ್ವರ್ಣನ ರಗಳೆಯನ್ನೂ ಲಕ್ಷಿಸದೆ ಸುಮಿತ್ರೆಯ ಆರೈಕೆಗೆ ಟೊಂಕಕಟ್ಟಿ ನಿಂತಳು ಸುಮಿತ್ರೆ ಬೇಡವೆಂದು ಹಟಮಾಡಿದರೆ

"ನೋಡೀದ್ರೆ – ಯಾವಾಗಲೂ ನೀವೇ ಮುಂದೆ ಕೂತಿರುವುದಕ್ಕಾಗುತ್ತದೆಯೇ? ಹೇಳಿ–ನಾನು ಏನು ಕೊಟ್ಟರೂ ಬೇಡಾಂತ ಹಟ ಮಾಡ್ತಾಳಲ್ಲ–" ಎಂದು ಗಂಡನಿಗೆ ನ್ಯಾಯ ಒಪ್ಪಿಸುತ್ತಿದ್ದಳು

ರಾಜಮ್ಮನ ನಡೆ ನುಡಿ ನರಸಿಂಹಯ್ಯನಿಗೆ ಸಹಜವಾಗಿ ಕಂಡುಬರುತ್ತಿದ್ದಿತು ಸುಮಿತ್ರೆಯ ಹಟ ಕಂಡು ಬೇಸರವೂ ಬರುತ್ತಿತ್ತು ತನ್ನ ಸ್ಪಷ್ಟ ಅಭಿಪ್ರಾಯವನ್ನು ಒಂದೆರಡು ಮಾತುಗಳಲ್ಲಿ ತಿಳಿಸುತ್ತಿದ್ದ

"ನೀನಿರುವ ಸ್ಥಿತಿಯಲ್ಲಿ ಎತ್ತುವವರ ಕೈಕೂಸಿನಂತಿರಬೇಕು – ಹೀಗೆಲ್ಲಾ ಹಟ ಮಾಡಿದರೆ ಯಾರು ಎಷ್ಟು ದಿನ ಕೇಳುವುದಕ್ಕಾಗುತ್ತದೆ? – ಅವಳೇನು ಹೊರಗಿನವಳೇ – ನಿನ್ನ ಚಿಕ್ಕಮ್ಮ ಅಲ್ಲವೇ?"

ತಂದೆಯ ಮಾತುಗಳನ್ನು ಸುಮಿತ್ರೆ ಕಷ್ಟಪಟ್ಟು ನುಂಗಿದಳು – ರಾಜಮ್ಮನ ಕೈ ಮೇಲಾಯಿತು – ನರಸಿಂಹಯ್ಯ ಎಂದಿನಂತೆ ಕೆಲಸಕ್ಕೆ ಹೋಗಲು ಪ್ರಾರಂಭಿಸಿದ

ಪಾತಕ್ಕ ಅಸಹಾಯಕರಂತೆ ಮಡಿಯನ್ನುಪ್ಪುತ್ತಿದ್ದರು ಅವರ ಚರ್ಯೆ ಕಂಡು ಸುಮಿತ್ರೆ ಕಳವಳಪಡುತ್ತಿದ್ದಳು

"ಅಜ್ಜೀ – ನಿನಗೂ ನಾನು ಬೇಡವಾದೆನೇ?"

"ಇಲ್ಲ ಕಂದ – ಹಾಗೆಲ್ಲ ಮಾತಾಡಿ ನನ್ನ ಹೊಟ್ಟೆಗೆ ಕಿಚ್ಚಿಡಬೇಡ"

"ನನ್ನ ಪತ್ರವೂ ಸುಳಿಯುವುದಿಲ್ಲ ನೀನು"

"ನಾನೇನು ಮಾಡಲು ಸಾಧ್ಯ ಸುಮಿ – ನನ್ನದೂ ಕಾಲ ಮುಗಿಯಿತಪ್ಪಾ – ನೀವು ನೀವು ಸರಿಹೋಗಿಸಿಕೊಂಡರೆ ಮುಂದೆ ನಿನಗೇ ಒಳ್ಳೆಯದು – ನಾಳೆ ನಿನಗೆ ಮಾಡಬೇಕಾದವರು ಅವರೇ ವಿನಾ ನಾನಲ್ಲ"

ಅಜ್ಜಿಯ ಮಾತುಗಳು ಸುಮಿತ್ರೆಗೆ ಸರಿಯಾಗಿ ಅರ್ಥವಾಗುತ್ತಿರಲಿಲ್ಲ ಸುಮಿತ್ರೆಯ ಕಣ್ಣೀರನ್ನೊರೆಸಲಶಕ್ತರಾಗಿ ಸಾತಕ್ಕ ತಮ್ಮ ಕೆಲಸ ಹುಡುಕಿಕೊಂಡು ಹೋದರು

ಸ್ವರ್ಣ ತನ್ನ ಪುಟ್ಟ ಕೈಗಳಿಂದ ಅಕ್ಕನ ಕಣ್ಣೀರು ಒರೆಸಲು ಬರುತ್ತಿದ್ದಳು ತನ್ನ ತೊದಲ್ನುಡಿಯಿಂದ, ಸುಮಿತ್ರೆಯನ್ನು ನಗಿಸುತ್ತಿದ್ದಳು

"ಚುಮಿ – ಅಮ್ಮನಿಂಗೆ ಅತ್ತಾ ಮಾಡಲೆ,?"

"ಇಲ್ಲ ಚಿನ್ನಾ"

"ಸುಮ್ನಿರು – ನಾನೂ ಅತ್ತಾ ಮಾತೀನಿ" ಎಂದು ತಾಯಿಯ ಬಳಿ ಓಡಿಬಂದು,

"ಯಾಕಮ್ಮಾ – ಚುಮಿ ಅಲ್ತಾಳೆ – ನೀ ಅತ್ತ ಮಾಲಿದ್ಯಾ"

"ನುಪಸಾತಿ-ನೀನೊಬ್ಬಳು ಅವಳನ್ನ ಮಬಿಸಿಕೊಂಡು ಮಾತಾಡೋಕ್ಕೆ ಕಡಿಮೆ ಆಗಿದ್ದೆ"

"ತಾಲು ನಿಂಗೂ ಅತ್ತ ಮಾತೀನಿ"

ಮಗಳ ಹೂವಿನಂತಹ ಏಟುಗಳನ್ನು ಸಂತೋಷದಿಂದ ಸ್ವೀಕರಿಸುತ್ತಾ,

"ಇನ್ನೇನು ? ಮೂರು ಹೊತ್ತೂ ಹೀಗೆ ಮನೆಯಲ್ಲಿ ಕಣ್ಣೀರು ಹಾಕುತ್ತಿದ್ದರೆ ಮನೆ ತೊಳೆದುಹೋಗುತ್ತೆ" ಎಂದು ಸುಮಿತ್ರೆಯನ್ನು ಬಂದವರೆದುರು ಟೀಕಿಸುತಿದ್ದಳು

ಒಂದು ವಾರವಾದರೂ ಸುಮಿತ್ರೆ ಶಾಲೆಗೆ ಬರದಿದ್ದುದನ್ನು ಕಂಡು ಮಂಜುಳೆಗೆ ಭಯವಾಯಿತು - ತನ್ನಿಂದೇನಾದರೂ ಅಪಚಾರವಾಗಿರಬಹುದೇ ? ಇರಲಾರದು ?–ತನ್ನ ಮನೆಗೆ ಬಂದಳೆಂಬುದು ಅವಳ ಚಿಕ್ಕಮ್ಮ ಪತ್ತೆಹಚ್ಚಿರಬಹುದೇ ? ಹೇಗೆ ಸಾಧ್ಯ - ಸ್ಕೂಲು ಬಿಟ್ಟು ಬಿಟ್ಟಳೇ ?

ಇರಬಹುದು ಎನಿಸಿತು

ಐದಾರು ದಿನ ಕಳೆದ ಮೇಲೆ ನರಸಿಂಹಯ್ಯ ಮಂಜುಳೆಯನ್ನರಸಿ ಕೊಂಡು ಅವಳ ಮನೆಗೆ ಬಂದ

"ಸುಮಿತ್ರೆ ಯಾಕೆ ಸ್ಕೂಲಿಗೆ ಬರುತ್ತಿಲ್ಲ" ಎಂದು ಅವನು ಬಂದೊಡನೆಯೇ ಮಂಜುಳಾ ವಿಚಾರಿಸಿದಳು

"ಅವಳಿಗೆ ಹುಷಾರಿಲ್ಲ"

"ಎಷ್ಟು ದಿವಸದಿಂದ ? ಏನಾಗಿದೆ ?"

"ಸ್ವಲ್ಪ ಸುಧಾರಿಸಿಕೋ ಮಹಾರಾಯ್ತಿ - ಹೇಳುತ್ತೇನೆ" ಎಂದು ವಿವರವಾಗಿ ತಿಳಿಸಿದ.

"ಒಂದು ವಾರದ ಹಿಂದೆ ಯಾರ ಮನೆಗೋ ಹೋಗಿ ಬರುತ್ತಿದ್ದಳಂತೆ - ಕತ್ತಲೆಯಲ್ಲಿ ಏನು ಕಂಡು ಹೆದರಿದಳೋ - ಒಂದೇ ಸಮನೆ ಜ್ವರಕಾಯುತ್ತಲಿತ್ತು - ಈಗ ವಾಸಿ"

ತಮ್ಮ ಮನೆಗೆ ಬಂದ ದಿನದಿಂದಲೇ ಈ ಪ್ರಕರಣ ಪ್ರಾರಂಭವಾಗಿದೆಯೆಂದು ಮಂಜುಳೆ ತಿಳಿದಳು ಸುಮಿತ್ರೆಯನ್ನು ಕಳಿಸಿದಾಗ ಕತ್ತಲೇನೂ ಆಗಿರಲಿಲ್ಲ - ರಸ್ತೆಯುದ್ದಕ್ಕೂ ಜನ - ಅಂತಹುದರಲ್ಲಿ ಏನು ಕಂಡು ಹೆದರಿರಬೇಕು ? -

"ಇದನ್ನು ನಂಬುತ್ತೀರಾ ?

"ಇರಬಹುದು - ಯಾಕೆ - ಸುಳ್ಳೇನು ?"

"ಅಥವಾ ನಿಮ್ಮ ಹೆಂಡತಿ ಕಟ್ಟಿದ ಕಥೆಯೋ ?"

"ಅವಳಿಗೇನು ಬೇರೇ ಕೆಲಸವಿಲ್ಲವೇ ? ನೀನೂ ಚೆನ್ನಾಗಿ ಹೇಳುತ್ತೀ - ಅಷ್ಟಕ್ಕೂ ಸುಮಿತ್ರೆಗೆ ಹೊತ್ತುಗೊತ್ತಿಗೆ ಆರೈಕೆ ಮಾಡುತ್ತಿರುವವಳೂ ಅವಳೇ ? - ಸುಮ್ಮನೆ ಯಾರನ್ನೂ ದೂರಬಾರದು"

"ನಿಮಗಷ್ಟು ವಿಶ್ವಾಸವಿದ್ದರೆ ಸರಿಬಿಡಿ - ನನಗೇಕೆ ನಿಮ್ಮ ಮನೆ ವಿಷಯ" ಎಂದು ಮಂಜುಳೆ ತಾತ್ಕಾಲಿಕವಾಗಿ ತನ್ನ ಕುತೂಹಲವನ್ನಡಗಿಸಿ ಕೊಂಡಳು

ಸುಮಿತ್ರೆ ಸ್ಕೂಲಿಗೆ ಬಂದ ದಿನ ಮಂಜುಳೆ ಅವಳಿಂದ ನಡೆದ ವಿಷಯಗಳನ್ನು ಆಮೂಲಾಗ್ರವಾಗಿ ಸಂಗ್ರಹಿಸಲು ಮರೆಯಲಿಲ್ಲ ನಿಜಸಂಗತಿಯನ್ನು ಸುಮಿತ್ರೆಯ ಬಾಯಿಂದ ಕೇಳಿದಮೇಲೆ ಮಂಜುಳೆ,

'ಇಂತಹ ಹೆಂಗಸರೂ ಜಗತ್ತಿನಲ್ಲಿರಲು ಸಾಧ್ಯವೇ ?" ಎಂದು ಆಶ್ಚರ್ಯಪಟ್ಟಳು ಹೆಂಡತಿಯು ಎಲ್ಲಾ ಮಾತುಗಳಿಗೂ ಕೋಲೇಬಸವನಂತೆ 'ಹೂ' ಗುಟ್ಟುತ್ತಾ ಮಗಳನ್ನು ಹಿಂಸೆಗೆ ಗುರಿಮಾಡುತ್ತಿರುವರಲ್ಲಾ ಎಂದು ಸಂಕಟವಾಯಿತು ತನ್ನ ಮನಗೆ ಕಾಲಿಡಕೂಡದೆಂದು ಕಟ್ಟಾಜ್ಞೆ ವಿಧಿಸಿರುವುದನ್ನು ತಿಳಿದಮೇಲೆ ತನ್ನಮೇಲಿನ ಕೋಪವನ್ನು ಮಗುವಿನಮೇಲೆ ಹರಿಹಾಯಿಸಿರುವಳೇ ? ಎಂದು ಅನುಮಾನಪಟ್ಟಳು ಈ ಆಲೋಚನೆ ಬಂದಾಗ ಸುಮಿತ್ರೆಯಿಂದ ಆದಷ್ಟು ದೂರವಾಗಿರಬೇಕೆಂದುಕೊಂಡಳು - ಹೇಗೆ ದೂರಮಾಡಿ ತಾನಿರುವುದು ? - ಸುಮಿತ್ರೆ ತನ್ನಮೇಲೆ ಬೀರಿರುವ ಪ್ರಭಾವ ಕಂಡು 'ಇದೆಂತಹ ಮೈತ್ರಿ - ಯಾವುದೋ ಪೂರ್ವಜನ್ಮದ ಬಾಂಧವ್ಯವೇ ನನ್ನನ್ನು ಈ ಮಗುವಿಗೆ ಗಂಟುಹಾಕಿದೆ' ಎಂದುಕೊಂಡಳು

"ನನ್ನ ವಿಷಯ ಏನೂ ಆಡಬೇಡ ಸುಮಾ - ಎಚ್ಚರಿಕೆಯಿಂದಿರು" ಮಂಜುಳೆಯ ಮಾತು ಸುಮಿತ್ರೆಯಲ್ಲಿ ಮತ್ತಷ್ಟು ಕುತೂಹಲವನ್ನು ಹುಟ್ಟುಹಾಕಿತು

"ನಮ್ಮ ಚಿಕ್ಕಮ್ಮ ನಿಮಗೆ ಗುರುತೇ ಮೇಡಂ"

"ಇಲ್ಲಾ ಸುಮಾ"

"ಗುರುತೂ ಇಲ್ಲದ ನಿಮ್ಮಮೇಲೇಕೆ ಕೋಪಮಾಡಿಕೊಳ್ಳುತ್ತಾರೆ ಮೇಡಂ"

"ಗೊತ್ತಿಲ್ಲ"

ಮಂಜುಳೆಯ ಮಾತನ್ನು ನಂಬಿ ಸುಮಿತ್ರೆ ಸುಮ್ಮನಾದಳು ಅವಳ ಮನೋಚಕ್ಷುಸ್ಸಿನ ಮುಂದೆ ರಾಜಮ್ಮ ಕರಾಳಮೂರ್ತಿಯಾಗಿ ಭೈರವನರ್ತನ ಮಾಡುತ್ತಿದ್ದಳು

ಸುಮಿತ್ರೆಯನ್ನು ಮಂಜುಳೆ ಕಳುಹಿಸಿದರೂ ಮನಸ್ಸಿನಿಂದ ತೊಡೆದು ಹಾಕಲಸಾಧ್ಯವಾಯಿತು. ಕೂತಲ್ಲಿ – ನಿಂತಲ್ಲಿ ಸುಮಿ ಕಾಡುತ್ತಿದ್ದಳು ನರಸಿಂಹಯ್ಯನಲ್ಲಿ ವಿಷಯವನ್ನೆಲ್ಲಾ ತಿಳಿಸಬೇಕೆಂದು ನಿಶ್ಚಯಿಸುವಳು – ಧರ್ಮ ಅಡ್ಡಿಬರುತ್ತಿತ್ತು – ಈ ನಡುವೆ ಗಂಡ ಹೆಂಡತಿ ಸ್ವಲ್ಪ ವಿಶ್ವಾಸದಿಂದಿರುವರು. ನಾನೇಕೆ ಅವರ ಪ್ರೇಮಕ್ಕೆ ಹುಳಿಹಿಂಡಲಿ ? – ಇವರು ಚೆನ್ನಾ

ಗಿರಲಿ – ಸುಮಿ ಯಾವ ಪಾಪಮಾಡಿದುದಕ್ಕೆ ನರಕದಲ್ಲಿ ಬೇಯಬೇಕು – ಈ ಅನ್ಯಾಯ ಖಂಡಿತಾ ತಡೆಗಟ್ಟಬೇಕು – ಶತಾಯ ಗತಾಯ ಸಾಧಿಸಬೇಕು – ನಿರ್ಧಾರ ಮಾಡಿದುದೇ ತಡ ಮಂಜುಳೆ 'ಶ್ರೀಕಂಠಾ' ಎಂದು ಕೂಗಿದಳು

ಚಿತ್ರ ಬರೆಯುತ್ತಿದ್ದ ಶ್ರೀಕಂಠ ಅಕ್ಕನ ಕೂಗು ಕೇಳಿ ಹೌಹಾರಿದ ಕುಂಚವನ್ನು ಹಿಡಿದೇ ಮಂಜುಳೆಯಿದ್ದೆಡೆಗೆ ಧಾವಿಸಿ ಬಂದು – ಅವಳಿಗೆ ಏನೂ ಆಗಿರದಿರುವುದನ್ನು ಕಂಡು ಕೋಪದಿಂದ,

"ಸ್ವಲ್ಪ ಮೆಲ್ಲಗೆ ಕೂಗಿದ್ದರೇನಾಗ್ತಿತ್ತು – ಏನಂಥಾ ರಾಜಕಾರ್ಯ ?"

ಶ್ರೀಕಂಠನ ಕೋಪಕಂಡು ಮಂಜುಳೆ ನಗಹತ್ತಿದಳು ಕಕ್ಕಾಬಿಕ್ಕಿಯಾಗಿ ನೋಡುತ್ತಿದ್ದ ಅವನನ್ನು,

"ಕೂತುಕೋ " ಎಂದು ಕುಳ್ಳಿರಿಸಿದಳು.

ಶ್ರೀಕಂಠ ನಿಧಾನವಾಗಿ ಉಸಿರು ಬಿಡುತ್ತಾ, "ಒಳ್ಳೆಮಹಾರಾಯ್ತಿ – ನನಗೆ ಎಷ್ಟು ಭಯಪಡಿಸಿಬಿಟ್ಟೆಯೋ ?"

ಮಂಜುಳೆಗೆ ಅವನ ಕಳವಳ ಕಂಡು ಮತ್ತಷ್ಟು ನಗು – ಕಷ್ಟಪಟ್ಟು ತಡೆದುಕೊಂಡು, "ಏನಾಯ್ತೆಂದು ತಿಳಿದೆ ?"

"ಸ್ಕೂಲಲ್ಲಿ ಕಿರುಚಿ ಕಿರುಚಿ ನಿನ್ನ ಗಂಟಲು ದೊಡ್ಡದಾಗಿಬಿಟ್ಟಿದೆ ಹೋಗಲಿ – ವಿಷಯವೇನು ಹೇಳು – ನಂಗೆ ತುಂಬಾ ಕೆಲಸವಿದೆ "

"ನಿನಗೆ ಸೀತಾರಾಮಯ್ಯನವರ ಮನೆ ಗೊತ್ತಿಲ್ಲವೇ ?"

"ಹೂಂ – ಆದಿನ ತೋರಿಸಿ 'ಬಾ' ಅಂತ ಬಲವಂತಮಾಡಿದರು – ನಾನೇ ಹೋಗಲಿಲ್ಲ "

"ಈಗ ಅವರನ್ನ ಕರೆದುಕೊಂಡು ಬರ್ತೀಯಾ ? ಈಗಲೇ ಹೋಗು – ಇವರು ಬಂದುಬಿಟ್ಟರೆ ಅವರ ಕೈಲಿ ಮಾತಾಡುವ ಹಾಗಿಲ್ಲ "

"ಅದೇನೂ ಅಂಥಾ ಗುಟ್ಟು ವಿಷಯ ?"

ಮಂಜುಳೆ ಸುಮಿತ್ರೆಯ ಪ್ರಕರಣ ತಿಳಿಸಿದಳು "ಈಗಲಾದರೂ ಹೋಗ್ತೀಯಾ ?"

"ಖಂಡಿತಾ ಹೋಗುತ್ತೇನೆ " ಎಂದವನೇ ಸೈಕಲ್ ತೆಗೆದುಕೊಂಡು ಹೋಗಿ ಕಾಲುಗಂಟೆಯೊಳಗೇ ಸೀತಾರಾಮು ಜತೆಬಂದ

"ಏನಂಥಾ ಅರ್ಜೆಂಟ್ ವಿಷಯ ?" ಎಂದುಕೊಂಡೇ ಸೀತಾರಾಮು ಪ್ರವೇಶಿಸಿದ ಮಂಜುಳೆ ಕಾಫಿ ತಂದಿಟ್ಟಳು

"ಬಂದಾಗಲೆಲ್ಲಾ ಇದೇನಮ್ಮಾ – ಕಾಫಿ ಕೊಡಲೇಬೇಕೆಂಬ ನಿಯಮವೇ ?" ಎಂದು ಕಾಫಿಯನ್ನು ಹೀರಿದ

ಮಂಜುಳೆ ಸುಮಿತ್ರೆಯ ಸಂಗತಿಯನ್ನು ಚಾಚೂ ತಪ್ಪದಂತೆ ವರ್ಣಿಸಿ,

"ಆಗ ಹಾರಾಡಿ ಮದುವೆಮಾಡಿದರಲ್ಲಾ – ಆ ಮುದುಕಿ ಈಗೇನು ಮಾಡ್ತಾ ಇದಾರೆ ?"

"ಸದ್ಯಕ್ಕೆ ಆ ಸ್ಥಿತಿಯೆಲ್ಲಾ ದಾಟಿಹೋಗಿದೆ – ಪಾತಕ್ಕನ ಮಾತೇನು ಈಗ ಮನೆಯಲ್ಲಿ ನಡೆಯುವುದಿಲ್ಲ"

"ಶ್ರೀರಾಮಚಂದ್ರ ಮಾತೆಯನ್ನು ಮರೆತುಬಿಟ್ಟನೇ ?"

"ಮನೆಯಲ್ಲಿ ನಡೆಯೋ ಸಂಗತಿಗಳು ಅವನಿಗೆ ಹೇಗಮ್ಮ ತಿಳಿಯ ಬೇಕು ? ಯಾವಾಗಲೋ ಹೋಗ್ತಾನೆ – ಮಾಡಿಟ್ಟದ್ದನ್ನ ತಿಂದು ಹಾಯಾಗಿ ಮಲಗ್ತಾನೆ – ಆಗ ಎಲ್ಲವೂ ಶಾಂತವಾಗಿದ್ದರೆ ಹೀಗೆ ಇರುತ್ತೇಂತ ಭಾವಿಸು ತ್ತಾನೆ ಸ್ವಲ್ಪವೂ ವ್ಯವಹಾರ ಜ್ಞಾನ ಅನ್ನೋದೇ ಇಲ್ಲ"

"ನೀವು ಸ್ವಲ್ಪ ಹೇಳಿ ಸೀತಾರಾಮಯ್ಯನವರೇ - ಆ ಮಗುವಿನ ಸಂಕಟ ನೋಡಿ ಯಾರು ಸೈರಿಸಬಹುದು ?"

"ನೀವೇ ಸುಮಿತ್ರೆ ಚಿಕ್ಕಮ್ಮ ಆಗಿದ್ದರೆ ಅವನ ಸಂಸಾರ ನಂದ ಗೋಕುಲದಂತಾಗುತ್ತಿತ್ತು"

"ಅಯ್ಯೋ - ನಾನೆಲ್ಲಿ - ಅವರೆಲ್ಲಿ ?"

" "

"ಅಷ್ಟು ಮಾಡ್ತೀರಾ ?"

"ಪ್ರಯತ್ನಮಾಡ್ತೇನಮ್ಮ - ಬರಲೇ - ಬರ್ತೀನಪ್ಪಾ ಶ್ರೀಕಂಠ"

"ನಾನೂ ಅಷ್ಟುದೂರ ಬರಲೇ ?"

"ಬೇಡ ಬಿಡು" ಎಂದು ಸೈಕಲ್ ತುಳಿದ.

ಮಂಜುಳೆಗೆ ಕೊಟ್ಟ ವಚನವನ್ನು ಸೀತಾರಾಮಯ್ಯ ಮರೆಯದೆ ಅಕ್ಷರಶಃ ಪಾಲಿಸಿದ ಮನೆಗೆ ಹೊರಡಲು ಆತುರ ತೋರಿಸುತ್ತಿದ್ದ ನರಸಿಂಹಯ್ಯನನ್ನು ಬಲವಂತವಾಗಿ ನಿಲ್ಲಿಸಿಕೊಂಡು ಹೋಟೆಲಿಗೆ ನುಗ್ಗಿದ

"ಇದೇನಯ್ಯಾ - ನಿನ್ನ ಬಯಕೆ - ಹಾಯಂತ ಮನೆಯಲ್ಲಿ ತಿನ್ನದೆ ?"

"ಇರಲಿ ಬಿಡೋ - ಒಂದುದಿನ ಛೇಂಜ್ ಇದ್ದರೇನೀಗ ?"

"ಮನೆಯಲ್ಲಿ ಕಾಯ್ತಿರ್‍ತಾರ "

"ನಿನಗೊಬ್ಬನಿಗೇ ಏನು ? - ನನ್ನಹತ್ರಾನೇ ಬಾಲಬಿಚ್ತೀಯಲ್ಲ "

ಸೀತಾರಾಮುವಿನ ಮುಂಪೆ ತನ್ನಾಟ ಸಾಗದೆಂದು ನರಸಿಂಹಯ್ಯ ತೆಪ್ಪಗಾದ ಕಾಫೀ - ತಿಂಡಿ ಮುಗಿದಮೇಲೆ,

"ಮುಂದೆ ಏನಪ್ಪಾ ಪ್ರೋಗ್ರಾಂ "

"ಸ್ವಲ್ಪ ಸುಮ್ಮನಿರಬಾರದೇ ?"

"ಏನೋ ಧಾರಾಳವಾಗಿ ಖರ್ಚುಮಾಡ್ತೀದೀಯಾ - ಎಲ್ಲಾದರೂ ಪುಟ್ಟ ಟು ಲಪ್ಟಾಯಿಸಿದ್ದಿಯೋ ?"

"ಗಂಡು ಲಪ್ಟಾಯಿಸಬೇಕಾಗಿದೆ "

"ನಿನಗ್ಯಾಕೋ ಗಂಡು ?"

"ನನಗಲ್ಲವೋ ಮಂಕೇ - ನನ್ನ ಮಗಳಿಗೆ "

"ಈ ಯೋಚನೆ ಬಿಟ್ಟದೆಂದು ನಿನಗೆ ? ಹೇಳು "

"ಹಾಗೂ ಹೀಗೂ ಇನ್ನೆರಡುವರ್ಷ ತಳ್ಳೀಯಾ - ಆಮೇಲೆ ನಿನಗೂ ನನ್ನವಾಡೇ "

"ದೂರವಿದೆಯಲ್ಲಾ–ವಾಕಿಂಗ್ ಸಾಕು ಮಹಾರಾಯ–ಈ ವಾಕ್ನಲ್ಲೇ ಕುಳಿತು ಮಾತನಾಡೋಣ "

"ಇಷ್ಟುಬೇಗ ಸುಸ್ತಾಯಿತೇ ?"

"ನೀನು ಬಿಡು ನಾರದನ ಅಪರಾವತಾರ"

"ನೀನು "

"ಏನು ?"

"ಬೇಡಪ್ಪಾ ನಿನಗೆಲ್ಲಾದರೂ ಕೋಪ ಬಂದೀತು "

"ಇರಲಿ - ಅದೇನು ಆಪ್ತಾಲೋಚನೆ ಹೇಳು "

"ನಿನಗೆ ಹೇಗೆ ಗೊತ್ತಾಯಿತು "

"ಬಿಸಿ ಬಿಸಿ ಕಾಫಿ ಹುಯ್ದು ಈ ತಂಪಾದ ಜಾಗಕ್ಕೆ ಕರೆತಂದಾಗಲೇ –"

"ಗ್ರಹಿಸಿಬಿಟ್ಟೆ."

"ಹೂಂ"

ಹೇಗೆ ಪ್ರಾರಂಭಿಸುವುದೆಂದು ತೋರದೇ ಸೀತಾರಾಮು ಹುಲ್ಲು ಕೀಳಲಾರಂಭಿಸಿದ ಮುಂದೆ ಒಂದು ಸಣ್ಣ ರಾಶಿಯೇ ಬಿತ್ತು ಅವನ ಚರ್ಯೆ ಕಂಡು ನರಸಿಂಹಯ್ಯ ಬೇಸರದಿಂದ,

"ಹೇಳಯ್ಯ"

"ಸುಮೀನ್ನ ನೋಡಿ ತುಂಬಾ ದಿನವಾಯ್ತು"

ನರಸಿಂಹಯ್ಯನಿಗೆ ನಿರಾಶೆಯೇ ಆಯಿತು ಕೋಪ ತಡೆದು ಸುಮ್ಮನಾದ

"ಸ್ವಲ್ಪ ದಿನದಿಂದ ಹುಷಾರಿರಲಿಲ್ಲವಂತೆ – ಈಗ ಚೆನ್ನಾಗಿರುವಳೇ ?"

"ಹೂಂ"

"ಮಂಜುಳೆಯ ಮನೆಗೆ ಹೋದಳೆಂದು ರಾಜಮ್ಮ ಹೊಡೆದರಂತೆ – ಸುಮಿತ್ರೆಗೆ ಜ್ವರ ಬಂತು – ಹೀಗೆ ಮಾಡಬಹುದೇ ?"

"ನಿನಗೆ ಯಾರು ತಿಳಿಸಿದರು ?"

"ಸುಮಿತ್ರೆ ಹೇಳಿದಳು"

"       "

"ಸುಮಿತ್ರೆಯನ್ನ ಹೊಡೆದು ಸಾಯಿಸಲು ನೀನು ಮದುವೆಯಾದೆಯಾ ?"

"ಇದೇನಯ್ಯಾ ಹೀಗೆ ಮಾತಾಡುತ್ತಿರುವೆ ?"

"ಇರಲಿ - ನಾನು ಕೇಳಿದ್ದಕ್ಕೆ ಜವಾಬು ಕೊಡು"

"ಇಲ್ಲ"

"ತಾಯಿಯಿಲ್ಲದ ತಬ್ಬಲಿ ಮಗುವನ್ನು ಸರಿಯಾಗಿ ಪ್ರೀತಿಯಿಂದ ಕಾಣಬೇಕಾದ್ದು ನಿಮ್ಮೆಲ್ಲರ ಧರ್ಮ - ರಾಜಮ್ಮನ ಕರ್ತವ್ಯ ನೀವದನ್ನು ಅರಿತು ನಿರ್ವಹಿಸಬೇಕು"

"ನನ್ನ ಹೆಂಡತಿ ಸುಮೀನ ದಂಡಿಸುತ್ತಿರುವಳೇನು ?"

"ಹೌದು"

"ನಿನಗೆ ಯಾರು ತಿಳಿಸಿದರು?"

"......"

"ಅವಳೇ ತಿಳಿಸಿದಳೋ ?"

"ಯಾರು ಬೇಕಾದರೂ ಹೇಳಿರಬಹುದು - ಇಷ್ಟಂತೂ ನಿಜ"

"ನಾನು ಹೇಳುತ್ತೇನೆ – ಇವೆಲ್ಲಾ ಸುಳ್ಳು – ರಾಜುವಿನ ಮೇಲೆ ಹೊಟ್ಟೆಯುಕಿಚ್ಚಿನಿಂದ ಹುಟ್ಟಿಸಿದ ಅಪವಾದನೆಗಳು"

"ನಿನಗೇನಯ್ಯಾ ಗೊತ್ತು - ಮನೆಯಲ್ಲಿ ನಡೆಯುವ ಸಂಗತಿ ?"

"ನಿನಗೇನಯ್ಯಾ ನನ್ನ ಸಂಸಾರದ ವಿಷಯ ಗೊತ್ತಿರುವುದು ?"

ಸೀತಾರಾಮು ತನ್ನ ಅಧಿಕಪ್ರಸಂಗತನಕ್ಕೆ ನಾಚಿ,

"ಕ್ಷಮಿಸು ನರಸಿಂಹ - ಗೆಳೆಯನೆಂಬ ಅಭಿಮಾನದಿಂದ ಇಷ್ಟು ಮಾತಾಡಿದೆ - ನನ್ನದೇ ತಪ್ಪು"

ತಾನು ಆ ರೀತಿ ಆಡಬಾರದಾಗಿತ್ತೆಂದು ನರಸಿಂಹಯ್ಯನಿಗನ್ನಿಸಿತು

"ನೀನೇ ಹೇಳು ಸೀತಾರಾಮು ಆಗೆಲ್ಲಾ ರಾಜು ಪಕ್ಷ ಹಿಡಿದು ವಾದಿಸುತ್ತಿದ್ದವನೂ ನೀನೇ - ನಿನ್ನ ಮಾತಿನಂತೇ ನಾನು ರಾಜುವನ್ನು ಪ್ರೀತಿಯಿಂದ ಕಾಣಲೆತ್ನಿಸಿದೆ - ಈಗ ಮನೆಯಲ್ಲಿ ಕೆಲವು ಗಳಿಗೆಯಾದರೂ ಉಳಿಯಬಹುದು ಈಗ ರಾಜುವನ್ನು ನೀನು ನಿಂದಿಸುತ್ತಿರುವುದನ್ನು ನೋಡಿದರೆ ನಾನು ಯಾವ ಮಾತನ್ನು ನಂಬಲಿ ? - ರಾಜು ಅಂತಹವಳಲ್ಲ– ಸುಮಿತ್ರೆ ಜ್ವರದಲ್ಲಿ ನರಳುತ್ತಿದ್ದಾಗ ಅವಳು ಮಾಡುತ್ತಿದ್ದ ಆರೈಕೆಯನ್ನು ಕಂಡಿದ್ದರೆ ನೀನಿಂದು ಈ ಮಾತುಗಳನ್ನು ಖಂಡಿತವಾಗಿ ಆಡುತ್ತಿರಲಿಲ್ಲ ಬಾಯಲ್ಲಿ ಒಂದೆರಡು ಮಾತಾಡಿದರೂ ಹೃದಯ ಒಳ್ಳೆಯದು"

"ಇರಬಹುದು"

ವಂದನೆ ಪ್ರತಿವಂದನೆಗಳೊಡನೆ ಇಬ್ಬರು ಗೆಳೆಯರೂ ಅಗಲಿದರು.

'ಇವನಿಗೆ ಸರಿಯಾಗಿ ಮಂತ್ರ ಹಾಕಿದ್ದಾಳೆ - ಪರವಾಗಿಲ್ಲ ರಾಜಮ್ಮ' ಎಂದುಕೊಂಡು ಭಾರವಾದ ಮನಸ್ಸಿನಿಂದ ಸೀತಾರಾಮು ಮನೆ ತಲುಪಿದ.

ಸೀತಾರಾಮುವಿನ ಪ್ರಯತ್ನ ನಿಷ್ಫಲವಾದುದನ್ನು ತಿಳಿದು ಮಂಜುಳೆ,

"ಇವರಿಗೆಂದಿಗೆ ಬುದ್ಧಿ ಬರುತ್ತದೆ !" ಎಂದು ಬೇಸರಪಟ್ಟಳು.

## ೧೯

ಅನಿರೀಕ್ಷಿತವಾಗಿ ರಂಗವ್ಮ್ಮ ಬಂದುದು ಮನೆಯಲ್ಲಿ ಎಲ್ಲರಿಗೂ ಸಂತಸ ವುಂಟುಮಾಡಿತು ಸುಮಿತ್ರೆಗಂತೂ ತನ್ನ ಆನಂದವನ್ನು ವ್ಯಕ್ತಪಡಿಸುವ ಮಾರ್ಗವೂ ತಿಳಿಯಲಿಲ್ಲ

"ಇದೇನು ಸ್ಕೂಲಿಗೆ ಹೊರಟಿದ್ದೆಯಾ ಸುಮಿ"

"ಹೂಂ - ಆದರ ಈಗ ಹೋಗುವುದಿಲ್ಲ"

"ಯಾಕೆ ? ಹೋಗಿ ಬಾ" ಎಂದು ಪಾತಕ್ಕ ಹೇಳಿದರು

"ಇಲ್ಲ ಅಪರೂಪಕ್ಕೆ ಅಜ್ಜಿ ಬಂದಿದಾರ - ನಾನಿರ್ತೀನಿ" ಎಂದು ನಿಂತಳು

ಬಂದವರು ಯಾರೆಂಬುದನ್ನು ತಿಳಿಯದೇ ಸ್ವರ್ಣ ದೂರ ನಿಂತಳು ರಾಜಮ್ಮ ಅವಳನ್ನು ಅಜ್ಜಿಯ ಬಳಿ ಬಿಡಲು ಯತ್ನಿಸುತ್ತಿದ್ದಳು

"ಹೋಗೇ - ಹೊಸ ಅಜ್ಜಿ ಬಂದಿದಾರ"

"ಬಾರೇ - ಸ್ವರ್ಣ - ನಾನೂ ನಿನ್ನ ಸಂಬಂಧದವಳೇ" ಎಂದು ರಂಗಮ್ಮ ಕೋಡುಬಳೆ ತೋರಿಸಿದರು ಸ್ವರ್ಣ ಮೆಲ್ಲನೆ ಬಂದು ಅಜ್ಜಿಯ ಕೈಯಿಂದ ತಿಂಡಿ ವಸೂಲ್ಮಾಡಿ ಪುನಃ ಓಡಿದಳು

"ನೋಡಿದ್ಯಾ ನಿನ್ನ - ಪುನಃ ಬಾ ಮಾಡ್ತೇನೆ" ಎಂದು ರಂಗಮ್ಮ ಹುಸಿಕೋಪ ನಟಿಸಿದರು

"ಇವಳು ರಾಧೆಯಲ್ಲವೇ ?' ಪಾತಕ್ಕ ಕೇಳಿದರು

"ನಾವೆಲ್ಲ ಗೊತ್ತೇನೇ ರಾಧ" ರಾಧೆ ಮೌನಗೌರಿಯಂತೆ ಕುಳಿತಿದ್ದಳು.

"ಇವಳಿಗಂತೂ ತುಂಬಾ ನಾಚಿಕೆ – ಮನೆಗೆ ಯಾರಾದರೂ ಗಂಡಸರು

ಬಂದರೆ ಓಡಿಹೋಗಿ ಅವಿತುಕೊಳ್ಳುತ್ತಾಳೆ" ಎಂದು ರಂಗಮ್ಮ ರಾಧೆಯನ್ನು ಹೊಗಳಿದರು

"ಹೆಣ್ಣುಮಕ್ಕಳು ಹಾಗೇ ಇರಬೇಕು"

ಸುಮಿತ್ರ ರಾಧೆಯನ್ನು ಕರೆದುಕೊಂಡು ಹೋದಳು ರಾಜಮ್ಮ ಅವರಿಬ್ಬರ ಜತೆ ಸ್ವರ್ಣನನ್ನೂ ಕಳಿಸಿದಳು ಪಾತಕ್ಕನೂ ಅಡಿಗೆಗಿಡಲು ಹೋದರು

"ಈಗ ನನ್ನ ನೆನಪಾಯಿತೇನಮ್ಮ?"

"ಹಾಗಂದ್ರೇನೇ ರಾಜೂ - ಬರಬೇಕೂಂತ ನಾನೆಷ್ಟೋ ದಿನದಿಂದಾ ಪ್ರಯತ್ನಿಸಿದೆ. ಮನೆಯ ಮುಜುಗರದಲ್ಲಿ ಹೊರಡಲು ಅವಕಾಶವೇ ಆಗಲಿಲ್ಲ"

"ಉಮಾ, ಅಮ್ಮ ಎಲ್ಲಾ ಚೆನ್ನಾಗಿರುವರೇ?"

"ಹೂಂ ಉಮನಿಗೆ ಮದುವೆ ನಿಶ್ಚಯವಾಗಿದೆ ಮುಂಚಿತವಾಗಿಯೇ ನೀನು ಬರಬೇಕೆಂದು ಗುಂಡೂ ನನ್ನನ್ನ ಕಳಿಸಿದಳು ನೀನು ನಿಂತು ಕೈಲಾದ ಸಹಾಯ ಮಾಡಬೇಕು"

"ಸದ್ಯದ ಸ್ಥಿತಿಯಲ್ಲಿ ನಾನೇನು ಮಾಡಬಲ್ಲೆ ಹೇಳು?"

ರಂಗಮ್ಮನ ಅನುಮಾನ ಪರಿಹಾರವಾದಂತಾಯಿತು

"ಎಷ್ಟು ತಿಂಗಳೇ?"

"ನಾಲ್ಕಾಗಿರಬಹುದು"

"ಎರಡೊಂದು ಕೆಲಸವಾಯಿತು ಈಗ ನನ್ನ ಜತೆ ಬಂದುಬಿಡು ಬಾಣಂತನ ಮುಗಿಸಿಕೊಂಡೇ ಬರುವಿಯಂತೆ"

"ಮದುವೆ ಯಾವಾಗ?"

"ಇನ್ನೆರಡು ತಿಂಗಳೂ ಇಲ್ಲ"

"ಇವರನ್ನ ಕೇಳಿನೋಡು - ಕಳುಹಿಸಬಹುದು ನನಗೂ ಬಹಳ ಬೇಸರವಾಗಿದೆ"

ರಂಗಮ್ಮ ಪಾತಕ್ಕನಲ್ಲಿ ತಾವು ಬಂದ ಕೆಲಸವನ್ನು ತಿಳಿಸಿದರು

"ಗಂಡಿನ ಊರು ಯಾವುದು? ರಂಗಮ್ಮ"

"ಚನ್ನಪಟ್ಣ."

"ಕೆಲಸ ಇದೆಯೇ ?"

"ಏನೋ ಮಿಲ್ಲಿನಲ್ಲಿ ಕೆಲಸಾಂತಿದ್ರು - ಹುಡುಗ ಲಕ್ಷಣವಾಗಿದ್ದಾನೆ - ಸ್ವಲ್ಪ ಆಸ್ತಿಪಾಸ್ತೀನೂ ಇದೆ - ಉಂಡುಟ್ಟು ಸುಖವಾಗಿರಬಹುದು - ಅದಕ್ಕೆ ಏನು ಯೋಚನೆ ಇಲ್ಲಾನ್ನಿ "

"ಹೆಣ್ಣುಮಕ್ಕಳು ಕೈಮೇಲಾಗಿ ಬಾಳಿದರೆ ಹುಟ್ಟಿದ್ದಕ್ಕೂ ಸಾರ್ಥಕ ನೋಡಿ "

"ಅಷ್ಟಲ್ಲವೇ ಏನೂಂದ್ರೆ - ಕಷ್ಟವೋ ನಿಷ್ಠೂರವೋ ಅನುಭವಿಸಿ ನಾವು ದೊಡ್ಡದು ಮಾಡಿ ನಾಳೆ ಅವು ಕಣ್ಣೀರಲ್ಲಿ ಕೈತೊಳೆದರೆ ಯಾರು ನೋಡ ಬಹುದು ? - ಹೇಳಿ "

"ಹೌದಮ್ಮಾ - ಬಡತನವೋ, ಸಿರಿತನವೋ - ಪ್ರೀತಿ ವಿಶ್ವಾಸ ಇರ ಬೇಕು "

"ನೀವೂ ಖಂಡಿತಾ ಬರಬೇಕು ಪಾತಕ್ಕ - ಗುಂಡೂ ತುಂಬಾ ಹೇಳಿ ದಳು - ಕಾಗದ ಹಾಕಿಸುತ್ತಾಳೆ "

"ನನ್ನದೇನು ರಂಗಮ್ಮಾ ? - ವಯಸ್ಸಾದ ಮೇಲೆ ಪ್ರಯಾಣ ಮಾಡುವುದು ಅಂದರೆ ಕಷ್ಟ ಇಲ್ಲಿಂದಲೇ ಆಶೀರ್ವಾದ ಮಾಡುತ್ತೇನೆ "

"ಹಾಗೆಂದರಾಗುತ್ತದೆಯೇ ಪಾತಕ್ಕ ? - ನಮ್ಮ ಮನೆಯಲ್ಲೂ ಹಿರಿಯ ದಿಕ್ಕು ಯಾರಿದ್ದಾರೆ ? - ನೀವು ಬರದಿದ್ದಲ್ಲಿ ನಾನೇ ಬಂದು ಕರೆದುಕೊಂಡು ಹೋಗುತ್ತೇನೆ "

"ನನಗೇಕಮ್ಮ ಅಷ್ಟು ಮರ್ಯಾದೆ - ನೀವು ಇಷ್ಟು ವಿಶ್ವಾಸದಿಂದ ಕರೆಯುತ್ತಿರುವಾಗ ವೃಥಾ ಏಕೆ ನಿಮ್ಮ ಮನಸ್ಸು ಚಿಕ್ಕದು ಮಾಡಲಿ ? ಆಗಲಮ್ಮ - ಬರುತ್ತೇನೆ "

"ರಂಗಮ್ಮನ ಮುಖ ಅರಳಿತು.

"ನಾನು ನಾಳೆಯೋ ನಾಡಿದ್ದೋ ಹೊರಡುತ್ತೇನೆ ಪಾತಕ್ಕ "

"ಬಂದವರು ನಾಲ್ಕು ದಿನವೂ ಇರಲಿಲ್ಲವಲ್ಲಾ "

"ಅಲ್ಲಿ ಕೈತುಂಬಾ ಕೆಲಸ – ಗುಂಡೂ ಒಬ್ಬಳೇ ಒದ್ದಾಡುತ್ತಾಳೆ - "

"ನಿಜ."

"ಈಗ ರಾಜೂನ ಕಳಿಸಿಕೊಟ್ಟರೆ ಎಲ್ಲರೂ ಸಂತೋಷಪಡುತ್ತಾರೆ - "

"ಅದಕ್ಕೇನಮ್ಮ - ಅಗತ್ಯವಾಗಿ ಕರೆದುಕೊಂಡು ಹೋಗಿ"

"ನಿಮ್ಮ ಮಗನಿಗೂ ತಿಳಿಸಿಬಿಡಿ"

"ಆಗಲಿ"

ಗಂಡನಿಂದಲೂ ಅನುಮತಿ ಪಡೆದು ರಾಜಮ್ಮ ಹೊರಡಲು ಸಿದ್ಧಳಾದಳು ಸ್ವರ್ಣನಿಗೆ ಊರಿಗೆ ಹೋಗುವ ಸಂಭ್ರಮ ಸುಮಿತ್ರ ಬರುವುದಿಲ್ಲವಲ್ಲಾ ಎಂದು ಕೊರಗು

"ಅಮ್ಮಾ - ಚುನ್ನಿ ಬತ್ತಾಳಾ ?" ಎಂದು ಹಲವು ಬಾರಿ ತಾಯಿಯನ್ನು ಕೇಳಿದಳು - ಅಕ್ಕನ ಬಟ್ಟೆಗಳನ್ನು ತಂದು ತಾಯಿಯ ಮುಂದೆ ಗುಡ್ಡೆ ಹಾಕುತ್ತಿದ್ದಳು ರಾಜಮ್ಮ ಮಗಳ ಮಾತನ್ನು ಕೇಳದವಳಂತೆ ತನ್ನ ಕೆಲಸ ಮುಗಿಸುತ್ತಿದ್ದಳು

ತಾಯಿಯ ನಡತೆಯಿಂದ ಸ್ವರ್ಣನಿಗೆ ಸಮಾಧಾನವಾಗಲಿಲ್ಲ ಸುಮಿತ್ರೆಯನ್ನೇ ಕೇಳಿದಳು - "ನೀನೂ ಬತ್ತೀಯಾ ?"

"ಇಲ್ಲ ಚಿನ್ನಾ - ನೀನು ಅಮ್ಮನ ಜತೆ ಮೊದಲು ಹೋಗು - ನಾನು ಆಮೇಲೆ ಬರುತ್ತೇನೆ"

"ನೀನೂ ಬಾ" ಸ್ವರ್ಣ ಅಳುಮುಖ ಮಾಡಿದಳು

ಸುಮಿತ್ರೆ ತಂಗಿಯನ್ನು ಮುದ್ದಿಸಿ ಸಮಾಧಾನ ಮಾಡಿ, ಎರಡು ಕೈಗೂ ಪೆಪ್ಪರಮೆಂಟನ್ನು ತುಂಬಿದಳು ಸ್ವರ್ಣ ಗೆಲುವಾದಳು

ಪಾತಕ್ಕ ಸುಮಿತ್ರೆಯ ಕೈಲಿ ರಾಜಮ್ಮ, ರಾಧ, ಸ್ವರ್ಣ ಎಲ್ಲರಿಗೂ ಕುಂಕುಮ ಕೊಡಿಸಿದರು ರಾಧೆಗೆ ಇಟ್ಟಿದ್ದ ಕಣ ನೋಡಿ ರಂಗಮ್ಮ,

"ಇದೆಲ್ಲಾ ಯಾಕೇಂದ್ರೇ ?"

"ಇರಲಿ ಬಿಡಿ ಹೆಣ್ಣು ಮಗು ಬರುವುದೇ ಅಪರೂಪ" ಪಾತಕ್ಕ ಸಮಾಧಾನ ಹೇಳಿದರು

"ಹೋದೊಡನೆಯೇ ಕಾಗದ ಬರಿ" ನರಸಿಂಹಯ್ಯ ಹೆಂಡತಿಗೆ ಹೇಳಿದ

"ಬರುವುದು ಎಷ್ಟು ದಿನಕ್ಕೋ - ನೀವಾದರೂ ಆಗಾಗ್ಗೆ ಬರೀತೀರಿ ತಾನೇ ?"

ರಾಜಮ್ಮನ ಕಣ್ಣೊರೆಸುತ್ತಾ, "ಅಯ್ಯೋ ಹುಚ್ಚೀ – ಬರೆಯದೇ ಇರಲು ಸಾಧ್ಯವೇ ಹೇಳು ? ಹೇಗಿದ್ದರೂ ಮದುವೆಗೆ ಬರುತ್ತೇನಲ್ಲಾ"

"ಅದರೊಳಗೇ ಒಂದು ಸಲ ಬನ್ನಿ."

"ಆಗಲಿ."

ಮೊದಲೇ ಓಡಿಹೋಗಿ ಗಾಡಿಯಲ್ಲಿ ಕುಳಿತಿದ್ದ ಸ್ವರ್ಣ - ಅಜ್ಜಿ, ಸುಮಿತ್ರ ನರಸಿಂಹಯ್ಯ ಮೂವರಿಗೂ "ಬರ್ತೀನಿ" ಎಂದು ಕೈಮಾಡಿ ಕೂಗಿದಳು.

"ನನ್ನ ಬಿಟ್ಟು ಎಲ್ಲಿ ಹೋಗ್ತೀಯೇ? ನಾನೂ ಸ್ಟೇಷನಿಗೆ ಬರ್ತೀನಿ" ಎನ್ನುತ್ತಾ ನರಸಿಂಹಯ್ಯ ಗಾಡಿ ಹತ್ತಿದ.

ರಂಗಮ್ಮ ಪುನಃ ಪಾತಕ್ಕ, ಸುಮಿತ್ರೆಗೆ, "ಖಂಡಿತಾ ಮದುವೆಗೆ ಬರಬೇಕು" ಎಂದು ಆಹ್ವಾನವಿತ್ತರು. ಗಾಡಿ ಚಲಿಸಿತು.

# ೨೦

ರಾಜಮ್ಮನ ನಿಷ್ಕ್ರಮಣದಿಂದ ಸುಮಿತ್ರೆಗೆ ರೆಕ್ಕೆ ಬಂದಂತಾಯಿತು ಸಮಯ ದೊರೆತಾಗಲೆಲ್ಲಾ ಸುಮಿತ್ರೆ ಮಂಜುಳೆಯ ಮನೆಗೆ ಹೋಗಿಬರುತ್ತಿದ್ದಳು ಸುಮಿತ್ರೆಯ ಸಹವಾಸ ಮಂಜುಳೆ, ಶ್ರೀಕಂಠ ಇಬ್ಬರಿಗೂ ಆನಂದದಾಯಕವಾಗಿದ್ದಿತು ಸುಮಿತ್ರೆ ತನ್ನ ನಿರ್ಮಲ ಅಂತಃಕರಣದಿಂದ ಶ್ರೀಕಂಠನ ಮನವನ್ನು ಸೆರೆ ಹಿಡಿದಿದ್ದಳು ಯಾವ ಚಿತ್ರ ಬರೆದರೂ ಸುಮಿತ್ರೆಗೆ ತೋರಿಸಿ ಅವಳನ್ನು ಅಚ್ಚರಿಗೊಳಿಸಬೇಕೆಂದು ಅವನ ಹಂಬಲ ಶ್ರೀಕಂಠ ಒಂದೆರಡು ಚಿತ್ರಗಳನ್ನು ಸುಮಿತ್ರೆಗೆ ಬರೆದುಕೊಟ್ಟಿದ್ದ ಅದನ್ನು ಸುಮಿತ್ರ ಹೆಮ್ಮೆಯಿಂದ ಪಾತಕ್ಕ, ನರಸಿಂಹಯ್ಯ ಇಬ್ಬರಿಗೂ ತೋರಿಸಿದ್ದಳು ಮಗಳೆದುರು ಯಾವ ಮಾತನ್ನಾಡದಿದ್ದರೂ ನರಸಿಂಹಯ್ಯನಿಗೆ ಅನುಮಾನ ತಲೆಹಾಕಿತು

'ಸುಮಿತ್ರೆ ಮಂಜುಳೆಯ ಮನೆಗೆ ಹೋಗುತ್ತಿರುವಳೇ ?'

'ಬೇಡವೆಂದು ಹೇಗೆ ಹೇಳುವುದು ?'

'ತನ್ನ ಮಂಜುಳೆಯ ಸಂಬಂಧ ಸುಮಿಗೆ ತಿಳಿಯಬಾರದು' ನರಸಿಂಹಯ್ಯ ತನ್ನಲ್ಲೇ ನಿರ್ಧರಿಸಿದ

ಆ ದಿನವೂ ಬಂದುಬಿಟ್ಟಿತು. ಸುಮಿತ್ರೆ ಮಂಜುಳೆಯ ಮನೆಗೆ ಬರುವುದಕ್ಕೂ, ನರಸಿಂಹಯ್ಯ ಅಲ್ಲಿರುವುದಕ್ಕೂ ಹೊಂದಿಕೆಯಾಯಿತು ತಂದೆಯನ್ನು ಕಂಡ ಸುಮಿತ್ರ ಗರಬಡೆದವಳಂತೆ ನಿಂತುಬಿಟ್ಟಳು. ನರಸಿಂಹಯ್ಯ ಕ್ರೂರನೋಟ ಬೀರಿ ಸುಮ್ಮನಾದ. ಮಂಜುಳೆಯೇ ಕೇಳಿದಳು.

"ಏನಾದರೂ ಕಲಿಯುವುದಿತ್ತೇ ಸುಮಿತ್ರಾ "

"ಹೌದು ಮೇಡಂ. ಒಂದು ಲೆಕ್ಕ ಬರಲಿಲ್ಲ" ಸುಮಿತ್ರ ತನಗೆ ತೋರಿದ ಒಂದು ಸುಳ್ಳು ಹೇಳಿದಳು

"ಲೆಕ್ಕ ಹೇಳಿಸಿಕೊಳ್ಳಬೇಕಾದರೆ ಮನೆಗೆ ಬರಬೇಕೇನು ?" ನರಸಿಂಹಯ್ಯ ತನ್ನ ಅಸಮಾಧಾನ ಸೂಚಿಸಿದ

"ಬಂದರೇನಾಯಿತು ?" ಮಂಜುಳೆ ತಾತ್ಕಾಲಿಕ ಸಮಾಧಾನ ಹೇಳಿದಳು

"ನಾಳೆ ವಿರಾಮಕಾಲದಲ್ಲಿ ಬಂದು ನೋಡು ಸುಮಿತ್ರಾ ಸ್ಕೂಲಿನಲ್ಲೇ ಹೇಳಿಕೊಡುತ್ತೇನೆ "

ಸುಮಿತ್ರ ಸಪ್ಪೆಮೋರೆ ಹಾಕಿಕೊಂಡು ಹೊರಬಂದಳು ಅವಳಿಗೊಂದೇ ಸಮಸ್ಯೆ ತಂದೆ ಏಕೆ ಅಲ್ಲಿದ್ದರು ? ತಂದೆಯ ಪರಿಚಯವಿದ್ದರೂ ಮೇಡಂ ಯಾಕೆ ತನ್ನಲ್ಲಿ ಮರೆಮಾಚಿದರು ? ತಾನು ಬಂದುದಕ್ಕೆ ತಂದೆ ಏನು ಕಾರಣದಿಂದ ಕೋಪ ಮಾಡಿದರು ? ಮನೆಗೆ ಬಂದ ಮೇಲೆ ಬೈಯಬಹು ದೆಂದು ಸುಮಿತ್ರೆ ನಡುಗಿದಳು ಚಿಕ್ಕಮ್ಮನ ಹೊಡೆತಗಳು ಕೆಲವು ದಿನದಿಂದ ತಪ್ಪಿದ್ದಿತು ಇಂದು ಪುನಃ ಅವೇ ಪ್ರಕರಣ ಜರುಗಬಹುದೇ ?

ತನ್ನ ಅನುಮಾನದ ಕಂತೆಯನ್ನು ಸುಮಿತ್ರ ಅಜ್ಜಿಯೆದುರು ಬಿಚ್ಚಿದಳು

"ನಮ್ಮ ಮೇಡಂ ಮನೆಯಲ್ಲಿ ಅಣ್ಣಾ ಇದ್ದರು ಅಜ್ಜಿ "

"ಯಾರೇ ನಿಮ್ಮ ಮೇಡಂ "

"ಮಂಜುಳಾಂತ ಹೇಳಿರಲಿಲ್ಲವೇ ಅಜ್ಜಿ ? ಆ ದಿನ ಚಿತ್ರ ತೋರಿಸಿದೆ ನೆಲ್ಲಾ "

"ಈಶ್ವರನ ಚಿತ್ರ ಬರೆಸಿಕೊಂಡು ಬಾ ಅಂತ ಹೇಳಿದ್ದೆನಲ್ಲಾ ಅವರೇ."

"ಅವರ ಅಕ್ಕ "

"ನಿಮ್ಮಪ್ಪ ಅವರ ಮನೆಯಲ್ಲಿದ್ದನೇ ? ಮಂಜುಳಾಂತ ನೀನು ಹೇಳಿ ದಾಗ ಯಾರೋ ಏನೋ ಅಂತಿದ್ದೆ, ಈಗ ತಿಳಿಯಿತು "

"ನಿನಗೂ ಅವರು ಗೊತ್ತೇನಜ್ಜೀ."

"ಅವಳ ಮನೆಗೋ ನೀನು ಹೋಗುವುದು. ಚೆನ್ನಾಗಿದೆ."

"ಯಾಕಜ್ಜಿ ? – ಹೋಗಬಾರದೇನು ?"

"ಇನ್ನು ಮೇಲೆ ಸಿಕ್ಕಿದೆಡೆಯೆಲ್ಲಾ ಹೋಗಕೂಡದು ದಿನ ಬರುತ್ತಾ ನೀನೇನು ಆಡುವ ಮಗುವಲ್ಲ ತಿಳಿಯಿತೇ? ನಮ್ಮ ಕಾಲದಲ್ಲಿ ನಿನ್ನ ವಯಸ್ಸಿಗೇ ಮದುವೆ ಆಗುತ್ತಿದ್ದಿತು ಈಗೇನು ? ಕಾಲ ಕೆಟ್ಟುಹೋಯ್ತು ನಿಮ್ಮಪ್ಪನೂ ಯೋಚನೆಯಿಲ್ಲದೆ ತನ್ನ ಲೋಲಾಪ್ತಿಯಲ್ಲೇ ಇರುತ್ತಾನೆ"

"ಹೋಗಜ್ಜೀ ಮಾತೆತ್ತಿದರೆ ಮದುವೆ ಮದುವೆ ಅಂತ ಕೂಗಾಡ್ತೀ" ಸುಮಿತ್ರೆ ಮುನಿಸಿಕೊಂಡು ಪುಸ್ತಕ ಹಿಡಿದು ಕುಳಿತಳು

ನರಸಿಂಹಯ್ಯ ಮನೆಗೆ ಬಂದವನೇ ಸುಮಿತ್ರೆಯು ಬಳಿ ಕುಳಿತ ಭಯಗೊಂಡ ಸುಮಿತ್ರೆ ಹಿಡಿದ ಪುಸ್ತಕವನ್ನು ಮುಚ್ಚಿ ತಲೆಯೆತ್ತಿ ನೋಡಿದಳು ನರಸಿಂಹಯ್ಯನ ಕಣ್ಣುಗಳೆರಡು ಕ್ರೋಧದಿಂದ ಕಿಡಿ ಕಾರುತ್ತಿದ್ದವು

"ತಾಯಿಯಿಲ್ಲದ ಮಗುವೆಂದು ಮುದ್ದು ಮಾಡಿದರೆ ನೀನು ಹಮ್ಮೀರಿಯಾಗುತ್ತಿರುವೆಯೋನೇ ? ಹೇಳಿ ಕೇಳುವವರು ಯಾರೂ ನಿನಗಿಲ್ಲವೇ ?"

ಸುಮಿತ್ರೆ ಮೌನದಿಂದಿದ್ದಳು

"ಇನ್ನೊಂದು ಸಲ ಆ ಮನೆಯ ಹೊಸಲು ತುಳಿಯಬೇಕು - ನಿನಗೇನು ಮಾಡುತ್ತೇನೆ ತಿಳಿಯುತ್ತದೆ" ಎಂದು ಬೆದರಿಸಿದ

ಮಗನ ಕೂಗಾಟ ಕೇಳಿ ಪಾತಕ್ಕ ಬಂದು ಸುಮಿತ್ರೆಗೆ ಬುದ್ಧಿವಾದ ಹೇಳಿದರು

"ನೀನು ಮುಂದೆ ಬಾಳಿ ಬದುಕುವ ಹುಡುಗಿ ಸುಮಿತ್ರಾ ಸಿಕ್ಕಿದವರ ಮನೆಗೆ ನೀನು ಹೋಗುತ್ತಿದ್ದರೆ ನಾಳೆ ನಿನ್ನನ್ನು ಯಾರು ಮದುವೆಯಾಗುತ್ತಾರೆ ಹೇಳು ? ನಮ್ಮ ಮನೆತನದ ಮರ್ಯಾದೆ ಏನಾಗುತ್ತದೆ ?"

"ಅವರು ನಮ್ಮ ಮೇಡಂ" ಸುಮಿತ್ರೆ ನಿಧಾನವಾಗಿ ಮಾತು ಜೋಡಿಸಿದಳು

"ಅವರ ಮನೆಗೇ ಹೋಗಕೊಡದೆಂದು ನಾನು ಹೇಳುತ್ತಿರುವುದು" ನರಸಿಂಹಯ್ಯ ಅಕ್ಷರಗಳನ್ನು ಒತ್ತಿಯೊತ್ತಿ ಹೇಳಿ ತನ್ನ ಕೊಠಡಿಗೆ ಹೋದ

ಸುಮಿತ್ರೆ ತೇವವಾದ ಕಣ್ಣೊರಸಿಕೊಂಡು ಕಷ್ಟಪಟ್ಟು ಓದುವುದರಲ್ಲಿ ಮಗ್ನಳಾದಳು.

ಸುಮಿತ್ರೆ ತಮ್ಮ ಮನೆಗೆ ಬರುವುದನ್ನು ನಿಲ್ಲಿಸಿದಾಗ ಮಂಜುಳಾ ಶ್ರೀಕಂಠ ಇಬ್ಬರೂ ನೊಂದುಕೊಂಡರು

"ಇವರೇ ಎಲ್ಲೋ ಅವಳಿಗೆ ತಡೆಹಾಕಿರಬಹುದು ಅಕ್ಕಾ" ಎಂದು ಶ್ರೀಕಂಠ ತನ್ನ ಅನುಮಾನ ಬಿತ್ತಿದ

"ಹೋಗಲಿ ಬಿಡು ಹುಡುಗಿಯ ಹಿತ ಮುಖ್ಯ ನಮ್ಮಿಂದಾಗಿ ಆ ಹುಡುಗಿ ಯಾಕೆ ವಿನಾಕಾರಣ ಶಿಕ್ಷೆ ಅನುಭವಿಸಬೇಕು?" ಮಂಜುಳೆ ಸಮಾಧಾನ ಹೇಳಿದರೂ ಮನದೊಳಗೇ ನರಸಿಂಹಯ್ಯನ ಬಗ್ಗೆ ಕ್ರೋಧ ತಳೆಯದಿರಲಿಲ್ಲ

ಸುಮಿತ್ರೆಯ ನೆನಪು ಶ್ರೀಕಂಠನಿಗೆ ಮಾಗದ ಗಾಯವಾಗಿ ಪರಿಣಮಿಸಿತು ಮಾತುಮಾತಿಗೂ ಅವನು ಸುಮಿತ್ರೆಯ ಸುದ್ದಿ ಎತ್ತುವುದನ್ನು ಕಂಡು ಮಂಜುಳಾ,

"ಸುಮಿತ್ರೆಯನ್ನು ಕಂಡರೆ ನಿನಗೆಷ್ಟು ವಿಶ್ವಾಸವೋ? ಅವಳನ್ನೇನಾದರೂ ಮದುವೆಯಾಗಬೇಕೆಂದಿರುವೆಯೇನು? ಹೇಳು ನೋಡೋಣ" ಎಂದು ಚೇಷ್ಟೆ ಮಾಡಿದಳು

"ಹೋಗಕ್ಕಾ ನಿನ್ನ ಹತ್ತಿರ ಏನು ಮಾತಾಡಿದರೂ ಕಷ್ಟ ಇಲ್ಲದ ಅಪಾರ್ಥ ಕಲ್ಪಿಸುತ್ತೀಯೆ"

ಶ್ರೀಕಂಠನ ಹುಸಿ ಕೋಪ ಕಂಡು ಮಂಜುಳಾ ನಕ್ಕು ಸುಮ್ಮನಾದಳು

ಸ್ಕೂಲಿನಲ್ಲಿ ಮಂಜುಳೆಯನ್ನು ಕಂಡಾಗ ಸುಮಿತ್ರೆ ತನ್ನ ಹೃದಯ ತೋಡಿಕೊಂಡಳು

"ನಿಮ್ಮ ಮನೆಗೆ ಬರುವುದಿಲ್ಲವೆಂದು ಏನೂ ತಿಳಿದುಕೊಳ್ಳಬೇಡಿ ಮೇಡಂ ಮನೆಯಲ್ಲಿ ಪುರುಸೊತ್ತಾಗುವುದಿಲ್ಲ ಚಿಕ್ಕಮ್ಮನೂ ಮನೆಯಲ್ಲಿರುವುದರಿಂದ ಕೆಲಸವೆಲ್ಲ ನನ್ನ ಪಾಲಿಗೇ ಬೀಳುತ್ತದೆ"

ಸುಮಿತ್ರೆಯ ಸುಳ್ಳಿನಿಂದ ಮಂಜುಳೆ ಅವಾಕ್ಕಾದರೂ ತೋರಗೊಡದೆ, "ನೀನು ಮಾಡುತ್ತಿರುವುದು ಸರಿ ಸುಮಿತ್ರಾ ಹೆಣ್ಣುಮಕ್ಕಳು ಹೀಗೇ ಇರಬೇಕು" ಎಂದು ತನ್ನ ಮೆಚ್ಚುಗೆ ಸೂಚಿಸಿದಳು

ಮಂಜುಳೆಯ ಮನಸ್ಸು ಕಹಿಯಾಗದಿರುವುದನ್ನು ಕಂಡು ಸುಮಿತ್ರೆ ಹಿಗ್ಗಿದಳು

ನರಸಿಂಹಯ್ಯ ಹಾಸನಕ್ಕೆ ಆಗಿಂದಾಗ್ಗೆ ಹೋಗಿ ಬರುತ್ತಿರುವುದನ್ನು ನೋಡಿದ ಪಾತಕ್ಕ, "ಈಗೇನೋ ಹೆಂಡತಿಯೆಂದರೆ ಎಲ್ಲೂ ಇಲ್ಲದ ವಿಶ್ವಾಸಬಂದುಬಿಟ್ಟದೆ ಇದೆಷ್ಟು ದಿನವೋ ನೋಡಬೇಕು" ಎಂದು ರಾಗವೆಳೆದರು

## ೨೧

"ದಯಮಾಡಿಸಿ ಊರಿನಲ್ಲಿ ಎಲ್ಲರೂ ಕ್ಷೇಮವಷ್ಟೆ ?" ನರಸಿಂಹಯ್ಯ, ನಂಜುಂಡಯ್ಯ ಗುಂಡಮ್ಮನವರನ್ನು ಸ್ವಾಗತಿಸಿದ

"ದೇವರ ದಯೆಯಿಂದ ಎಲ್ಲರೂ ಕ್ಷೇಮವಾಗಿದ್ದಾರೆ" ಚೀಲವನ್ನು ಒಂದು ಕಡೆ ಇಟ್ಟು ನಂಜುಂಡಯ್ಯನವರು ಕುಳಿತರು

'ಮದುವೆ ಅಂದರೆ ಸುಮ್ಮನಾಗುತ್ತದೆಯೇ ? ನೂರೆಂಟು ಕೆಲಸ ಜವಳಿ ತೆಗೆದುಕೊಂಡು ಹೋದರೆ ಅರ್ಧ ಕೆಲಸ ಮುಗಿದಂತಾಗುತ್ತವೆ"

"ಬನ್ನಿ ಗುಂಡಮ್ಮ ಏನಪ್ಪಾ ಆರೋಗ್ಯವೇ ?" ಪಾತಕ್ಕ ಬೀಗರನ್ನು ವಿಚಾರಿಸಿಕೊಂಡರು

"ನಿಮ್ಮ ಆಶೀರ್ವಾದದಿಂದ ಇಷ್ಟರಮಟ್ಟಿಗೆ ನೋಡಿ ನೀವು ಚೆನ್ನಾಗಿರುವಿರಾ ?"

"ನನ್ನದೇನಪ್ಪಾ ವಯಸ್ಸಾದಮೇಲೆ ಇದ್ದೇ ಇರುತ್ತೆ ಅದೆಲ್ಲಾ ಯಾವ ಲೆಕ್ಕ ಹೇಳಿ"

ಗುಂಡಮ್ಮ ತಾವು ತಂದಿದ್ದ ಹೂವು ಹಣ್ಣನ್ನು ತಟ್ಟೆಯಲ್ಲಿಟ್ಟರು ಪಾತಕ್ಕ ಅವರನ್ನು ಅಡುಗೆಯ ಕೋಣೆಗೇ ಕರೆದೊಯ್ದರು

"ಸುಮಿತ್ರಾ ಎಲ್ಲಿ ಕಾಣಿಸುವುದಿಲ್ಲ ?"

"ಸ್ಕೂಲಿಗೆ ಹೋಗಿದ್ದಾಳೆ ರಾಜೂ ಹುಷಾರಾಗಿರುವಳೇ ಗುಂಡಮ್ಮ?"

"ಹೂ ಅಲ್ಲೇ ಆಸ್ಪತ್ರೆಯಲ್ಲಿ ತೋರಿಸುತ್ತಿದ್ದಾಳೆ ಈಗ ಬಂದಿರುವ ಡಾಕ್ಟರು ಬಹಳ ಒಳ್ಳೆಯವಳು, ನಿಧಾನಿ ಆದ್ದರಿಂದ ಏನೂ ಯೋಚನೆಯಿಲ್ಲಾನ್ನಿ ಸ್ವರ್ಣನೇ ಈಗ ಸ್ವಲ್ಪ ಕಂಗೆಟ್ಟಿರುವಳು ದಿನವೂ ಒಂದು

ಬಾರಿ ಅಜ್ಜಿ, ಅಣ್ಣ, ಸುಮಿಯು ಮಾತಾಡದಿದ್ದರೆ ಅವಳಿಗೆ ತೃಪ್ತಿಯೇ ಇರುವುದಿಲ್ಲ ನೋಡಿ"

"ನಿಮ್ಮ ಜೊತೆಯಲ್ಲಿ ಕರೆದುಕೊಂಡು ಬರಬೇಕಾಗಿದ್ದಿತು"

"ಮೊದಲೇ ಕೆಮ್ಮು ನೆಗಡಿ ಪ್ರಯಾಣದ ಬಳಲಿಕೆ ಬೇರೆ ಸೇರಿ ಮದುವೆಯ ಮುಂಚೆ ಮಲಗಿದರೆ ಏನು ಗತಿ ಹೇಳಿ?"

"ಅಂದಹಾಗೆ ಲಗ್ನ ನಿಷ್ಕರ್ಷೆಯಾಯಿತೇ?'

ನಾಳೆ ಶುಕ್ರವಾರಕ್ಕೆ ಸರಿಯಾಗಿ ಹದಿನೈದು ದಿನಕ್ಕೆ ಲಗ್ನ"

"ಇದೊಂದು ಮದುವೆಯಾದರೆ ಗೆದ್ದಿರಿ"

"ಹೆಣ್ಣು ಹೆತ್ತವರು ಆ ಮಾತು ಹೇಳಲು ಸಾಧ್ಯವೇ ಪಾತಕ್ಕ? ಗೀತೆಯೂ ವಯಸ್ಸಿಗೆ ಬಂದಿದ್ದಾಳಲ್ಲ"

ಪಾತಕ್ಕ ಎಲ್ಲರಿಗೂ ಕಾಫಿ ಕೊಟ್ಟರು

"ಊಟ ಮಾಡುವ ವೇಳೆ ಯಾಕೆ ತೊಂದರೆತೆಗೆದುಕೊಂಡಿರಿ ಪಾತಕ್ಕ" ಗುಂಡಮ್ಮ ಪಾತಕ್ಕನಿಗೆ ಉಪಚಾರ ಹೇಳಿದರು

"ಪರವಾಗಿಲ್ಲ ತೆಗೆದುಕೊಳ್ಳಿ ಊಟ ಒಂದು ಕ್ಷಣ ನಿಧಾನವಾಗಿ ಮಾಡಿದರಾಯಿತು" ಪಾತಕ್ಕ ಅಕ್ಕಿ ತೊಳೆದಿಟ್ಟು ಒಂದು ಮದುವೆಯ ವಿಷಯ ವಿವರವಾಗಿ ತಿಳಿಯಲು ಕುಳಿತರು

"ಹುಡುಗಿಗೆ ಏನಾದರೂ ಒಡವೆ ಇಡುತ್ತೀರಾ?"

"ಎರಡೆಳೆ ಸರ ಎರಡು ಜತೆ ಬಳೆ ಇನ್ನೇನೂ ಇಲ್ಲ ಪಾತಕ್ಕ"

"ಗಂಡಿನ ಕಡೆಯವರು ಅನುಕೂಲವಾಗಿರುವರಂತಲ್ಲ ಏನಾದರೂ ಇಡಬಹುದು"

"ಅದೇನೋ ನನಗೆ ತಿಳಿಯದು ಅವರ ಪದಾರ್ಥ ಬೇಕಾದರೆ ಇಡಬಹುದು ಇಡದೆಯೂ ಇರಬಹುದು"

ಪಾತಕ್ಕ ಸುಮ್ಮನಾದರು

"ನಮ್ಮ ಸುಮಿತ್ರೆಗೂ ಅನುಕೂಲವಾದ ಗಂಡು ಸಿಕ್ಕಿದರೆ ಮದುವೆ ಮಾಡಬೇಕೆಂದಿದ್ದೇವೆ ನಿಮ್ಮ ಗುರುತಿನದು ಯಾವುದಾದರೂ ಇದೆಯೇ?"

"ಇಷ್ಟು ಬೇಗ?"

"ನನ್ನ ಕಣ್ಣೆದುರಿಗೇ ಆ ಮಗುವೂ ದಡ ಕಂಡರೆ ಯೋಚನೆ ಇರುವುದಿಲ್ಲ"

"ಆಗಲಿ ಪಾತಕ್ಕ ವಿಚಾರಿಸಿ ತಿಳಿಸುತ್ತೇನೆ"

ಸುಮಿತ್ರೆಯೂ ಊಟದ ವೇಳೆಗೆ ಮನೆಗೆ ಬಂದಳು ಗುಂಡಮ್ಮ ಆಶ್ಚರ್ಯದಿಂದ,

"ಸುಮಿತ್ರೆ ದೊಡ್ಡ ಹೆಂಗಸಾಗುತ್ತಾಳೆ" ಎಂದು ಅಭಿಪ್ರಾಯ ಸೂಚಿಸಿದರು

"ಹೂ ತಾಯಿಯಂತೇ ಬೆಳವಣಿಗೆ ಸ್ವಲ್ಪ ಜಾಸ್ತಿ"

ಸುಮಿತ್ರೆ ಎಲ್ಲರಿಗೂ ಎಲೆ ಹಾಕಿದಳು ಊಟಕ್ಕೆ ಕುಳಿತುಕೊಂಡಾಗ ಗುಂಡಮ್ಮ

"ನಮ್ಮ ಜತೆ ಪೇಟೆಗೆ ಬರುವೆಯಾ ಸುಮಿತ್ರಾ" ಎಂದು ಕೇಳಿದರು

"ರಜಾ ಕೇಳಿಲ್ಲ" ಎಂದು ಸುಮಿತ್ರೆ ಅನುಮಾನಿಸಿದಳು

"ಹೋಗಿ ಬಾ ನೀನೂ ಎಲ್ಲಿ ಹೋಗಬೇಕು? ಇವತ್ತೊಂದು ದಿನ ಸ್ಕೂಲು ತಪ್ಪಿದರೇನಾಯಿತು?" ಪಾತಕ್ಕನ ಮಾತಿನಿಂದ ಸುಮಿತ್ರೆಯ ಮುಖವರಳಿತು

ಊಟ ಮುಗಿಸಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡಮೇಲೆ ನಂಜುಂಡಯ್ಯ, ನರಸಿಂಹಯ್ಯ, ಗುಂಡಮ್ಮ, ಸುಮಿತ್ರೆ ಪೇಟೆಗೆ ಹೋಗಿ ಬಂದರು ಅವರು ಬರುವುದರಲ್ಲಿ ಪಾತಕ್ಕ ರಾತ್ರಿಯಡಿಗೆ ಮುಗಿಸಿ ಕುಳಿತಿದ್ದರು ಅವರೇ ಎಲ್ಲಾ ಕೆಲಸಗಳನ್ನೂ ಮಾಡಿದುದಕ್ಕೆ ಗುಂಡಮ್ಮನಿಗೆ ಸಂಕೋಚವಾಯಿತು

"ಪಾತಕ್ಕ ವಯಸ್ಸಾದ ನಿಮಗೆ ನಾವು ಮಾಡುವುದು ಬಿಟ್ಟು ನಿಮ್ಮ ಕೈಲೇ ಉಪಚಾರ ಮಾಡಿಸಿಕೊಳ್ಳಲು ನಾಚಿಕೆಯಾಗುತ್ತಿದೆ"

"ನಿಮ್ಮ ಮನೆಗೆ ಬಂದಾಗ ಒಂದು ಕೆಲಸಕ್ಕೂ ಹೋಗುವುದಿಲ್ಲ ಸುಮ್ಮನಿರಿ. ಹದಿನೈದು ದಿನವಿದ್ದು ರಾಜೋಪಚಾರ ಮಾಡಿಸಿಕೊಂಡು ಬರುತ್ತೇನೆ"

"ಹೇಳಿದಂತೇ ನೀವು ಮಾಡಿದರೆ ನಿಜವಾಗಿಯೂ ಸಂತೋಷ"

ಗುಂಡಮ್ಮ ತಾವು ತಂದಿದ್ದ ಬಟ್ಟೆ, ಸೀರೆಗಳನ್ನು ಪಾತಕ್ಕನಿಗೆ ತೋರಿಸಿದರು ಎಲ್ಲವನ್ನೂ ನೋಡಿ,

"ನನಗೇನು ತಿಳಿಯುತ್ತದೆ ಗುಂಡಮ್ಮ, ನಾನೊಂದು ಮುದಿಗೊರಡು"

"ಹಿರಿಯರು ನೀವು ಸಂತೋಷಪಡಬೇಕು ಪಾತಕ್ಕ"

"ಈ ಕಾಲದಲ್ಲೂ ನಿಮ್ಮಂತಿರುವುದು ಅಪರೂಪ ಗುಂಡಮ್ಮ" ಪಾತಕ್ಕ ತಮ್ಮ ಮೆಚ್ಚುಗೆ ಸೂಚಿಸಿದರು

ನಂಜುಂಡಯ್ಯನವರು ಬಂದು, "ಈಗಲೇ ಶ್ರೀನಿವಾಸಯ್ಯನವರನ್ನೂ ನೋಡಿ ಬಂದರೆ ಬೆಳಗ್ಗೆ ಗಾಡಿಗೆ ಹೊರಡಬಹುದು" ಎಂದು ತಮ್ಮ ಕಾರ್ಯಕ್ರಮ ತಿಳಿಸಿದರು

"ಸಂಜೆಯೆಲ್ಲಾ ಅಲೆದು ಸುಸ್ತಾಗಿರುವಿರಿ ಬೆಳಗ್ಗೆ ಅಲ್ಲಿಗೆ ಹೋಗಿ ಊಟ ಮುಗಿಸಿ ಮಧ್ಯಾಹ್ನ ಹೊರಟರಾಯಿತು ಒಪ್ಪೊತ್ತಿನಲ್ಲಿ ಏನು ಕಳೆಳ್ಳಿ ಹೋಗುವುದು ?"

"ನೀವು ಹೇಳಿದ ಮೇಲೆ ಮುಂದೆ ಮಾತಾಡುವುದೇನಿದೆ ? ಹಾಗೇ ಆಗಲಿ" ನಂಜುಂಡಯ್ಯ ನಗುತ್ತಾ ಹೇಳಿದರು

ತಮ್ಮ ಮಾತಿಗೆ ಬೆಲೆ ಕೊಟ್ಟದುದರಿಂದ ಪಾತಕ್ಕನಿಗೆ ಸಂತೋಷವಾಯಿತು

"ನಾವು ನಿಮ್ಮ ಮಾತಿನಂತೆ ನಡೆಯುವುದು ಹೆಚ್ಚಲ್ಲ ಪಾತಕ್ಕ ನಾಳೆ ನಮ್ಮ ಜತೆ ನೀವೂ ಹೊರಟು ಬರಬೇಕು" ಗುಂಡಮ್ಮ ಪಾತಕ್ಕನಿಗ ಆಹ್ವಾನವಿತ್ತರು

"ನಾನು ಬಂದು ಏನುಮಾಡುವ ಹಾಗಿದ್ದೇನೆ ಗುಂಡಮ್ಮ ಊರಿಗೆ ಮುಂಚೆ ಯಾಕೆ ಹೇಳಿ ?"

"ಹಾಗಂದ್ರೇನು ಪಾತಕ್ಕ ಹಿರಿಯರು ಮನೆಯಲ್ಲಿದ್ದ ಸಮಾನ ಬರುತ್ತದೆಯೇ ?"

"ಸುಮಿತ್ರೆಗೂ ಸ್ಕೂಲು ತಪ್ಪಿಹೋಗುತ್ತದೆ ಅವನಿಗೂ ತೊಂದರೆ"

"ನೀವು ಈರೀತಿ ಕಾರಣ ತಿಳಿಸಿದರೆ ನಾವೇನು ಹೇಳುವುದಕ್ಕಾಗುತ್ತದೆ ಹೇಳಿ."

"ಕಾರಣವಲ್ಲ ಗುಂಡಮ್ಮ ಇರುವ ವಿಷಯ ತಿಳಿಸಿದೆ."

"ಬರಿಯ ಬಾಯುಪಚಾರದಲ್ಲೇ ಮುಗಿಸುವೆಯೋ ಊಟಗೀಟ ಹಾಕುತ್ತೀಯೋ? ಹೇಗಪ್ಪಾ, ಆಗಲೇ ಒಂಭತ್ತು ಗಂಟೆಯಾಯಿತು" ನರಸಿಂಹಯ್ಯ ತಾಯಿಯನ್ನೆಚ್ಚರಿಸಿದ

"ನೀನೇ ಮಾತಾಡುತ್ತಾ ಕುಳಿತಿದ್ದರೆ ನಾನೇನು ಮಾಡಲೋ?" ಎನ್ನುತ್ತಾ ಪಾತಕ್ಕ ಎದ್ದು, "ಲೇ ಸುಮಿ ಎಲೆ ಹಾಕೇ" ಎಂದು ಸುಮಿತ್ರೆಗೆ ಹೇಳಿದರು

"ನನಗಂತೂ ಸುಖಾಪ್ನ ತಿಂದುದೇ ಅರಗಿಲ್ಲ ಪಾತಕ್ಕ ಉಪಚಾರ ಮಾಡಿ ತುಂಬಾ ಒತ್ತಾಯಪಟ್ಟರು" ನಂಜುಂಡಯ್ಯ ತೇಗಿ ತನ್ನ ತೃಪ್ತಿ ಸೂಚಿಸಿದರು

"ನೀವಿಬ್ಬರಿಗೂ ತಿಂದದ್ದಾಯಿತು ಬಿಡಿ" ಎನ್ನುತ್ತಾ ಗುಂಡಮ್ಮ ಒಳಗೆ ಹೋಗಿ ಸುಮಿತ್ರೆಯ ಕೆಲಸವನ್ನು ತಾವೇ ನಿರ್ವಹಿಸಿದರು

ಅವರು ಕೆಲಸ ಮಾಡುತ್ತಿರುವುದನ್ನು ಕಂಡು ನರಸಿಂಹಯ್ಯ ಮಗಳನ್ನು ಆಕ್ಷೇಪಿಸಿದ "ಮೂರು ಹೊತ್ತೂ ಪುಸ್ತಕ ಹಿಡಿದು ಕೂತಿರುವುದಾಯಿತು ಅದೇನು ಓದುತ್ತೀಯೋ ದೇವರೇ ಬಲ್ಲ ಮನೆಗೆ ನಾಲ್ಕು ಜನ ಬಂದಾಗಲಾದರೂ ಸುಟಿಯಾಗಿ ಓಡಾಡಬಾರದೇನೇ?"

"ನಾವೇನು ಹೊರಗಿನವರೇ?" ಗುಂಡಮ್ಮ ಸುಮಿತ್ರೆಯ ಪಕ್ಷ ಹಿಡಿದು ಮಾತನಾಡಿದರು

ಮರುದಿನ ಬೆಳಗ್ಗೆ ಶ್ರೀನಿವಾಸಯ್ಯನವರ ಮನೆಗೆ ಹೋದಾಗ, ಹೊರ ಹೊರಟಿದ್ದ ಶ್ರೀನಿವಾಸಯ್ಯ ಆಶ್ಚರ್ಯದಿಂದ,

"ಒಳ್ಳೆಯ ಪುಣ್ಯಾತ್ಮನಯ್ಯ ನೀನು ಊರಿಗೆ ಬರುವವನು ಒಂದು ಕಾಗದವನ್ನಾದರೂ ಹಾಕಬಾರದೇ? ನೀನು ಐದು ನಿಮಿಷ ತಡವಾಗಿ ಬಂದಿದ್ದರ ನಾನು ಊರಿಗೆ ಹೊರಟುಬಿಡುತ್ತಿದ್ದೆ" ಎಂದು ಆಹ್ವಾನಿಸಿ,

"ಲೇ ಯಾರು ಬಂದಿರುವರು ನೋಡು ಬಾ" ಎಂದು ಹೆಂಡತಿಯನ್ನು ಕೂಗಿದರು

"ನಿನ್ನೆಯೇ ಬಂದೆನಪ್ಪಾ ಈ ಕಡೆ ಬರಲಾಗಲಿಲ್ಲ ಅಷ್ಟೆ"

"ನೀನು ಮೊದಲಿನ ಹಾಗಿಲ್ಲ ನಂಜುಂಡ ಐಶ್ವರ್ಯದ ಮದ ಹಾಗಿದೆ. ನೀನೇನು ಮಾಡುತ್ತೀ ಹೇಳು"

"ವಿಷಯ ತಿಳಿಯದೆ ಸುಮ್ಮನೆ ಆಕ್ಷೇಪಿಸಬೇಡ"

"ಏನಪ್ಪಾ ಅಂತಹ ವಿಷಯ"

"ನನ್ನ ಮಗಳ ಮದುವೆಗೆ ಇನ್ನು ಇಪ್ಪತ್ತು ದಿನಗಳೂ ಇಲ್ಲ ಪುರುಸೊತ್ತು ಎಲ್ಲಿಂದ ತರಲಿ ಹೇಳು ಹೇಗೂ ಬಂದಿರುವೆವಲ್ಲಾ ನಿಮಗೂ ಆಹ್ವಾನ ಕೊಟ್ಟು ಹೋಗುವುದೆಂದು ಬಂದೆವು"

ತಮ್ಮ ಹೆಂಡತಿ ಬಾರದಿರುವುದನ್ನು ಕಂಡು ಶ್ರೀನಿವಾಸಯ್ಯ,

"ಕೂಗಿದುದು ಕೇಳಿಸಲಿಲ್ಲವೇನೋ ಲೇ" ಎಂದು ಕಿರುಚಿದರು

"ಕೆಲಸ ಮಾಡುತ್ತಿರಬಹುದು ನಾನೇ ಹೋಗುತ್ತೇನೆ ಬಿಡಿ" ಎಂದುಕೊಂಡು ಗುಂಡಮ್ಮ ಒಳಗೆ ಪ್ರವೇಶಿಸಿದರು

ಹಿತ್ತಲಿನಲ್ಲಿ ಬಟ್ಟೆ ಒಗೆಯುತ್ತಿದ್ದ ಸುಬ್ಬಮ್ಮನವರು ಗಂಡನ ಕೂಗು ಕೇಳಿ, ಒಂದೇ ಉಸಿರಿನಲ್ಲಿ ಓಡಿಬಂದರು ಗುಂಡಮ್ಮನವರನ್ನು ನೋಡಿ ಆವಾಕ್ಕಾಗಿ, "ಬನ್ನಿ ಗುಂಡಮ್ಮ ಯಾಕೋ ಕೂಗುತ್ತಾರೆಂದುಕೊಂಡು ತಡಮಾಡಿದೆ ಬಂದು ಬಹಳ ಹೊತ್ತಾಯಿತೆ?"

"ಇಲ್ಲಾಂದ್ರೆ ಈಗತಾನೇ ಬಂದೆವು ಮನೆಯಲ್ಲಿ ಎಲ್ಲರೂ ಕ್ಷೇಮವೇ?"

"ದೇವರಿಗೆ ನನ್ನ ಮೇಲಿನ್ನೂ ಕರುಣೆ ಬಂದಿಲ್ಲ ಗುಂಡಮ್ಮ" ಸುಬ್ಬಮ್ಮ ಕಣ್ಣಲ್ಲಿ ನೀರು ಹಾಕಿದರು

"ಲಾಡು ಊಟ ನಮಗೆ ಕಾದಿದೆ ಕಣೇ" ಎನ್ನುತ್ತಾ ಒಳಗೆ ಬಂದ ಶ್ರೀನಿವಾಸಯ್ಯ ಹೆಂಡತಿ ಕಣ್ಣೊರಸಿಕೊಳ್ಳುತ್ತಿರುವುದನ್ನು ನೋಡಿ,

"ಇದೀಗ ಚೆನ್ನಾಗಿದೆ ಬಂದವರನ್ನು ಚೆನ್ನಾಗಿ ವಿಚಾರಿಸಿಕೊಳ್ಳುತ್ತಿರುವೆ ನಿನ್ನನ್ನು ನೋಡಿ ಇತರರು ಪಾಠ ಕಲಿಯಬೇಕು ಏಳು, ಎದ್ದು ಕಾಫಿಗೀಫಿ ಮಾಡಿಕೊಡು"

"ಹಿತವಾಗಿರುವರೊಡನೆ ಹೃದಯ ತೋಡಿಕೊಳ್ಳಬೇಕೆನಿಸುತ್ತದೇಂದ್ರೆ ನಿಮಗೇನು ಗೊತ್ತು ಹಡೆದೊಡಲ ಉರಿ."

"ಅವರವರ ಕರ್ಮಫಲ ಅವರೇ ಉಣ್ಣಬೇಕು" ಎಂದುಕೊಂಡು ಶ್ರೀನಿವಾಸಯ್ಯ ಹೊರಗೆ ಬಂದರು

ಸುಬ್ಬಮ್ಮ ಕಾಫಿಗೆ ನೀರಿಡುತ್ತಾ, "ಈ ದಿನ ಇಲ್ಲೇ ಉಳಿಯಿರಿ ಗುಂಡಮ್ಮ ನಿಮ್ಮಲ್ಲಿ ನನ್ನ ಕಷ್ಟಸುಖ ಹೇಳಿಕೊಳ್ಳಬೇಕೆನಿಸುತ್ತದೆ "

"ಏನು ವಿಷಯ ಸುಬ್ಬಮ್ಮ?"

"ನಿಮಗೆ ಗೊತ್ತೇ ಇಲ್ಲವೇ ? ನಮ್ಮ ವಿಜಯಾ ಹೋದಳು "

"ಹಾಂ ಏನಾಗಿತ್ತು ?"

"ಬಸುರಿ ಹುಡುಗೀಗೆ ಕರಿತಂಪೆವು ಅದೇನೋ ಡಬ್ಬಲ್ ನ್ಯುಮೋನಿಯಾಂತೆ ಅದಕ್ಕೆ ಬಲಿಯಾದಳು ಇದ್ದ ಒಬ್ಬ ಮಗಳನ್ನೂ ನುಂಗಿ ನಾನು ಬದುಕಿದ್ದೇನೆ ನೋಡಿ "

'ಬಾಳಿ ಬದುಕುವ ಹುಡುಗಿ ಪಾಪ ತುಂಬಾ ಅನ್ಯಾಯ "

"ನನಗಂತೂ ಜೀವನವೇ ಬೇಸರವಾಗಿದೆ ಯಾತಕ್ಕಾಗಿ ಬಾಳಬೇಕು ಹೇಳಿ "

"ಛೀ ಕಷ್ಟ ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತವೆಯೋ ಹೇಳಿ ? ತಾಳ್ಮೆಯಿಂದ ಸೈರಿಸಿಕೊಳ್ಳಬೇಕು ಸುಬ್ಬಮ್ಮ ನಿಮ್ಮ ಮಗ ಈಗೆಲ್ಲಿರುವರು ?"

"ಅವನೂ ಚನ್ನಪಟ್ಣಕ್ಕೆ ಬರುವ ಸುದ್ದಿ ಇದೆ ಬಂದರೆ ಸ್ವಲ್ಪ ವಾದರೂ ಪಾಪಿ ಹತ್ತಿರವಲ್ಲೇ ಇದ್ದಂತಾಗುತ್ತದೆ "

"ನಮ್ಮ ಉಮೆಯ ಗಂಡನೂ ಅದೇ ಊರಿನಲ್ಲಿದ್ದಾರೆ ಸುಬ್ಬಮ್ಮ"

"ಏನು ? ಉಮೆಗೆ ಮದುವೆಯಾಯಿತೇ ?"

"ಇನ್ನೂ ಇಲ್ಲ ನಿಮ್ಮನ್ನು ಕರೆಯದೇ ಮದುವೆ ಮಾಡಲು ಸಾಧ್ಯವೇ ಹೇಳಿ ? ಲಗ್ನ ನಾಳೆ ಶುಕ್ರವಾರಕ್ಕೆ ಹದಿನೈದು ದಿನವಿದೆ "

"ನನ್ನ ಬುದ್ಧಿಗೇನೋ ಮಂಕು ಕವಿದಿದೆ ಗುಂಡಮ್ಮ ಬಂದವರ ವಿಷಯ ಕೇಳದೆ ನನ್ನ ಗೋಳುಕರೆ ಹೇಳಿಕೊಳ್ಳಲು ಪ್ರಾರಂಭಿಸಿದೆ "

"ಒಂದು ವಾರ ಮುಂಚೆಯಾದರೂ ಬಂದು ಕೆಲಸವನ್ನು ಆಗ ಮಾಡಿಸಬೇಕು ಸುಬ್ಬಮ್ಮ ನಿಮ್ಮಗಳ ಬೆಂಬಲವೇ ನಮಗಿರುವುದು "

"ಅಗತ್ಯವಾಗಿ ಆಗಲಿಯಮ್ಮ"

ಸುಬ್ಬಮ್ಮ ಎಲ್ಲರಿಗೂ ಕಾಫಿ, ಉಪ್ಪಿಟ್ಟು ತಂದುಕೊಟ್ಟರು

"ರಾಜು ಚೆನ್ನಾಗಿರುವಳೇ? ಅವಳಿಗೆಷ್ಟು ಮಕ್ಕಳು? ಒಂದೇ ಊರಿನಲ್ಲಿದ್ದರೂ ಒಂದು ದಿನವಾದರೂ ನಮ್ಮ ಮನೆಗೆ ಬಂದಿಲ್ಲ"

"ಒಂದು ಹೆಣ್ಣುಮಗುವಿದೆ ಪುನಃ ಬಸುರಿ ಅವಳೂ ಬಂದಿರುವಳು"

"ತಬ್ಬಲಿ ಹುಡುಗಿಗೆ ಒಂದು ದಾರಿ ಮಾಡಿ ಪುಣ್ಯ ಕಟ್ಟಿಕೊಂಡಿರಿ ಬಿಡಿ"

"ನಮ್ಮದೇನಿದೆ ಸುಬ್ಬಮ್ಮ ಎಲ್ಲಾ ಆ ಭಗವಂತನ ಇಚ್ಛೆ"

"ನಿಮ್ಮದು ದೊಡ್ಡಗುಣ"

"ಬಿಡಿ ನೀವಾದರೂ ನನ್ನನ್ನು ಮೆಚ್ಚಿದರಲ್ಲ"

ಹೆಚ್ಚು ಅಡುಗೆಗೆ ಹವಣಿಸುತ್ತಿರುವುದನ್ನು ಕಂಡು ಗುಂಡಮ್ಮ,

"ಅಲ್ಲಿ ವಾತಕ್ಕ ಕಾದಿರುತ್ತಾರ ಸುಬ್ಬಮ್ಮ ನೀವು ತೊಂದರ ತೆಗೆದು ಕೊಳ್ಳಬೇಡಿ"

"ಉಂಟೇ, ಇಂದು ಇಲ್ಲಿಯೇ ಉಳಿಯಬೇಕು"

"ಇದೂ ನಮ್ಮ ಮನೆಯೇ ಸುಬ್ಬಮ್ಮ ಉಪಚಾರದ ಅಗತ್ಯವಿಲ್ಲ"

"ಪುನಃ ರಗಳೆಗೆ ಎಲ್ಲಿ ಆರಂಭಿಸುವಳೋ ಎಂದು ಭಯಪಟ್ಟಿರಾ?" ಸುಬ್ಬಮ್ಮ ನಕ್ಕರು

ಗುಂಡಮ್ಮ ಅವರಿಗೆ ಸಮಾಧಾನ ಹೇಳಿ ಎಲಡಿಕೆ ತೆಗೆದುಕೊಂಡು ಹೊರಡಲು ಸಿದ್ಧರಾಮುದನ್ನು ಕಂಡು ನಂಜುಂಡಯ್ಯ,

"ಇಷ್ಟು ಜಾಗ್ರತೆ ಹೊರಡಲು ಮನಸ್ಸುಮಾಡಿಬಿಟ್ಟೆಯಾ?"

"ಊರಿಗೆ ಹೋಗಬೇಕೆಂಬ ಜ್ಞಾನ ನನಗೇನು ಇಲ್ಲವೇ?"

"ಇಷ್ಟು ವಯಸ್ಸಾದರೂ ನಿನ್ನ ಹುಡುಗಾಟ ಬಿಡಲೊಲ್ಲೆಯಲ್ಲಾ? ಬಂದು ಹೋದಕಡೆಯಲ್ಲೆಲ್ಲಾ ನಿನ್ನ ಇಂಗ್ಲೆಂಡಿನ ಗಡಿಯಾರ ನಡೆಯುತ್ತದೆಯೇ? ಹೇಳು" ಶ್ರೀನಿವಾಸಯ್ಯ ಗುಂಡಮ್ಮನ ಪಕ್ಷ ಹಿಡಿದರು

"ಹಾಗಲ್ಲ ಮಹಾರಾಯ ಇವಳು ಹರಟೆಗೆ ಕೂತರೆ ಸಾಮಾನ್ಯವಾಗಿ ನಾನು ದಿನದ ಲೆಕ್ಕವನ್ನೇ ಇಡುವುದು ಅದಕ್ಕೇ ಹೇಳಿದೆ"

"ಸರಿ ನಿಮ್ಮ ಪುರಾಣ ಇದ್ದೇಇದೆ ನನ್ನನ್ನು ದಿನಕ್ಕೊಂದು ಬಾರಿಯಾದರೂ ಅನ್ನದಿದ್ದರೆ ನಿಮಗೆ ಉಂಡದ್ದು ಅರಗುವುದಿಲ್ಲ ಇನ್ನಾದರೂ ಹೊರಡುತ್ತೀರೋ ಇಲ್ಲವೋ?"

"ಸ್ವಲ್ಪ ತಡಿ ಮಹಾರಾಯ್ತೀ ಹೊರಟುಬಿಟ್ಟೆ ಏನಪ್ಪಾ ಬರಲೇ?"

"ಒಂದುವಾರ ಮುಂಚೆಯಾದರೂ ಬರಬೇಕು ಸುಬ್ಬಮ್ಮ"

"ನಿನಗೂ ಅದೇ ಮಾತು ಅನ್ವಯಿಸುತ್ತದೆ ಶ್ರೀನಿವಾಸ ದಂಪತಿಗಳು ಬಂದು ವಧೂವರರನ್ನು ಆಶೀರ್ವದಿಸಿ ನನ್ನ ಮನಸ್ಸು ಸಂತೋಷಪಡಿಸಬೇಕು ಬರಲೇಮ್ಮ?"

"ಎಷ್ಟು ಉಪಚಾರ ಹೇಳುತ್ತೀಯೋ? ನಿರ್ಯೋಚನೆಯಿಂದ ಕೆಲಸವ ಮಾಡು, ನಾವಂತೂ ಖಂಡಿತಾ ಬರುತ್ತೇನೆ" ಎಂದು ಶ್ರೀನಿವಾಸಯ್ಯ ಆಶ್ವಾಸನವಿತ್ತರು

ಗುಂಡಮ್ಮ ಪುನಃ ಸುಬ್ಬಮ್ಮನವರನ್ನು ಆಮಂತ್ರಿಸಿ ಹೊರಟರು

ಪಾತಕ್ಕ ಬೀಗರಿಗೆ ಹೋಳಿಗೆ ಪಾಯಸದ ಅಡುಗೆಮಾಡಿ ಸತ್ಕರಿಸಿದರು ಗುಂಡಮ್ಮ ಪಾತಕ್ಕ, ಅಳಿಯ, ಸುಮಿತ್ರ ಮೂವರನ್ನೂ ಮತ್ತೊಮ್ಮೆ ಆಹ್ವಾನಿಸಿದರು

## ೨೨

ಮದುವೆಗೆ ಹೋಗಿಬಂದ ಪಾತಕ್ಕ ಹಾಸಿಗೆ ಹಿಡಿದು ಮಲಗಿದರು ತಾಯಿಯ ಸ್ಥಿತಿ ಕಂಡು ನರಸಿಂಹಯ್ಯ ನಡುಗಿದ

“ಬೇಡ ಬೇಡವೆಂದರೂ ನೀನು ಗಾಣದೆತ್ತಿನಂತೆ ದುಡಿಯುತ್ತೀಯಮ್ಮ,” ಎಂದು ತಾಯಿಯನ್ನು ಆಕ್ಷೇಪಿಸಿದ

ಪಾತಕ್ಕನ ಚಿಕಿತ್ಸೆಗೆ ನರಸಿಂಹಯ್ಯ ಬೇಕಾದ ಏರ್ಪಾಡು ಮಾಡಿದ ಅಡುಗೆ ಕೆಲಸಕ್ಕೆಂದು ಒಬ್ಬ ಮುದಿ ಹೆಂಗಸಿನ ನೇಮಕವಾಯಿತು ಆಸ್ಪತ್ರೆ ಔಷಧ ತೆಗೆದುಕೊಳ್ಳಲು ಪಾತಕ್ಕ ಬಡಪೆಟ್ಟಿಗೆ ಒಪ್ಪಲಿಲ್ಲ

ತಮ್ಮ ಅಂತ್ಯದಿನಗಳು ಸಮೀಪಿಸುತ್ತಿವೆಯೆಂದು ತಿಳಿಯಲು ಪಾತಕ್ಕನಿಗೆ ತಡವಾಗಲಿಲ್ಲ ಸುಮಿತ್ರೆಯಂತೂ ಪಾತಕ್ಕನ ಎಡೆಬಿಡುತ್ತಿರಲಿಲ್ಲ ಅದನ್ನು ಕಂಡು ಪಾತಕ್ಕ,

“ಹೀಗೆ ನನ್ನ ಮುಂದೆ ಕೂತಿರಲು ಬೇಸರವಾಗುವುದಿಲ್ಲವೇನೇ ಸುಮೀ ಸ್ನೇಹಿತರನ್ನಾದರೂ ನೋಡಿಕೊಂಡು ಬಾ ”

“ನನಗೆ ಯಾವ ಸ್ನೇಹಿತರೂ ಇಲ್ಲ ಅಜ್ಜಿ ”

“ಹೈಸ್ಕೂಲಿನಲ್ಲಿ ಓದುತ್ತಿರುವೆ ಸ್ನೇಹಿತರಿಲ್ಲೆಂದರೆ ಆಶ್ಚರ್ಯವಾಗುತ್ತೆ ”

“ಅವರೆಲ್ಲಾ ಸ್ನೇಹಿತರೇ ಅಜ್ಜಿ ? ಹಿಂದೊಂದು ಮುಂದೊಂದು ಆಡಿಕೊಂಡು ನಗುವುದೇ ಅವರ ಕೆಲಸ ”

“ಯಾಕೆ ? ನಿನ್ನನ್ನು ಏನಾದರೂ ಅಂದರೇನು ?”

“ಹೋಗಲಿ ಬಿಡು. ಅವರಂದರೇನಾಯಿತು ?”

“ಹೇಳು ”

“ಅಣ್ಣಾನ್ನ, ಚಿಕ್ಕಮ್ಮನ್ನ ಅಂದು ನಗುತ್ತಾರೆ ಅದಕ್ಕೇ ನಾನು ಯಾರನ್ನೂ ಹಚ್ಚಿಸಿಕೊಳ್ಳುವುದಿಲ್ಲ ”

ಪಾತಕ್ಕನ ಆಕಾಂಕ್ಷೆಯಂತೇ ರಾಜಮ್ಮ ಸ್ವರ್ಣನೊಡನೆ ಬಂದಳು ಸ್ವರ್ಣ ಬಂದವಳೇ ಅಜ್ಜಿಯನ್ನಪ್ಪಿ, “ನಿಂಗೆ ಏನಾಯ್ತು ?” ಎಂದು ಕೇಳಿದಳು

“ಸ್ವರ್ಣ, ಹೆಸರಿನಂತೇ ನಿನ್ನ ಗುಣವೂ ಚಿನ್ನ, ಹೀಗೇ ಇರು ನನ್ನ ಕಂದಾ” ಎಂದು ಪಾತಕ್ಕ ಹರ್ಷದಿಂದ ಮೊಮ್ಮಗಳಮೇಲೆ ಮುದ್ದಿನ ಮಳೆ ಕರೆದರು

ಪಾತಕ್ಕನ ಸ್ಥಿತಿಕಂಡು ರಾಜಮ್ಮನ ಮನಸ್ಸಿಗೂ ಕಸಿವಿಸಿಯಾಯಿತು ಒಂದಿನದ್ವೇಷವನ್ನು ಕ್ಷಣಕಾಲ ಮರೆತು ಅತ್ತೆಗೆ ಆರೈಕೆಮಾಡಲು ತೊಡಗಿದಳು

ಪಾತಕ್ಕ ರಾಜಮ್ಮನನ್ನು ಕೂರಿಸಿಕೊಂಡು ತಮ್ಮ ಹೃದಯ ತೋಡಿಕೊಂಡರು

“ರಾಜೂ ಒಂದು ಮಾತು ಹೇಳಬೇಕೆಂದು ಬಯಸುತ್ತೇನೆ ಹೇಳಲೇ ?'

“ಹೇಳಿ ಅತ್ತೆ ”

“ಸ್ವರ್ಣ ಹೇಗೆ ನಿನಗೆ ಮಗಳೋ ಹಾಗೇ ಸುಮಿತ್ರೆಯೂ ನಿನ್ನ ಮಗಳು. ತಪ್ಪುಮಾಡಿದರೆ ದಂಡಿಸು ನಾನು ಬೇಡವೆನ್ನುವುದಿಲ್ಲ ಆದರೆ ಮಗುವನ್ನು ಕಷ್ಟಪಡಿಸಬೇಡ ಎಷ್ಟಾದರೂ ತಬ್ಬಲಿ ಅವನ್ನ ನೋಯಿಸಿದರೆ ನಿನಗೇ ಶ್ರೇಯಸ್ಸಲ್ಲ '

ಪಾತಕ್ಕ ತಮ್ಮ ಬುದ್ಧಿವಾದವನ್ನು ಸತತವಾಗಿ ಮುಂದುವರಿಸಿದಂತೆಲ್ಲಾ ರಾಜಮ್ಮ ಅವರಿಂದ ದೂರದೂರ ಸರಿಯುತ್ತಿದ್ದಳು ಅವರ ತೊಳಲಿಕೆ ಕಂಡು ರೋಷದಿಂದ,

“ದಿನವೂ ಮುದುಕಿ ಸಾಯುತ್ತೀನಿ – ಸಾಯುತ್ತೀನಿ ಅಂತಾ ಜಪಾ ಮಾಡುತ್ತದೆಯೇ ಹೊರತು, ಇದೆಲ್ಲಿ ಸಾಯುತ್ತದೆ ? ಸುಮ್ಮನೆ ಆಟ ಕಟ್ಟಿ

ನಮ್ಮನ್ನೆಲ್ಲಾ ಹೆದರಿಸುತ್ತಿದೆ. ಇವರಿಗೂ ಬುದ್ಧಿಯಿಲ್ಲ. ಮಾತು ಕಟ್ಟಿಕೊಂಡು ಕುಣಿಯುತ್ತಾರೆ" ಎಂದು ಅಡಿಗೆ ವೆಂಕಮ್ಮನ ಹತ್ತಿರ ಗೊಣಗುತ್ತಿದ್ದಳು.

ರಾಜಮ್ಮ ನುಡಿದಂತೇ ನಾತಕ್ಕನ ಖಾಯಿಲೆ 'ಹಾವು ಸಾಯಬಾರದು-ಕೋಲು ಮುರಿಯಬಾರದು' ಎನ್ನುವಂತಾಗಿತ್ತು. ಎದ್ದು ಓಡಾಡಲಾರದ ತಮ್ಮ ಸ್ಥಿತಿಗಾಗಿ ನಾತಕ್ಕ ಮನಸಲ್ಲೇ ದುಃಖಿಸುತ್ತಿದ್ದರು. ಕೆಲವು ಸಲ ಸೊಸೆ ಮಾಡುತ್ತಿದ್ದ ಉಪಚಾರಕ್ಕಾಗಿ ಬೇಸರಪಟ್ಟುಕೊಳ್ಳುತ್ತಿದ್ದರು.

ಸಾಯಲು ಸಾಧ್ಯವಿಲ್ಲದೆ, ಬದುಕಲು ಇಷ್ಟವಿಲ್ಲದಿದ್ದ ನಾತಕ್ಕ, ಶ್ರೀರಂಗಪಟ್ಟಣಕ್ಕೆ ಹೋಗಿ ರಂಗನಾಥಸ್ವಾಮಿಯ ದರ್ಶನ ಮಾಡಿ ತಮ್ಮ ಎಲುಬುಗೂಡನ್ನು ವಿಸರ್ಜಿಸಲು ನಿರ್ಧರಿಸಿದರು. ನರಸಿಂಹಯ್ಯ 'ಹಠ' ವೆಂದು ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಅವನು ನಿರ್ವಾಹವಿಲ್ಲದೆ ಅವರನ್ನು ಪಟ್ಟಣಕ್ಕೆ ಕರೆದೊಯ್ದು ದೇವರ ದರ್ಶನ ಮಾಡಿಸಿ ಕರೆತರಬೇಕಾಯಿತು.

ಶ್ರೀರಂಗನಾಥನ ದರ್ಶನ ಮಾಡಿಕೊಂಡು ಬಂದ ನಾತಕ್ಕ ಬಹಳ ದಿನ ಉಳಿಯಲಿಲ್ಲ. ಒಂದು ಏಕಾದಶಿಯ ದಿನ ಇಹಲೋಕವ್ಯಾಪಾರ ತ್ಯಜಿಸಿದರು.

ತಾಯಿಯ ಆಕಾಂಕ್ಷೆಯಂತೇ ನರಸಿಂಹಯ್ಯ ಪಶ್ಚಿಮ ವಾಹಿನಿಯಲ್ಲೇ ಕರ್ಮಾಂತರಗಳನ್ನು ಮುಗಿಸಿಬಂದ.

## ೨೩

ಅಜ್ಜಿಯ ಮರಣ ಸುಮಿತ್ರೆಯ ಮೇಲೆ ವಿಪರೀತ ಪರಿಣಾಮವುಂಟು ಮಾಡಿತು ಕೂತಲ್ಲಿ ನಿಂತಲ್ಲಿ ಅವಳಿಗೆ ಪಾತಕ್ಕನ ನೆನಪಾಗುತ್ತಿದ್ದಿತು ಅವರ ಪ್ರೀತಿಯ ಮಾತುಗಳು, ತನಗೇನಾದರೂ ಆದರೆ ಅವರು ತೋರುತ್ತಿದ್ದ ಕಕ್ಕುಲತೆ, ಸುಮಿತ್ರೆಗೆ ಕಣ್ಣಿಗೆ ಕಟ್ಟಿದಂತಿದ್ದಿತು ಸಾಯುವ ಮುನ್ನ ತನ್ನ ಬಳಿ ಕೂರಿಸಿಕೊಂಡು ಹೇಳುತ್ತಿದ್ದ ಬುದ್ಧಿವಾದಗಳು ಅವಳ ಕಿವಿಯಲ್ಲಿ ಝೇಂಕರಿಸುತ್ತಿದ್ದುವು

ಅಜ್ಜಿಯ ನೆನಪಾದೊಡನೆ ಸುಮಿತ್ರೆಯ ಕೆಲಸಗಳು ಅಲ್ಲಲ್ಲಿಗೇ ನಿಂತು ಬಿಡುತ್ತಿದ್ದುವು

“ಈ ಮುಂಡೇದಕ್ಕೆ ಅಜ್ಜಿ ದೆವ್ವ ಮೆಟ್ಟಿದೆ’ ಎಂದು ರಾಜಮ್ಮ ಜರಿಯುತ್ತಿದ್ದಳು ಅವಳು ಮಾತು ಮಾತಿಗೂ ನಿಂದಿಸುತ್ತಿದ್ದುದನ್ನು ಕಂಡು ರಂಗಮ್ಮ ಸುಮಿತ್ರೆಯ ಪರ ವಹಿಸಿಕೊಳ್ಳುತ್ತಿದ್ದರು

“ನೀನು ನನ್ನ ಸಂಸಾರದ ವಿಷಯದಲ್ಲಿ ಪ್ರವೇಶಿಸಬೇಡಮ್ಮ ಬೇಕಾದರೆ ಇರು ನನಗೆ ಸಂತೋಷವಿರದಿದ್ದಲ್ಲಿ ಧಾರಾಳವಾಗಿ ಹೋಗಬಹುದು”

“ಮಹಾತಾಯಿ ನಾನೇನು ಅನ್ನಕ್ಕೆ ಮಾರ್ಗವಿಲ್ಲದೆ ನಿನ್ನ ಮನೆ ಸೇರಬೇಕಾಗಿಲ್ಲ ಇದೊ, ಈಗಲೇ ಹೊರಡುತ್ತೇನೆ ಎಲ್ಲಾದರೂ ನೀವು ಸುಖವಾಗಿದ್ದರೆ ಸಾಕು”

ರಂಗಮ್ಮ ತಮ್ಮ ಎರಡು ಸೀರೆಗಳನ್ನು ಚೀಲಕ್ಕೆ ಹಾಕಿಕೊಂಡು ಹೊರಡಲು ಸಿದ್ಧರಾದರು ತಾಯಿ ಹೊರಟುದನ್ನು ಕಂಡು ರಾಜಮ್ಮ

ನೋಡಿದರೂ ನೋಡದವಳಂತೆ ತನ್ನ ಕೊಠಡಿ ಸೇರಿದಳು ವೆಂಕಮ್ಮ ಅವಳಿಗೆ ಸಮಾಧಾನ ಹೇಳಲೆತ್ನಿಸಿದಳು

ಅವರಿಬ್ಬರ ವಾಗ್ವಾದ ಕೇಳಿ ಸುಮಿತ್ರೆ "ಅಜ್ಜಿ ನನಗಾಗಿಯಾದರೂ ನೀವು ಇರಿ ನೀವೂ ಹೊರಟುಹೋದರೆ ನನಗೆ ಯಾರು ಗತಿ ?" ಎಂದು ಕಣ್ಣೀರು ಹಾಕಿದಳು

ಆ ಹುಡುಗಿಯ ಸಂಕಟವನ್ನು ಕಂಡು ರಂಗಮ್ಮನ ಹೃದಯ ಮಿಡಿಯುತ್ತಿದ್ದಿತು "ಏನು ಪಾಪ ಮಾಡಿದುದಕ್ಕೆ ನಿನಗೀ ಶಿಕ್ಷೆಯೋ" ಎಂದು ಸುಮಿತ್ರೆಯನ್ನು ತಬ್ಬಿಕೊಂಡು ಅಳಹತ್ತಿದರು

ಯಾರೆಷ್ಟು ಹೇಳಿದರೂ ರಂಗಮ್ಮ ಹಟ ಬಿಡಲಿಲ್ಲ ನರಸಿಂಹಯ್ಯನೂ ಅತ್ತೆಯನ್ನು ಕೇಳಿಕೊಂಡ

ಅಳಿಯನ ಅವಸ್ಥೆಯನ್ನು ಕಂಡು ರಂಗಮ್ಮನಿಗೆ 'ಅಯ್ಯೋ' ಎನಿಸಿತು

'ಕೋಪದಲ್ಲಿ ಅವಳೂ ನಾಲ್ಕು ಮಾತಾಡಿದರೆ ನಾನೇಕೆ ಅದನ್ನೇ ದೊಡ್ಡದಾಗಿ ಎಣಿಸಬೇಕು ? ನಾಳೆ ಏನಾದರೂ ಹೆಚ್ಚುಕಡಿಮೆಯಾದರೆ ಅದನ್ನೂ ನಾನೇ ತಾನೇ ಅನುಭವಿಸುವವಳು'' ಎಂದು ತಮ್ಮಲ್ಲೇ ಸಮಾಧಾನ ತಂದುಕೊಂಡು ನಿಂತರು

ತನ್ನ ಮಾತಿನಂತೆ ಅತ್ತೆ ನಿಂತುದನ್ನು ಕಂಡು ನರಸಿಂಹಯ್ಯನಿಗೆ ಹರ್ಷವಾಯಿತು ರಂಗಮ್ಮ ಹಾಗೆ ಹೊರಟುನಿಂತುದರ ಮೂಲ ನರಸಿಂಹಯ್ಯನಿಗೆ ಅರಿವಾಗಲಿಲ್ಲ ಒಳಗೆ ಬಂದು ಹೆಂಡತಿಯನ್ನು ವಿಚಾರಿಸಿದ

"ಯಾಕೆ ನಿಮ್ಮಮ್ಮ ಹೊರಡಬೇಕೆಂದು ಕುಳಿತಿದ್ದಾರೆ ? ಏನಾದರೂ ಮಾತುಕಥೆ ನಡೆಯಿತೇನು ?"

"ನನಗೆ ತಿಳಿಯದು" ಎಂದಳು ಆದರೆ ನಿಜಸ್ಥಿತಿ ಸ್ವರ್ಣನಿಂದ ಹೊರಬಿತ್ತು.

"ನಿನಗೆಂದಿಗೆ ಬುದ್ಧಿ ಬರುತ್ತದೆ ರಾಜು ? ನೀನಿರುವ ಸ್ಥಿತಿಯಲ್ಲಿ ನಿಮ್ಮ ತಾಯಿಯೂ ಹೊರಟುಹೋದರೆ ಗತಿಯೇನು ಹೇಳು ?"

"ಹೇಗೋ ಆಗುತ್ತದೆ. ಇವರೆಲ್ಲಾ ಬಂದು ಉದ್ಧಾರ ಮಾಡುವುದು ಅಷ್ಟರಲ್ಲೇ ಇದೆ"

"ನಿನ್ನ ಕೈಲಿ ಯಾರು ವಾದ ಮಾಡುವುದಕ್ಕಾಗುತ್ತದೆ ಹೇಳು" ಬೇಸರದಿಂದ ನರಸಿಂಹಯ್ಯ ಎದ್ದು ಹೋದ

ಗಂಡ ಹೋದ ಕೂಡಲೇ ರಾಜಮ್ಮ ಕಣ್ಣು ಕೆಕ್ಕರಿಸಿಕೊಂಡು ಸ್ವರ್ಣ ನಿಗೆ ಎರಡೇಟು ಬಿಗಿದು ತನ್ನ ಕೋಪ ಆರಿಸಿಕೊಂಡಳು

ತಾಯಿ ಮಗಳಲ್ಲಿ ಹುಟ್ಟಿದ್ದ ವಿರಸದ ಉಪಯೋಗವನ್ನು ವೆಂಕಮ್ಮ ಚೆನ್ನಾಗಿ ಪಡೆದರು ರಂಗಮ್ಮನ ಪ್ರತಿಯೊಂದು ಕೆಲಸದ ವರದಿ ಮಾಡಿ ರಾಜಮ್ಮನ ಮನಸ್ಸನ್ನು ಗೆಲ್ಲಲು ಪ್ರಯತ್ನಿಸಿದರು

ವೆಂಕಮ್ಮ ತನಾಗೊಂದು, ಮಗಳು ಅಳಿಯನಿಗೇ ಒಂದು ಮಾಡು ತ್ತಿರುವುದನ್ನು ರಂಗಮ್ಮ ಗಮನಿಸದಿರಲಿಲ್ಲ ಅವರು ಮಾಡುತ್ತಿದ್ದ ವಂಚನೆ ಯನ್ನು ಕಂಡು ರಂಗಮ್ಮನಿಗೆ ಒಂದು ದಿನ ಕೋಪ ಮಿತಿಮೀರಿತು ಸುಮಿತ್ರಗೆ ಕೊಟ್ಟಿದ್ದ ಕಾಫಿಯನ್ನು ಬಚ್ಚಲಿಗೆ ಸುರಿಯುತ್ತಾ,

"ನಿನ್ನೆ ಮೊನ್ನೆ ಬಂದ ನಿಮಗೆ ಯಾರು ಈ ಚಿನ್ನಿಪ ಹೇಳಿಕೊಟ್ಟಿರು ವರು ವೆಂಕಮ್ಮ? ಅರಿಯುವ ಮಕ್ಕಳಿಗೆ ವಂಚನೆ ಮಾಡಿ ಯಾವ ಪುರುಷಾರ್ಥ ಸಾಧಿಸಿಕೊಳ್ಳಬೇಕೆಂದಿರುವಿರಿ ಹೇಳಿ?"

"ನನಗೇನಮ್ಮ ಗೊತ್ತು ಆ ವಿಷಯ? ಯಾರು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ"

"ಈಗ ಹೇಳಿದವರು ಯಾರು?"

"ನಿಮ್ಮ ಮಗಳು"

ರಂಗಮ್ಮ ಮರುಮಾತಾಡಲಿಲ್ಲ ರಾಜಮ್ಮನ ಬುದ್ಧಿ ಕಂಡು ಮನದಲ್ಲೇ ಕೊರಗಿದರು

ಒಂದು ದಿನ ರಾಜಮ್ಮನಿಗೆ ಇದ್ದಕ್ಕಿದ್ದಂತೆ ಹೊಟ್ಟೆ ನೋವು ಕಾಣಿಸಿ ಕೊಂಡಿತು ಕ್ಷಣ ಕ್ಷಣಕ್ಕೂ ನೋವು ಜಾಸ್ತಿಯಾದಾಗ ಮನೆಯಲ್ಲಿ ಎಲ್ಲರಿಗೂ ಗಾಬರಿಯಾಯಿತು ಒಂದೊಂದು ಸಲ ಹೊಟ್ಟೆ ಹಿಡಿದು ಕೊಂಡು ರಾಜಮ್ಮ ಚೀರಿದಳೆಂದರೆ ಮನೆಯಲ್ಲಿ ಎಲ್ಲರ ಹೃದಯಗಳೂ ತಲ್ಲಣಿಸುತ್ತಿದ್ದುವು

ರಂಗಮ್ಮ ತಮ್ಮ ಇಷ್ಟದೇವತೆಗೆ ಹರಕೆ ಹೊತ್ತರು

ನರಸಿಂಹಯ್ಯ ಒಂದೇ ಉಸಿರಿಗೆ ಓಡಿ, ಹತ್ತಿರದಲ್ಲಿದ್ದ ಲೇಡಿ ಡಾಕ್ಟರೊಬ್ಬರನ್ನು ಕರೆತಂದ

ಮಿಸ್ ಮನೋರಮಾ ರಾಜಮ್ಮನನ್ನು ಪರೀಕ್ಷ ಮಾಡಿ ಹೊರಬಂದು ಸೋಪುನೀರಲ್ಲಿ ಕೈತೊಳೆಯುತ್ತಾ ಕೇಳಿದರು "ಎಷ್ಟು ದಿವಸಗಳಿಂದ ಹೀಗಾಗುತ್ತಿದೆ ?"

"ಇದೇ ಬೆಳಗ್ಗೆ ಡಾಕ್ಟರ್ "

"ಹೊಟ್ಟೆಯಲ್ಲಿ ಮಗು ಸತ್ತುಹೋಗಿದೆ ಶಸ್ತ್ರಚಿಕಿತ್ಸೆಯಿಂದಲೇ ಮಗುವನ್ನು ಹೊರತೆಗೆಯಬೇಕು "

"ಪ್ರಾಣಕ್ಕೆ ಅಪಾಯವಿಲ್ಲವೇ ?"

ನರಸಿಂಹಯ್ಯ ಕಾತರನಾಗಿ ಕೇಳಿದ

"ಭಯವೇನೂ ಇಲ್ಲ ಕೂಡಲೇ ಆಸ್ಪತ್ರೆಗೆ ಕರೆದುಕೊಂಡು ಹೋಗುವುದು ಒಳ್ಳೆಯದು "

ಮಿಸ್. ಮನೋರಮ ರೋಗಿಯ ಬಗ್ಗೆ ಕುರಿತು ನಾಲ್ಕು ಮಾತುಗಳನ್ನು ಒಂದು ಚೀಟಿಯಲ್ಲಿ ಬರೆದುಕೊಟ್ಟು,

"ದೊಡ್ಡ ಡಾಕ್ಟರಲ್ಲಿ ಇದನ್ನು ತೋರಿಸಿ ನಿಮಗೆ ಕೂಡಲೇ ಅನುಕೂಲ ಮಾಡಿಕೊಡುತ್ತಾರೆ" ಎಂದರು

ರಾಜಮ್ಮನಿಗೆ ಏಳುವುದಕ್ಕೂ ತ್ರಾಣವಿರಲಿಲ್ಲ ಒಂದು ಟ್ಯಾಕ್ಸಿಯಲ್ಲಿ ನರಸಿಂಹಯ್ಯ ರಾಜಮ್ಮನನ್ನು ಆಸ್ಪತ್ರೆಗೆ ಕರೆದೊಯ್ದ ವೆಂಕಮ್ಮನವರನ್ನು ಮನೆಯಲ್ಲಿ ಬಿಟ್ಟು ರಂಗಮ್ಮ ಮಗಳೊಡನೆ ಆಸ್ಪತ್ರೆಗ ಹೋದರು

ಮನೋರಮಾ ಬರೆದುಕೊಟ್ಟಿದ್ದ ಚೀಟಿಯನ್ನು ನೋಡಿದ ಮೇಲೆ ಡಾಕ್ಟರ್, "ರೋಗಿಯೆಲ್ಲಿ ನರ್ಸ್" ಎಂದು ಕೇಳಿದರು

"ಒಳಗೆ ಮಲಗಿಸಿದ್ದೇನೆ ಡಾಕ್ಟರ್ "

ನರ್ಸಿನ ಜತೆ ಹೋಗಿ ಪರೀಕ್ಷೆ ಮುಗಿಸಿ ಬಂದ ಡಾಕ್ಟರು, "ಕೇಸ್ ತುಂಬಾ ಹೋಪ್‌ಲೆಸ್ (case hopeless) " ಎಂದರು

ಡಾಕ್ಟರ ಮಾತು ಕೇಳಿ ನರಸಿಂಹಯ್ಯ ನಡುಗಿದ

"ಹೇಗಾದರೂ ಮಾಡಿ ನನ್ನ ಮಗಳನ್ನ ಉಳಿಸಿಕೊಡಿ ಡಾಕ್ಟರಮ್ಮ" ರಂಗಮ್ಮ ಗೋಳಾಡಿದರು.

"ಅದೇನು ಬಡ್ಕೋತೀ? ಸ್ವಲ್ಪ ಬಾಯಿ ಮುಚ್ಚಮ್ಮ" ಡಾಕ್ಟರು ಸಿಡುಕಿದರು

ರಂಗಮ್ಮ ಭಯದಿಂದ ತುಟಿಕಚ್ಚಿಕೊಂಡು ದುಃಖವನ್ನು ಒತ್ತಿ ಹಿಡಿದರು ಒಂದು ಗಂಟೆ ಕಳೆದ ಮೇಲೆ ಡಾಕ್ಟರು ಹೊರಬಂದು ಹುಬ್ಬು ಗಂಟಿಕ್ಕಿ ಹೇಳಿದರು

"ಬಸುರಿ ಹೆಂಗಸಿಗೆ ಸ್ವಲ್ಪ ವ್ಯಾಯಾಮಕ್ಕೆ ಅವಕಾಶ ಕೊಡಬೇಡವೇ. ಕೆಲಸ ಮಾಡಿದರೆ ಸವೆದುಹೋಗುತ್ತಾಳೆಂದು ಮನೆಯಲ್ಲಿ ಅಡೆಹಾಕುತ್ತಿದ್ದಿರೇನು ? ಮಗು ಹೋದರೆ ಹೋಯಿತು ದೊಡ್ಡ ಜೀವ ಉಳಿದಿದೆ ತುಂಬಾ ನಿಶ್ಶಕ್ತಿಯಾಗಿದೆ ಹೆಚ್ಚು ದಣಿವುಂಟುಮಾಡಬೇಡಿ" ಎಂದುಹೇಳಿ ಹೊರಟರು

"ಸದ್ಯ ದೇವರು ನಮ್ಮ ಭಾಗಕ್ಕೆ ದೊಡ್ಡವನು " ಎಂದು ರಂಗಮ್ಮ ನಿರಾಯಾಸವಾಗಿ ಉಸಿರು ಬಿಟ್ಟರು

ರಾಜಮ್ಮ ಆಸ್ಪತ್ರೆಯಲ್ಲೇ ಪೂರ್ಣಗುಣ ಹೊಂದುವವರೆಗೂ ಉಳಿಯ ಬೇಕಾಯಿತು

ಹೆಂಡತಿ ಸಾಯಲಿಬಿಟ್ಟಮೇಲಂತೂ ನರಸಿಂಹಯ್ಯನಿಗೆ ಅಭಿಮಾನ ಉಕ್ಕಿ ಹರಿಯಿತು ಗಂಡ ಎಡೆಬಿಡದೆ ತನಗೆ ಆರೈಕೆ ಮಾಡುತ್ತಿದ್ದುದನ್ನು ಕಂಡು ರಾಜಮ್ಮ

'ಈಗಾದರೂ ಬೆಳೆಯುವಕ್ಕೇ ಇವರ ಮನಸ್ಸು ತಿರುಗಿಸಲು ಇದೇ ತಕ್ಕ ಸಮಯ ' ಎಂದು ನಿರ್ಧರಿಸಿದಳು

ರಾಜಮ್ಮನಿಗೆ ಕಡ್ಡಾಯವಾಗಿ ನಿಯಮಿಸಿದ್ದ ವಿಶ್ರಾಂತಿ ಸುಮಿತ್ರೆ ತನ್ನ ವಿದ್ಯಾಭ್ಯಾಸಕ್ಕೆ ತಿಲೋದಕ ಬಿಡುವಂತೆ ಮಾಡಿದ್ದಿತು ತನಗಾದ ಅನ್ಯಾಯಕ್ಕಾಗಿ ಸುಮಿತ್ರೆ ವ್ಯಥೆಪಟ್ಟಳು ತನಗೆಷ್ಟೇ ರಾಜೋಪಚಾರ ನಡೆಯುತ್ತಿದ್ದರೂ ರಾಜಮ್ಮ ಸುಮಿತ್ರೆಯಮೇಲೆ ತಿರುಗಿ ಬೀಳುವುದು ತಪ್ಪಲಿಲ್ಲ ರಾಜಮ್ಮನ ಯಾವೊಂದು ಮಾತುಗಳನ್ನೂ ಲಕ್ಷ್ಯಕ್ಕೇ ತಾರದ ಸುಮಿತ್ರೆ ತನ್ನ ಕೆಲಸಗಳನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಳು

ಆ ವಯಸ್ಸಿಗೇ ಗಾಣದೆತ್ತಿನಂತೆ ದುಡಿಯುತ್ತಿದ್ದ ಸುಮಿತ್ರೆಯ ಜತೆಗೆ ರಂಗಮ್ಮ ಸ್ವಭಾವಾನುಕಂಪದಿಂದ ಕೈನೀಡುತ್ತಿದ್ದರು ರಂಗಮ್ಮನ ಅನುಕಂಪ ಸುಮಿತ್ರೆಯ ದುಃಖವನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸಿತ್ತು.

## ೨೪

ಅಂಚೆಯವನು ತಂದಿತ್ತ ಕಾಗದವನ್ನು ರಂಗಮ್ಮ ಸುಮಿತ್ರೆಯ ಕೈಗಿತ್ತರು ಸುಮಿತ್ರೆ ಅದನ್ನೋದಿಕೊಂಡು,

"ಮೊನ್ನೆ ಮಂಗಳವಾರ ಉಮೆಗೆ ಮೊದಲ ವರ್ಷ 'ಮಂಗಳಗೌರಿ ಪೂಜೆ' ಮಾಡಿಸುವ ಸಂಭ್ರಮದಲ್ಲಿ ಗುಂಡಮ್ಮ ಕಾಲುಜಾರಿ ಬಿದ್ದುಬಿಟ್ಟರಂತೆ ಅದೇ ಬ್ರಹ್ಮರಾಕ್ಷಸವಾಗಿದೆಯಂತೆ! ಎದ್ದು ಓಡಾಡಲೂ ಸಾಧ್ಯವಿಲ್ಲ ದಯವಿಟ್ಟು ರಂಗಮ್ಮನನ್ನು ಕಳಿಸಿಕೊಡಿ ಎಂದು ಬರೆದಿರುವರು ಹೋಗುತ್ತೀರಾ ಅಜ್ಜಿ?"

"ಹೋಗದಿರಲು ಸಾಧ್ಯವೇ ಸುಮಿ? ನನ್ನ ಕಷ್ಟಕಾಲದಲ್ಲಿ ಅವರು ಮಾಡಿದ ಸಹಾಯವನ್ನು ಪುರಹರ ದೇವರು ಮೆಚ್ಚುವನೇ?"

ಅತ್ತೆಯನ್ನು ಕಳುಹಿಸಲು ನರಸಿಂಹಯ್ಯನಿಗೆ ಇಷ್ಟವಿಲ್ಲದಿದ್ದರೂ ಪರಿಸ್ಥಿತಿಗೆ ಸಿಲುಕಿ ಒಪ್ಪಲೇ ಬೇಕಾಯಿತು

ತಾಯಿಯ ಪ್ರಯಾಣ ತಿಳಿದ ರಾಜಮ್ಮ,

"ನನಗಿಂತಲೂ ಅವರೇ ಹೆಚ್ಚಾದರು, ನಾನು ಸಾಯುತ್ತಿರುವುದನ್ನು ನೋಡಿಕೊಂಡೂ ಹೊರಟಿರುವರು" ಎಂದು ತಾಯಿಯನ್ನು ನಿಂದಿಸಿದಳು

ಸುಮಿತ್ರೆ ದೇವಸ್ಥಾನದ ನೆಪದಿಂದ ರಂಗಮ್ಮನ ಜತೆ ಹೊರಟು, ಅವರಲ್ಲಿ ತನ್ನ ದುಃಖ ತೋಡಿಕೊಂಡಳು

"ನೀವೂ ಹೊರಟುಹೋದರೆ ನನ್ನ ಗತಿ ಏನು ಅಜ್ಜೀ?"

ಸುಮಿತ್ರೆ ಪದೇಪದೇ ಕೇಳುತ್ತಿದ್ದ ಪ್ರಶ್ನೆಗೆ ರಂಗಮ್ಮ ಮರುಕದಿಂದ,

"ಸುಮೀ, ದೇವರಸಾಕ್ಷಿಯಾಗಿ ನಾನು ಹೇಳುತ್ತೇನೆ. ನನಗೆ ನೀನು

ಬೇರೆ ಅಲ್ಲ – ಸ್ವರ್ಣ ಬೇರೆ ಅಲ್ಲ. ರಾಜು ನನ್ನ ಮಗಳಾದರೂ ಅವಳು ಮಾಡುತ್ತಿರುವುದು ಸರಿಯೆಂದು ಯಾವ ಬಾಯಲ್ಲಿ ಹೇಳಲಿ ಸುಮಿ? ದೇವತೆಯಂಥಾ ಅತ್ತೆಯನ್ನು ಗೋಳಾಡಿಸಿದಳು."

ತನಗೆ ಹತ್ತಿರವಿದ್ದ ಜೀವವೊಂದು ತನ್ನಿಂದ ಆಗಲಿ ಬಹುದೂರ ಹೋಗುತ್ತಿದೆಯೆಂದು ಭಾವಿಸಿ ಸುಮಿತ್ರ ಖಿನ್ನಳಾದಳು.

'ಗುಂಡು ಸ್ವಲ್ಪ ಹುಷಾರಾದರೆ ಬಂದುಬಿಡುತ್ತೇನೆ ಸುಮಿ."

ರಂಗಮ್ಮ ಹೇಳಿದ ಸಮಾಧಾನವನ್ನು ಸುಮಿತ್ರ ನಂಬಲಿಲ್ಲ. ಆದರೂ, ತೋರಗೊಡದ ನಗುಮುಖದಿಂದ ಅವರನ್ನು ಬೀಳ್ಕೊಂಡಳು.

ರಾಜಮ್ಮ ತಾಯಿಯ ಪ್ರಯಾಣದ ಬಳಿಕ,

'ಅವಳಿಗಿಲ್ಲೇನು ಅರೆಯಾಗಿತ್ತೂಂದ್ರೆ? ಹೋಗಿ ಹೋಗಿ ಅಲ್ಲಿ ಚಾಕರಿ ಮಾಡುತ್ತಾಳಲ್ಲ. ಯಾರು ಕಂಡು ಮೆಚ್ಚಬಹುದು? ಸುಮಿ ಉಣ್ಣೋವು ದಕ್ಕ್ಯಾ ಅದೃಷ್ಟ ಬೇಕಲ್ಲ."

"ನೀನು ಮಂದಾಸನದಲ್ಲಿರಿಸಿ ಪೂಜೆಮಾಡಿದರೂ ಅವರು ನಿನ್ನ ಮನೆಯಲ್ಲಿ ನಿಲ್ಲುವುದಿಲ್ಲ ರಾಜು."

ಗಂಡನ ಮಾತುಕೇಳಿ ರಾಜಮ್ಮ ಇವರಿಗೇನಾದರೂ ವಸ್ತುಸ್ಥಿತಿಯ ಅರಿವಾಗಿದೆಯೋ ಎಂದು ಅನುಮಾನಿಸಿದಳು. ಸುಮಿತ್ರ ತಂದೆಗೆ ಏನೋ ಚಾಡಿ ಚುಚ್ಚಿರುವಳೆಂದೂಹಿಸಿ, ನಿಜ ಹೊರಡಿಸುವ ಕುತೂಹಲದಿಂದ,

"ಯಾಕೇಂದ್ರೇ?"

"ಅಳಿಯನ ಮನೆ ಅನ್ನ ಅವರ ಮೈಗಂಟುವುದಿಲ್ಲ. ನಿಮ್ಮ ತಾಯಿ ತುಂಬಾ ಸ್ವಾಭಿಮಾನಿ."

ಗಂಡನ ವಿವರಣೆ ಕೇಳಿ ರಾಜಮ್ಮನಿಗೆ ತಾನೇನೋ ಯೋಚಿಸಿ ಹೆದರಿದ್ದೆ ನಲ್ಲಾ ಎಂದು ನಗುಬಂತು. ಅವಳ ನಗೆ ಕಂಡು,

"ಯಾಕೆ? ನಾನು ಹೇಳಿದುದು ಸುಳ್ಳೇ?"

ನೀವಾದರೂ ಅವರನ್ನು ಅರ್ಥಮಾಡಿಕೊಂಡಿರುವಿರಲ್ಲಾ."

ನರಸಿಂಹಯ್ಯ ಮಾತು ಬದಲಾಯಿಸಿದ.

"ರಾಜೂ, ಈಗ ನಿನಗೆ ಸ್ವಲ್ಪ ಹುಷಾರಾಗಿದೆಯಲ್ಲವೇ?"

"ಹೌದೂಂದ್ರೇ. ಆ ಇಂಜಕ್ಷನ್ ಕೊಟ್ಟಮೇಲೆ ಎಷ್ಟೋವಾಸಿ

ಮೊದಲು ಏಳುವಾಗಲೇ ಕೈಕಾಲು ಸೋಲುತ್ತಿತ್ತು. ಈಗಿಲ್ಲ"

"ನಾನು ಬಹಳ ಹೆದರಿಬಿಟ್ಟಿದ್ದೆ ನೋಡು"

"ಯಾಕೆ? ನಾನೂ ಸತ್ತು ಹೋಗಬಹುದೆಂದೇ?"

"ಮಾತು ಮಾತಿಗೆ ಕೆಟ್ಟದ್ದನ್ನು ನುಡಿಯುದಿದ್ದಲ್ಲಿ ನಿನಗೆ ಸಮಾಧಾನವೇ ಇರುವುದಿಲ್ಲ"

"ನಿಜವಾಗಿ ಹೇಳೀಂದ್ರೆ ನಾನು ಬದುಕಬೇಕೆಂದಿತ್ತೇ"

"ಇನ್ನೇನು? ಸಾಯಲೆಂದು ಹರಕೆ ಹೊತ್ತಿದ್ದೆನೇ?"

"ಅದು ನಿಮಗೇ ಗೊತ್ತು"

"ಏನೇ ಅದು?"

"ಮೊದಲಾದರೆ ನಿರಾತಂಕವಾಗಿ ಮನಬಂದಲ್ಲಿಗೆ ಹೋಗಬಹುದಿತ್ತು ನಾನು ಶನಿಯಂತೆ ಉಳಿದೆ"

"

"ಈಗವಳ ಮನೆಗೆ ಹೋಗುವುದಿಲ್ಲವೇ?"

"ಪೆಚ್ಚುಪೆಚ್ಚಾಗಿ ಅವರಿವರು ಹೇಳಿದ ಚಾಡಿ ಮಾತನ್ನು ನಂಬಿಕೊಂಡಿರು ನಮ್ಮಿಬ್ಬರಲ್ಲಿ ಜಗಳ ತಂದು ಹಾಕಿ ಅವರು ಕೇಕೆ ಹಾಕಿಕೊಂಡು ನಗಲಿ"

ನರಸಿಂಹಯ್ಯನ ಮಾತಿನಿಂದ ರಾಜಮ್ಮ ಭ್ರಾಂತಳಾದಳು

ಮನೆಯ ವಿಷಮ ವಾತಾವರಣವನ್ನು ವೆಂಕಮ್ಮ ಅಲ್ಲಲ್ಲಿ ತಮ್ಮ ಪರಿಚಯದವರೊಡನೆ ಬಿತ್ತಿ ಬಂದಿದ್ದರು ರಾಜಮ್ಮ – ಸುಮಿತ್ರೆಯ ಸಂಬಂಧವಂತೂ ಅಕ್ಕಪಕ್ಕದವರ ಮಾತಿಗೆ ಸುಗ್ರಾಸವಾಗಿತು

ತಾನು ಸರಿಯಾಗಿದ್ದಲ್ಲಿ ಈ ಮಾತುಗಳು ಇಷ್ಟರವರಗೆ ಬರುತ್ತಿರಲಿಲ್ಲವೆಂದು ಒಂದುಕ್ಷಣ ರಾಜಮ್ಮ ಮನಗಂಡಳು

ಮರುಕ್ಷಣವೇ ಈರ್ಷೆ – ಅಸೂಯೆ ಕೆರಳಿನಿಂತಿತು ಅಳುತ್ತಾ,

"ನನಗೆಲ್ಲಾ ತಿಳಿಯುತ್ತದೆ ನಿಮ್ಮ ಮೋಸ ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದರೆ ಜಸಕ್ಕೆ ಕಣ್ಣಿಲ್ಲವೇ?"

"ಅನುಮಾನಗಳ ಮೊಟ್ಟೆ ನೀನು"

ರಾಜಮ್ಮ ಅಶ್ರುಪ್ರವಾಹವನ್ನು ನಿಲ್ಲಿಸಲಿಲ್ಲ ಅವಳ ಕಣ್ಣೊರೆಸುತ್ತಾ,

"ರಾಜೂ ಈಗ ಹಸೀವ್ರೆ ಹೀಗೆ ಅತ್ತರೆ ನಂಜಾಗುತ್ತೆ"

ಅದಕ್ಕೂ ರಾಜಮ್ಮನ ಅಳುವೇ ಉತ್ತರವಾಯಿತು

ಬೇಸರಪಡದೆ ನರಸಿಂಹಯ್ಯ ಸಮಾಧಾನ ಹೇಳಿದ

ರಾಜಮ್ಮ ಮೊದಲಿನ ಆರೋಗ್ಯ ಪಡೆಯಲು ಬಹಳ ದಿನಗಳು ಬೇಕಾಗಲಿಲ್ಲ

ಒಂದು ದಿನ ತಾನೇ ಮಾತು ತೆಗೆದಳು

"ಸುಮ್ಮನೆ ಯಾಕೇಂಪ್ರೆ ಅಡಿಗೆಯವರಿಗೆ ದಂಡ ತೆರಬೇಕು? ವೆಂಕಮ್ಮ ಮಾಡುತ್ತಿರುವುದೂ ಅಷ್ಟರಲ್ಲೇ ಇದೆ"

"ನಿನ್ನನುಕೂಲ ನೋಡಿಕೊಂಡು ಹೇಗೆ ಬೇಕೋ ಹಾಗೆ ಮಾಡು ಹಣ ಉಳಿಸಲು ಹೋಗಿ ನಾಳೆ ನೀನು ಬಿದ್ದುಕೊಂಡರ ಅದನ್ನನುಭವಿಸ ಬೇಕಾದವನೂ ನಾನೇ ತಾನೇ?"

"ಹೇಗೂ ಸುಮಿತ್ರಾ ಸ್ಕೂಲಿಗೆ ಹೋಗುವುದಿಲ್ಲ ಕೂತಹಾಗೇ ನಾನು ಬೇಯಿಸುತ್ತೇನೆ ಅವಳು ಸುತ್ತುಗೆಲಸ ಮಾಡುತ್ತಾಳೆ"

ನರಸಿಂಹಯ್ಯ ಉತ್ತರ ಕೊಡಲಿಲ್ಲ

ರಾಜಮ್ಮ ಸೂಕ್ಷ್ಮವಾಗಿ ವೆಂಕಮ್ಮನವರಿಗೆ

"ನಾಳೆ ನಿಮ್ಮ ಹಣ ಪೂರ್ತಿ ಕೊಡಿಸುತ್ತೇನೆ ವೆಂಕಮ್ಮ ಎಲಡಿಕೆ ತೆಗೆದುಕೊಂಡು ನೀವು ಸಂತೋಷವಾಗಿ ಹೊರಡಬಹುದು"

"ರಾಮ – ಕೃಷ್ಣ ಅಂತ ನಾನಿರುವೆ ಯಾವ ಮಾತಿಗೂ ನಾನು ಹೋಗುವುದಿಲ್ಲಮ್ಮ ನನ್ನೇಕೆ ಕೆಲಸ ಬಿಡಿಸುವಿರಿ"

ವೆಂಕಮ್ಮನವರ ಮಾತು ರಾಜಮ್ಮನ ಕಿವಿ ಮುಟ್ಟಲಿಲ್ಲ ಇನ್ನು ಪ್ರಯೋಜನವಿಲ್ಲವೆಂದುಕೊಂಡ ವೆಂಕಮ್ಮ ಅಳುತ್ತಾ

"ಮೊದಲೇ ಈ ಮಾತು ತಿಳಿಸಿದ್ದರೆ ನಾನು ಬೇರೆಲ್ಲಾದರೂ ಅನುಕೂಲ ಮಾಡಿಕೊಳ್ಳಬಹುದಾಗಿತ್ತು ನಿಂತ ಕ್ಷಣದಲ್ಲಿ ಹೊರಡೆಂದರೆ ನಾನೆಲ್ಲಿ ಹೋಗಲಿ? ಅಣ್ಣನೇ ತಮ್ಮನೇ, ಇಲ್ಲ ಬಂಧುಗಳೇ? ಯಾರಿರು ವರಮ್ಮ ನನಗೆ? ಒಂದು ಹದಿನೈದು ದಿನವಾದರೂ ಕಾಲಾವಕಾಶ ಕೊಡಿ ಅಷ್ಟರೊಳಗೇ ಏನಾದರೂ ಏರ್ಪಾಡು ಮಾಡಿಕೊಳ್ಳುತ್ತೇನೆ"

ಈ ಮಾತು ಬಂದಮೇಲೆ ವೆಂಕಮ್ಮ ಬಹುಕಾಲ ನಿಲ್ಲಲಿಲ್ಲ

ಸುಮಿತ್ರೆಯ ಹೊರೆ ಮತ್ತಷ್ಟು ಹೆಚ್ಚಿತು

ಸ್ವರ್ಣನ ಜತೆ ಆಡುತ್ತಾ ಅವಳ ಮುದ್ದು ಮಾತುಗಳನ್ನು ಕೇಳುವುದರಲ್ಲಿ ಸುಮಿತ್ರೆ ತನ್ನ ದುಃಖವನ್ನು ಕ್ಷಣಕಾಲ ಮರೆಯುತ್ತಿದ್ದಳು ಅವರು ಆಟವಾಡುತ್ತಿದ್ದುದನ್ನು ಕಂಡರೆ ರಾಜಮ್ಮ ಬಿರುಗಾಳಿಯಂತೆ ನುಗ್ಗಿ ಸುಮಿತ್ರೆಯ ಮುಡಿ ಹಿಡಿದೆಳೆಯುತ್ತಾ,

"ಕೊಂಟೆ ಕೋಣದ ಹಾಗೆ ಬೆಳೆದು ಮಗುವಿನ ಜತೆ ಆಟ ಆಡುತ್ತಿದ್ದಾಳೆ. ಅಲ್ಲಿ ಒಳಗೆ ಮಾಡುವವರು ಯಾರೇ? ಏಳು ಎದ್ದು ಆ ಪಾತ್ರೆ ತೊಳೆದು ಒಟ್ಟು ಹಿಂಡಿಹಾಕು ಹೋಗು"

"ಆಗಲಿ ಬಿಡು ಚಿಕ್ಕಮ್ಮ" ಸುಮಿತ್ರೆ ಎಳೆಯುತ್ತಿದ್ದ ಕೂದಲನ್ನು ಬಿಡಿಸಿಕೊಳ್ಳಲೆತ್ನಿಸುತ್ತಿದ್ದಳು

ರಾಜಮ್ಮ ಮತ್ತಷ್ಟು ಜಗ್ಗಿಸಿ, "ಪುನಃ ಹೀಗೆ ಮಾಡುವೆಯಾ? ನಡೀ ಒಳಗೆ" ಎಂದು ಒಳಗೆ ನೂಕುತ್ತಿದ್ದಳು

ಸುಮಿತ್ರೆ ಕಣ್ಣೊರೆಸಿಕೊಳ್ಳುತ್ತಾ ತೊಳೆಯಬೇಕಾದ ಎಲ್ಲಾ ಪಾತ್ರೆಗಳ ಗುಡ್ಡೆಗೆ ಕೈಹಾಕುತ್ತಿದ್ದಳು

ಸುಮಿತ್ರೆಯ ಹಿಂದೆ ಹಿಂದೆ ಓಡಾಡುತ್ತಿದ್ದ ಮಗಳನ್ನು ಕಂಡು ರಾಜಮ್ಮನಿಗೆ ಕೋಪ ಉಕ್ಕುತ್ತಿದ್ದಿತು

"ನನಗಿಂತಾ ಈ ಮುಂಡೇದಕ್ಕೆ ಅವಳೇ ಹೆಚ್ಚಾದಳು" ಎಂದು ಸುಮಿತ್ರೆಯ ಮೇಲೆ ಹಲ್ಲು ಕಡಿಯುತ್ತಿದ್ದಳು

"ನಿನಗಿನ್ನೇನು ಕೆಲಸ ಇಲ್ಲವೇನೇ? ಹೋಗಿ ಹೋಗಿ ಅವಳ ಮುಂದೆ ಕುಕ್ಕರಬಡಿಯುತ್ತೀ"

ಸ್ವರ್ಣನನ್ನು ಬರಬರನೆ ಎಳೆದುಕೊಂಡು ರಾಜಮ್ಮ ಒಳಗೆ ಹೋದಳು

ಅಳುತ್ತಲೇ ಸುಮಿತ್ರೆ ತನ್ನ ಕೆಲಸ ಮುಗಿಸುತ್ತಿದ್ದಳು

ಸುಮಿತ್ರೆ ಒಂದು ನಿಮಿಷ ಪುರುಸೊತ್ತಾಗಿ ಕೂಡಲು ರಾಜಮ್ಮ ಬಿಡುತ್ತಿರಲಿಲ್ಲ ಅವಳ ಒಂದೊಂದು ಕೆಲಸಗಳಲ್ಲೂ ತಪ್ಪು ಹುಡುಕಿ ಜರಿಯುವುದೇ ರಾಜಮ್ಮನ ನಿತ್ಯವಿಧಿಯಾಯಿತು

ಸುಮಿತ್ರೆಯ ಪ್ರತಿಯೊಂದು ಚಲನವಲನಕ್ಕೂ ರಾಜಮ್ಮ ವಿಪರೀತ ಅರ್ಥ ಕಲ್ಪಿಸುತ್ತಿದ್ದಳು

## ೨೫

ಒಂದು ಸಂಜೆ ವಿಶಾಲಾಕ್ಷಮ್ಮ ಅರಿಸಿನ ಕುಂಕುಮಕ್ಕೆ ಕರೆಯಲು ಬಂದಳು ರಾಜಮ್ಮ ಪತಿಯ ಸ್ನೇಹಿತನ ಹೆಂಡತಿಯನ್ನು ವಿಶ್ವಾಸದಿಂದ ಸ್ವಾಗತಿಸಿದಳು ಹೊರಡಬೇಕೆಂಬ ಆತುರ ತೋರಿಸುತ್ತಿದ್ದ ವಿಶಾಲಾಕ್ಷಮ್ಮ ನನ್ನು ತಡೆಯುತ್ತಾ,

"ಕುಳಿತುಕೊಳ್ಳಿ ನೀವು ಬರುವುದೇ ಅಪರೂಪ"

"ಎಲ್ಲವ್ಮಾ ಮಕ್ಕಳು ನೋಡಿಕೊಳ್ಳುವುದರಲ್ಲೇ ಆಗುತ್ತದೆ ಒಪ್ಪೊತ್ತು ಮನೆ ಬಿಡುವುದಕ್ಕೂ ಆಗುವುದಿಲ್ಲ"

ರಾಜಮ್ಮ ಸುಮಿತ್ರೆಗೆ ಕಾಫಿ ಮಾಡಲು ಹೇಳಿ ಬಂದಳು ಲೋಕ ರೂಢಿಯ ನಾಲ್ಕು ಮಾತಾಡುತ್ತಿರುವಾಗಲೇ ಕಾಫಿ ಬಂತು ಕಾಫಿಯನ್ನು ಸವಿಯುತ್ತಾ,

"ಸುಮಿತ್ರೆ ಮಾಡಿದಳೇ? ಕಾಫಿ ತುಂಬಾ ಚೆನ್ನಾಗಿದೆ" ಎಂದು ಮೆಚ್ಚುಗೆ ತೋರಿಸಿದಳು

ಸುಮಿತ್ರೆ ನಕ್ಕು ಒಳಗೆ ಹೋದಳು

ರಾಜಮ್ಮ ತನ್ನ ಅಸಮಾಧಾನವನ್ನು ತೋರಿಸುತ್ತಾ,

"ಹೂಂ ಅಳತೆ ಇಲ್ಲದೆ ಪುಡಿ ಸಕ್ಕರೆ ಹುಯ್ದರೆ ಚೆನ್ನಾಗಿರದೇ ಏನಾದೀತು ಹೇಳಿ? ತಂದುಹಾಕುವವರಿಗೆ ತಾನೇ ಕಷ್ಟ"

ರಾಜಮ್ಮನ ಮಾತು ಕೇಳಿ ವಿಶಾಲಾಕ್ಷಮ್ಮ ಮಾತು ಮುಂದುವರಿಸ ಲಿಲ್ಲ ಸ್ವರ್ಣನ ಬಗ್ಗೆ ಅಭಿಮಾನದ ಮಾತುಗಳನ್ನಾಡಿ ರಾಜಮ್ಮನ ಹೃದಯ ಗೆದ್ದಳು.

"ಖಂಡಿತವಾಗಿ ಬರಬೇಕು ರಾಜಮ್ಮ ನೀನೂ ಬಾ ಸುಮಿತ್ರ" ಎಂದು ತಾನು ಹೊರಡುವಾಗ ಮತ್ತೊಮ್ಮೆ ಆಹ್ವಾನಿಸಿದಳು.

ನರಸಿಂಹಯ್ಯ ಮನೆಗೆ ಬಂದ ಕೂಡಲೇ ಕೇಳಿದ

"ಸೀತಾರಾಮು ಮನೆಯಲ್ಲಿ ಕರೆಯಲು ಬಂದಿದ್ದರೇ ?"

"ಹೂಂ ಇದೇ ಬಂದು ಹೋದರು

"ಹೋಗಿಬನ್ನಿ ನಾವು ಅವನ ಮನೆಗೆ ಹೋಗುವುದಿಲ್ಲವೆಂದೇ ಅವನ ಆಕ್ಷೇಪಣೆಯಾಗಿದೆ"

"ನನಗಂತೂ ಬೇಸರ ತನ್ನ ಮನೆಯ ಪುರಾಣ ಬಿಟ್ಟು ಅವಳಿಗೆ ಬೇರೆ ಪ್ರಪಂಚವೇ ಬೇಕಾಗಿಲ್ಲ ಮಾತು ಮಾತಿಗೂ ತನ್ನ ಗಂಡ–ಮಕ್ಕಳ ವಿಷಯ ಆಡದಿದ್ದರೆ ಅವಳಿಗೆ ಸಮಾಧಾನವೇ ಇರುವುದಿಲ್ಲವೇನೋ ? ನಾನು ಅವರ ಮನೆಗೆ ಹೋಗುವುದಿಲ್ಲ

"ನಿನ್ನಿಷ್ಟ ಬಂದಂತ ಮಾಡಿಕೋ" ಎಂದು ಹೇಳಿ ನರಸಿಂಯ್ಯ ಸುಮ್ಮ ನಾದ

ರಾಜಮ್ಮ ಸ್ವರ್ಣಳನ್ನ ಸಿಂಗರಿಸಿ, ಸುಮಿತ್ರೆಗೆ ತನ್ನದೇ ಒಂದು ಸೀರೆ ಕೊಟ್ಟಳು

ಬೇಡವೆಂದರೆ ಚಿಕ್ಕಮ್ಮ ಅಸಮಾಧಾನದಿಂದ ಎಲ್ಲಿ ಕೋಪಮಾಡ ಬಹುದೋ ಎಂದು ಹೆದರಿ ಸುಮಿತ್ರೆ ಸೀರೆಯುಟ್ಟಳು

ವಿಶಾಲಾಕ್ಷಮ್ಮ ಹೃತ್ಪೂರ್ವಕವಾಗಿ ಸುಮಿತ್ರೆಯನ್ನು ಆದರಿಸಿ, ಹುಳಿ ಯನ್ನ, ಬೋಂಡಾ, ಪಾಯಸ ಕೊಟ್ಟಳು

ಮಗುವಿಗೆ ಆರತಿಮಾಡಿ ತಾಂಬೂಲ ಕೊಡುತ್ತಾ,

"ಆಗಾಗ್ಗೆ ಬರುತ್ತಿರು ಸುಮಿತ್ರಾ ನಿಮ್ಮಮ್ಮ ನಮ್ಮನ್ನೆಲ್ಲಾ ದೂರ ಮಾಡುತ್ತಾಳೆಂದರೆ ವಾಂಛಲ್ಯಬಿಡದು ನಾನಂತೂ ದಿನವೂ ನಿನ್ನ ವಿಷಯ ಕೇಳುತ್ತಿರುತ್ತೇನೆ"

"ಸೀತಾರಾಮಯ್ಯನವರೂ ಈಚಿಗೆ ನಮ್ಮ ಮನೆಯಕಡೆ ಬಂದಿಲ್ಲ"

"ಪುರುಸೊತ್ತಿಲ್ಲ" ಎಂದು ಸುಮಿತ್ರೆಗೆ ಸಮಾಧಾನ ಹೇಳಿದಳು ಸುಮಿತ್ರೆ ಸ್ವರ್ಣಳೊಡನೆ ಕತ್ತಲಾಗುವ ಮುಂಚೆಯೇ ಹೊರಟಳು ಸುಮಿತ್ರೆ

ಯನ್ನು ಕಂಡಮೇಲೆ ವಿಶಾಲಾಕ್ಷಮ್ಮನಿಗೆ ಕಳವಳವಾಗಿದ್ದಿತು ತನ್ನ ತಾಯಿ ಯೊಡನೆ,

"ಸ್ವಂತ ತಾಯಿ ಇದ್ದಲ್ಲಿ ಎಷ್ಟು ಅಕರಾಸ್ತೆ ಪಡುತ್ತಿದ್ದಳೋ" ಎಂದು ಹೇಳಿ ಸುಮಿತ್ರೆಯ ಸ್ಥಿತಿಗಾಗಿ ಮರುಕತೋರಿಸಿದಳು

ಹೊತ್ತಾಯಿತೆಂದು ಚಿಕ್ಕಮ್ಮ ಎಲ್ಲಿ ಬೈಯುವಳೋ ಎಂಬ ಭಯದಿಂದ ಸುಮಿತ್ರ ಬೇಗನೆ ಹೆಜ್ಜೆ ಹಾಕತೊಡಗಿದಳು

ಚಿರಪರಿಚಿತ ಧ್ವನಿಯೊಂದು ಅವಳ ವೇಗಕ್ಕೆ ತಡೆ ಹಾಕಿತು ಸುಮಿತ್ರ ತಲೆಯೆತ್ತಿ ನೋಡಿದರ ಶ್ರೀಕಂಠ ನಿಂತಿದ್ದ

"ನನ್ನ ನೆನಪಿಲ್ಲವೇ ಸುಮಿತ್ರ"

"ಇಲ್ಲದೇ ಏನು? ಪೋಡಂ ಚೆನ್ನಾಗಿರುವರೇ?"

"ಹೂಂ ದಿನವೂ ಅವಳಿಗೆ ನಿನ್ನ ಮಾತೇ"

ಸುಮಿತ್ರೆ ನಕ್ಕು ಸುಮ್ಮನಾದಳು

"ಯಾಕೆ ಸುಮಿತ್ರಾ ನಮ್ಮನೆಗೆ ಬರುವುದನ್ನು ನಿಲ್ಲಿಸಿವೆ"

"ನಾನೀಗ ಸ್ಕೂಲಿಗೂ ಹೋಗುತ್ತಿಲ್ಲ"

"ಅಕ್ಕ ತಿಳಿಸಿದಳು ಓದುವುದನ್ನು ಬಿಡಬಾರದಾಗಿತ್ತು"

"ಚಿಕ್ಕಮ್ಮನ ತೃಪ್ತ್ಯರ್ಥವಾಗಿ ಹಾಗೆ ಮಾಡಬೇಕಾಯಿತು"

"ನೀನೀಗ ತುಂಬಾ ಇಳಿದು ಹೋಗಿರುವೆ ಸುಮಿತ್ರ"

ಸುಮಿತ್ರೆ ಉತ್ತರ ಕೊಡಲಿಲ್ಲ ಮಾತಾಡದೇ ದಾರಿ ಸವೆಸಿದಳು ಶ್ರೀಕಂಠನೂ ಅವಳ ಜತೆ ಸ್ವಲ್ಪದೂರಬಂದು, ಅಂಗಡಿ ಹೊಕ್ಕ

ಸುಮಿತ್ರೆ ಹೊರಗೇ ನಿಂತು ಶ್ರೀಕಂಠನಿಗಾಗಿ ಕಾದಳು

ಶ್ರೀಕಂಠ ಪೊಟ್ಟಣವನ್ನು ಸ್ವರ್ಣನ ಕೈಗಿಡುತ್ತಾ,

"ಸದ್ಯದಲ್ಲೇ ನಾನು ಬೊಂಬಾಯಿಗೆ ಹೋಗುತ್ತೇನೆ ಆದರೊಳಗೇ ಒಂದು ದಿನ ಬಾ ಸುಮಿತ್ರಾ ಅಕ್ಕನೂ ನಿನ್ನನ್ನು ನೋಡಬೇಕೆಂದು ಹಂಬಲಿಸುತ್ತಿರುವಳು"

"ಆಗಲಿ ನೋಡುತ್ತೇನೆ"

ಶ್ರೀಕಂಠ ಸುಮಿತ್ರೆಯನ್ನು ಮನೆಗೆ ಸ್ವಲ್ಪ ದೂರವಿದ್ದಾಗಲೇ ಅಗಲಿದ

ಮನೆ ತಲುಪಿದೊಡನೆ ಸುಮಿತ್ರಾ ಬೇಗನೆ ತನ್ನ ಕೆಲಸ ಹುಡುಕಿಕೊಂಡು ಹೊರಟಳು ಅಡಿಗೆಮನೆಯಲ್ಲಿದ್ದ ರಾಜಮ್ಮ,

"ಹೇಳೋರು ಕೇಳೋರು ಯಾರಾದರೂ ಇದ್ದರೆ ಸರಿ ಎಲ್ಲಿಗಾದರೂ ಹೋದರ ಚಕ್ಕಂದವಾಡುತ್ತಾ ಕುಳಿತುಬಿಡುತ್ತಾಳೆ" ಎಂದು ಲೊಟಗುಟ್ಟಿದಳು

ಸ್ವರ್ಣ ತಾನು ಕಂಡುದನ್ನೆಲ್ಲಾ ತಾಯಿಗೆ ವರ್ಣಿಸಿದಳು

"ಶಂಕ್ರೂ ಅಂಗಿ ಘಣಘಣಾಂತ ಹೊಳೀತಿತ್ತು ನಂಗೂ ಹೊಲಿಸೇ"

"ಸರಿ ನಿನಗಿನ್ನೇನು ಕೆಲಸ ? ಕಂಡಿದ್ದೆಲ್ಲಾ ಬೇಕು ನಿಮ್ಮಪ್ಪನನ್ನ ಕೈಲೇನು ತೈಲಿ ಕೊಟ್ಟಿರುವರೇ ?"

ಸ್ವರ್ಣ ಸುಮ್ಮನಾದಳು ಅವಳಗಮನ ಕೈಲಿದ್ದ ಪೊಟ್ಟಣದೆಡೆ ಹೋಯಿತು ಒಂದು ಪೆಪ್ಪರಮೆಂಟನ್ನು ಸವಿಯುತ್ತಾ,

"ಅಮ್ಮಾ ಅವರಷ್ಟು ಒಳ್ಳೆಯವರೊಂತ ನೋಡು ನನಗೆಷ್ಟೋದು ಪೆಪ್ಪರಮಿಂಟು ಕೊಡಿಸಿದ್ದಾರೆ"

"ಯಾರೇ ಅದು ?"

"ಅವರೇಮ್ಮ ಸುಮಿನ್ನ ಮಾತಾಡಿಸಿದರಲ್ಲಾ"

"ಸೀತಾರಾಮುನೇ ?"

"ಅಲ್ಲಾ ಅಮ್ಮ ಇನ್ನೊಬ್ಬರು ದಾರಿಯಲ್ಲಿ ಸಿಕ್ಕಿದರು"

ಸ್ವರ್ಣ ಹೇಳುತ್ತಿದ್ದುದನ್ನು ಕೇಳಿಸಿಕೊಂಡು ಸುಮಿತ್ರೆಯ ಎದೆ ವೇಗವಾಗಿ ಹೊಡೆಯಲಾರಂಭಿಸಿತು ತನಗೇನು ಶಿಕ್ಷೆ ಕಾದಿರುವುದೋ ಎಂದು ಅವಳು ನಡುಗಿದಳು

"ಸುಮಿತ್ರಾ ಬಾರೆ ಇಲ್ಲಿ" ರಾಜಮ್ಮ ಕೂಗಿದಳು

ಸುಮಿತ್ರೆ ಒಡನೆಯೇ ಚಿಕ್ಕಮ್ಮನ ಮುಂದೆ ನಡುಗುತ್ತಾ ನಿಂತಳು

ಕೋಪದಿಂದ ರಾಜಮ್ಮ ಕಣ್ಣುಗಳು ಕಿಡಿ ಕಾರುತ್ತಿದ್ದವು

"ಯಾರದು ಬೊಗಳೇ ?"

"ನಮ್ಮ ಮೇಡಮ್ಮನ ತಮ್ಮ ಸಿಕ್ಕಿದ್ದರು"

"ಸ್ವರ್ಣನಿಗೆ ತಿಂಡಿಕೊಡಲು ಅವನಿಗೇನು ದರದೇ ? ಇದಕ್ಕೇನು ನೀನು ಮೆರಕೊಂಡು ಹೊರಟುದುದು–ಕುಲಘಾತುಕಿ–ನಮ್ಮ ವಂಶ ತೊಳೆಯಲು

ವ್ಯತ್ಯವಾಗಿ ಹುಟ್ಟಿರುವೆಯೇನೇ ? ಸಿಕ್ಕಿದವರೊಡನೆ ಚಕ್ಕಂದ ಆಡಲು ನಿನ್ನ ಜನ್ಮಕ್ಕೆ ನಾಚಿಕೆಯಾಗುವುದಿಲ್ಲವೇ ?"

ರಾಜಮ್ಮ ಸುವಿತ್ರಿಯ ಮೈ ಬಾಸುಂಡೆ ಬರುವಂತೆ ಹೊಡೆದು ಕೋಲನ್ನೆಸೆದಳು

"ತಪ್ಪಾಯ್ತು–ಚಿಕ್ಕಮ್ಮ ಇನ್ನು ಮೇಲೆ ಎಲ್ಲಿಗೂ ಹೋಗುವುದಿಲ್ಲ" ಸುವಿತ್ರಿ ಬುಡಕಡಿದ ಬಾಳೆಯ ಮರದಂತೆ ಕೆಳಗುರುಳಿದಳು

ಬಿಕ್ಕಿ ಬಿಕ್ಕಿ ಅಳುತ್ತಿರುವುದನ್ನು ಕೇಳಿದ ರಾಜಮ್ಮ,

"ಏಳೇ- ಎದ್ದು ಹಾಸಿಗೆಗಳನ್ನು ಹಾಸು

ಮರುಮಾತಾಡದೇ ಸುವಿತ್ರಿ ಚಿಕ್ಕಮ್ಮನ ಆಜ್ಞೆಯನ್ನು ಪಾಲಿಸಿದಳು

ಗಂಡ ಬಂದೊಡನೇ ರಾಜಮ್ಮ ಕೂಲಂಕಷವಾಗಿ ಸಂಜೆಯ ವೃತ್ತಾಂತವನ್ನರುಹಿದಳು

"ನುಮ್ಮನೆ ನನ್ನನ್ನು ಒನ್ನುತ್ತಿದ್ದರಲ್ಲಾ ನೋಡಿದಿರಾ ನಿಮ್ಮ ಮಗಳು ಮಾಡಿದ ಕೆಲಸ ?"

"ಏನು ಮಾಡಿದಳೇ ?"

"ಅವಳನ್ನೇ ಕೇಳಿ"

"ಏನದು ಸುವಿ ?"

ನರಸಿಂಹಯ್ಯ ಸುವಿತ್ರಿಯನ್ನು ವಿಚಾರಿಸಿದ ಸುವಿತ್ರಿ ಉತ್ತರ ಕೊಡಲಿಲ್ಲ ತಲೆ ತಗ್ಗಿಸಿ ಕುಳಿತಿದ್ದಳು

ರಾಜಮ್ಮನೇ ಪ್ರಾರಂಭಿಸಿದಳು

"ಕಂಡ ಕಂಡ ಗಂಡಸರೊಡನೆ ಮಾತಾಡಬಾರದೆಂದು ಇವಳಿಗೆ ತಿಳಿಯ ಬಾರದೇ ಹೇಳಿ ? ಸಂಜೆ ಹೊರಗೆ ಕಳಿಸಿದ್ದೇ ಸಾಕೋಂತ ಅವನು ಯಾವನೋ, ಮೇಡಮ್ಮನ ತಮ್ಮನಂತೆ, ಅವನ ಕೈಲಿ ದಾರಿಯುದ್ದಕ್ಕೂ ಹರಟೆ ಹೊಡೆದುಕೊಂಡು ಬಂದಿರುವಳು ಸಾಲದುದಕ್ಕೆ ಅವನು ಸ್ವರ್ಣನ ಕೈಗೆ ತಿಂಡಿ ಕೊಟ್ಟಿದ್ದಾನೆ"

ಹೆಂಡತಿಯ ಮಾತುಕೇಳಿ ನರಸಿಂಹಯ್ಯ ಉಗ್ರನಾದ, ಸುವಿತ್ರಿಯನ್ನು ದುರಗುಟ್ಟಿಕೊಂಡು ನೋಡಿ ಕೇಳಿದ

"ನಿಜವೇನೇ ?"

" ... "

"ಬೊಗಳೇ ?"

" "

"ಹೋದವಾರಿಗೆ ಬಿಟ್ಟೆನೆಂದು ಜನ ನಮ್ಮನ್ನಲ್ಲವೇ ದೂರುವುದು ? ನಾಳೆ ಮದುವೆಯಾಗಿ ಬಾಳಬೇಕಾದ ಹುಡುಗಿ ಈರೀತಿ ಚೆಲ್ಲಾಟವಾಡಿದರೆ, ಇವಳ ಮುದ್ದು ಮುಖ ನೋಡಿಕೊಂಡು ಯಾವನು ಬಂದು ಕಟ್ಟಿಕೊಳ್ಳುತ್ತಾನೆ ? ಇವಲ್ಲಾ ಕಂಡೇ ನಾನಾರೀತಿ ಇಟ್ಟಿದ್ದೆ "

ರಾಜಮ್ಮನ ಪ್ರತಿಮಾತು ನರಸಿಂಹಯ್ಯನಲ್ಲಿದ್ದ ಕೋಪ ಹೆಚ್ಚಿಸುತ್ತಿದ್ದಿತು

ಕೋಪದಿಂದ ಕುರುಡನಾದ ನರಸಿಂಹಯ್ಯ ಮಗಳನ್ನು ದಂಡಿಸಲು ಪ್ರಾರಂಭಿಸಿದ ಸುಮಿತ್ರ ಯಜ್ಞಪಶುವಿನಂತೆ ಎಲ್ಲವನ್ನೂ ತಾಳ್ಮೆಯಿಂದ ಅನುಭವಿಸಿದಳು

ರಾಜಮ್ಮ ಮಧ್ಯಸ್ತಿಕೆವಹಿಸಿ ಗಂಡನಿಗೆ ಸಮಾಧಾನ ಹೇಳಿದಳು

"ಹೋಗಲಿ ಬಿಡಿ(ಂಪ್ರಿ ಅವಳ ಹಣೆಯ ಬರಹವಿದ್ದಂತಾಗುತ್ತದೆ ನಾವು ಯಾಕ ಚಿಂತಿಸಬೇಕು ?

"ನೀನು ಹೇಳುವುದು ಚೆನ್ನಾಗಿದೆ ಇವಳು ಆರೀತಿ ಸ್ವೇಚ್ಛೆಯಾಗಿರಬೇಕಾದಲ್ಲಿ ನನ್ನ ಮನೆಯಲ್ಲಿರಕೂಡದು ಹೊರಟು ಹೋಗಲಿ "

ನರಸಿಂಹಯ್ಯ ಊಟವನ್ನೂ ಮಾಡದೇ ತನ್ನ ಕೊಠಡಿ ಸೇರಿದ ರಾಜಮ್ಮ ಎಷ್ಟು ಹೇಳಿದರೂ ನರಸಿಂಹಯ್ಯ ಏಳಲಿಲ್ಲ ಮಾಡಿದ ಅಡಿಗೆಯನ್ನು ಹಾಗೆಯೇ ಮುಚ್ಚಿಟ್ಟು,

"ಎಲ್ಲರಪಾಲನ್ನು ನೀನೇ ಉಣ್ಣುಹೋಗು" ಎಂದು ಸುಮಿತ್ರೆಯನ್ನು ಜರಿದು ಹೋದಳು

ಜ್ಞಾನಶೂನ್ಯಳಂತೆ ಸುಮಿತ್ರೆ ಕುಳಿತೇ ಇದ್ದಳು ಒಂದೊಂದೇ ಹನಿಗಳು ಅವಳ ಕಣ್ಣಿನಿಂದ ಜಾರತ್ತಿದ್ದಿತು.

ಸುಮಿತ್ರೆಯ ನೆನಪು ಹಿಂದೆ ಹಿಂದೆ ಸರಿಯಿತು

ತಾಯಿ ಮರಣ ಹೊಂದಿದಾಗ ನುಡಿದ ಮಾತುಗಳು ಅವಳು ಅನುಭವಿಸಿದ ಯಾತನೆ–

"ಅಮ್ಮ ಇದ್ದಲ್ಲಿ ನಾನೀ ಬಾಳು ದೂಡುತ್ತಿದ್ದೆನೇ?" ಎಂದು ಕೊಂಡಳು

ತಾಯಿಯ ಮೂರ್ತಿ ಮುಂದೆ ನಿಂತಂತಾಯಿತು ಸುಮಿತ್ರಾ ಕೈ ಚಾಚಿ, 'ಅಮ್ಮಾ ನಾನೂ ಬರುವೆ ಕರೆದುಕೊಳ್ಳೇ" ಎಂದು ಆರ್ತಳಾಗಿ ಕೂಗಿದಳು

ತಾಯಿ, ಅಜ್ಜಿ ಎಲ್ಲರೂ ಅಗಲಿದ್ದರು-ತಾನೇಕೆ ಉಳಿಯಬೇಕು? ಯಾರಿಗಾಗಿ ಜೀವ ಧರಿಸಬೇಕು? ಸುಮಿತ್ರೆಗೆ ಉತ್ತರ ದೊರೆಯಲಿಲ್ಲ

ತನಗೆ ಈ ಪ್ರಪಂಚದಲ್ಲಿ ಸ್ಥಾನವಿಲ್ಲ ಎಂದು ಸುಮಿತ್ರೆ ನಿರ್ಧರಿಸಿದಳು

ಕ್ಷಣಕಾಲವನ್ನೂ ಅವಳು ವ್ಯರ್ಥವಾಗಿ ಕಳೆಯಲಿಲ್ಲ ನೇರವಾಗಿ ಅಡಿಗೆಯ ಮನೆಗೆ ಹೋದಳು

ತಾನು ಮಾಡಿದ ನಿರ್ಧಾರದಿಂದ ಸುಮಿತ್ರೆಗೆ ನವಚೇತನ ಬಂದಂತಾಗಿದ್ದಿತು ಬೇಗನೆ ತನ್ನ ಹಟಸಾಧಿಸಬೇಕೆಂದು ಹವಣಿಸಿದಳು

ನರಸಿಂಹಯ್ಯ ನಿದ್ರೆ ಬಾರದೆ ಹೊರಳಾಡುತ್ತಿದ್ದ ರಾತ್ರಿಯ ಪ್ರಕರಣ ಅವನನ್ನು ದುಃಖಾಕ್ರಾಂತನಾಗಿ ಮಾಡಿದ್ದಿತು ಸುಮಿತ್ರೆಯ ಮೇಲೆ ಕೈಮಾಡಿದುದಕ್ಕೆ ಮರುಗಿದ ತನಗೇಕೆ ಆ ರೀತಿ ಮಂಕು ಕವಿಯಿತೆಂದು ಹಲವು ಬಾರಿ ತನ್ನನ್ನೇ ನಿಂದಿಸಿಕೊಂಡು, ಸುಮಿತ್ರೆಯನ್ನು ಸಂತೈಸಲು ಕಾತುರನಾಗಿ ನರಸಿಂಹಯ್ಯ ಮೆಲ್ಲನೆ ಎದ್ದು ಹೊರಗೆ ಬಂದ

ಎದುರಿಗೆ ಅವನು ಕಂಡ ದೃಶ್ಯದಿಂದ ಪ್ರಜ್ಞೆ ತಪ್ಪಿ ಬೀಳುವಂತಾಯಿತು ಹಾಗೆಯೇ ಸಾವರಿಸಿಕೊಂಡು,

"ಸುಮಿ, ಏನುಮಾಡಿಬಿಟ್ಟೆಯೇ?" ಎಂದು ಕೂಗಿ ಹತ್ತಿರದಲ್ಲಿದ್ದ ನೀರಿನಿಂದ ಬೆಂಕಿಯನ್ನಾರಿಸಿ, ಮೃತ್ಯುವಿನ ದವಡೆಯಿಂದ ನರಸಿಂಹಯ್ಯ ಮಗಳನ್ನು ಪಾರುಮಾಡಿದ

ಸುಮಿತ್ರೆಗೆ ಪ್ರಜ್ಞೆಯಿರಲಿಲ್ಲ ನರಸಿಂಹಯ್ಯ, ರಾಜಮ್ಮ ಇಬ್ಬರೂ ಸುಮಿತ್ರೆಯನ್ನು ಉಪಚರಿಸಿದರು

ಸ್ವಲ್ಪ ಹೊತ್ತಿನ ಮೇಲೆ ಸುಮಿತ್ರೆ ಕಣ್ಣು ತೆರೆದು ಸುತ್ತಲೂ ನೋಡಿದಳು ಅವಳ ಬಾಯಿಂದ ಮಾತು ಹೊರಡಲಿಲ್ಲ

ಮಗಳ ಕಣ್ಣೀರು ಒರೆಸುತ್ತಾ ನರಸಿಂಹಯ್ಯ ಕೇಳಿದ

"ಸುಮಿ, ನನ್ನ ಮೇಲೆ ಕೋಪವೇ ?"

"ಇಲ್ಲ" ಎನ್ನುವಂತೆ ಸುಮಿತ್ರ ತಲೆಯಲ್ಲಾಡಿಸಿದಳು

"ಹೀಗೆ ಮಾಡಬಹುದೇ ಸುಮಿ ?"

"ನನ್ನನ್ನು ಯಾಕೆ ಉಳಿಸಿದಿರಿ ಅಣ್ಣಾ ನನ್ನಿಂದ ಯಾರಿಗೂ ಸುಖವಿಲ್ಲ"

ನರಸಿಂಹಯ್ಯ ಮಗಳ ಬಾಯಿ ಮುಚ್ಚಿ ಹೇಳಿದ,

"ಸುಮಿ ಹೀಗೆಲ್ಲಾ ಮಾತನಾಡಿ ನನಗೆ ದುಃಖ ಉಂಟುಮಾಡಬೇಡ"

ತನ್ನನ್ನುಳಿಸಿದ ವಿಧಿಯ ಆಟಕ್ಕಾಗಿ ಸುಮಿತ್ರೆ ದುಃಖಿಸಿದಳು

ತನ್ನ ಅಕ್ಕನ ದುಃಸ್ಥಿತಿಗಾಗಿ ಸ್ವರ್ಣ ಮರುಗಿದಳು

"ಸುಮಿ ತುಂಬಾ ನೋಯುತ್ತಾ ?"

"ಹೋಗೆ ಸಾಕು ಮಾಡುವುದೆಲ್ಲಾ ಮಾಡಿ ಮಳ್ಳಿಹಾಗೆ ಬರುತ್ತಾಳೆ" ಸುಮಿತ್ರೆ ಕೋಪದಿಂದ ಅತ್ತಿದಳು

"ಹೀಗಾಗುತ್ತೆ ಎಂದು ನನಗೇನು ಗೊತ್ತು ?"

" "

"ನನಗೆ ತಿಳಿದಿರಲಿಲ್ಲ ಸುಮಿ ಹೇಳಿಬಿಟ್ಟೆ ಇನ್ನು ಮೇಲೆ ಹೀಗೆ ಮಾಡುವುದಿಲ್ಲ"

ಸ್ವರ್ಣನ ಮುಗ್ಧಹೃದಯ ಗೆದ್ದಿತು

ಸುಮಿತ್ರ ತಂಗಿಯನ್ನಪ್ಪಿ ಮುದ್ದಿಸಿದಳು

## ೨೬

ಮನೆಗೆ ಬಂದಕೂಡಲೆ ಶ್ರೀಕಂಠ, ಸುಮಿತ್ರೆ ಸಿಕ್ಕಿದ್ದ ವಿಷಯ ಅಕ್ಕನಿಗೆ ವಿವರಿಸಿ,

"ತುಂಬಾ ಇಳಿದುಹೋಗಿರುವಳು" ಎಂದ

"ಇನ್ನೇನು ? ಇವರು ಮಾಡಿಕೊಂಡ ಮದುವೆ ಆ ಮಗುವಿಗೆ ವ್ಯತ್ಯವಾಗಿದೆ " ಮಂಜುಳೆ ಅಸಮಾಧಾನದಿಂದ ಸುಮ್ಮನಾದಳು

ನರಸಿಂಹಯ್ಯ ಮನೆಗೆ ಬಂದಾಗ ಸುಮಿತ್ರೆಯ ವಿಷಯ ಬೇಕೆಂದೇ ಎತ್ತಿದಳು

"ಸುಮಿತ್ರೆ ಹುಷಾರಾಗಿರುವಳೇ ?"

"ಇರುವಳು" ನರಸಿಂಹಯ್ಯ ನಿಟ್ಟುಸಿರುಗರೆದ

"ಯಾಕೀರೀತಿ ಇರುವಿರಿ ? ಮನೆಯಲ್ಲೇನಾದರೂ ಹೆಚ್ಚುಕಡಿಮೆಯಾಯಿತೇ ?"

"ಇಲ್ಲ—ಇಲ್ಲ "

"ನೀವೀಗ ಮೊದಲಿನಂತಿಲ್ಲ "

"ಏನಾಗಿರುವೆ ?"

"ನಿಮಗೇ ತಿಳಿದಿದೆ "

"                "

"ನಾನೂ ಬೊಂಬಾಯಿಗೇ ಹೋಗಿಬಿಡಬೇಕೆಂದಿರುವೆ."

"ಬೆಂಗಳೂರು ಬೇಸರಬಂತೇ ?"

"ಯಾರಿಗಾಗಿ ನಾನಿಲ್ಲಿ ಉಳಿಯಬೇಕು ?"

"                    "

"ನಿಮಗೂ ನಾನು ಬೇಕಿಲ್ಲ"

"ಯಾರು ಹೇಳಿದರು ?"

"ಬಾಯಲ್ಲಿ ಬೇರೆ ಹೇಳಬೇಕೆ ನಡತೆಯಲ್ಲಿ ತಿಳಿಯುವೇ ?"

ನರಸಿಂಹಯ್ಯ ಬೇಸರಗೊಂಡು ಎದ್ದು ಹೊರಟ ಮಂಜುಳೆ ತಡೆಯಲಿಲ್ಲ ಅವಳ ನಡತೆ ಕಂಡು ನರಸಿಂಹಯ್ಯನಿಗೆ ಕೋಪಬಂದಿತು ಕೋಪದಲ್ಲೇ ಮನೆಯ ದಾರಿ ಹಿಡಿದ ಕಂಬನಿಗರೆಯುತ್ತಿದ್ದ ಮಂಜುಳೆ ಶ್ರೀಕಂಠನಿಗೆ

"ನೀನೂ ಬೊಂಬಾಯಿಗೆ ಹೊರಟಿರುವೆ ಅಲ್ಲೇ ನನಗೂ ಒಂದು ಕೆಲಸ ನೋಡು ಶ್ರೀಕಂಠ ನಾನೂ ಬಂದುಬಿಡುವೆ"

ಮಂಜುಳೆಯ ನಿರ್ಧಾರ ಕೇಳಿ ಶ್ರೀಕಂಠ ಅವಾಕ್ಕಾಗಿ

"ಆಗಲಿ" ಎಂದು ಉತ್ತರಿಸಿದ

ಮಂಜುಳೆ ದಿನವೂ ಸುಮಿತ್ರೆಯ ಆಗಮನ ನಿರೀಕ್ಷಿಸಿ ಬೇಸತ್ತಳು ನಿರಾಶೆಯಿಂದಲೇ ಶ್ರೀಕಂಠನೂ ಪ್ರಯಾಣಸನ್ನದ್ಧನಾದ

"ಸುಮಿತ್ರ ಬಂದರೆ ಹೇಳಕ್ಕಾ—ನಾನು ಕೇಳಿದೆನೆಂದು—ಕಾಗದ ಬರೆಯುತ್ತಿರು" ಎಂದು ಹೇಳಿದ

"ಈ ಮನೆಯಲ್ಲಿ ಒಬ್ಬಳೇ ಹೇಗಿರಲೋ ಶ್ರೀಕಂಠಾ ನನ್ನ ಕೇಳುವವರು ಯಾರಿದ್ದಾರ ?" ಮಂಜುಳೆ ಕಣ್ಣಲ್ಲಿ ನೀರು ಹಾಕಿದಳು

"ಸ್ವಲ್ಪ ದಿನಗಳಿಕ್ಕ ರಜವಲ್ಲಿ ಬರುತ್ತೇನೆ ಸರಿಯಾದ ಕೆಲಸ ಸಿಕ್ಕಿದರ ನೀನೂ ಬಂದುಬಿಡುವೆಯಂತೆ ಸುಮ್ಮನಿರು"

"ಹಾಗೇ ಮಾಡು' ಮಂಜುಳೆ ಸಮಾಧಾನ ತಂದುಕೊಂಡು ಹೇಳಿದಳು

## ೨೭

ಒಂದು ಸಂಜೆ ಉಮಾ ತನ್ನ ಪತಿಯೊಡನೆ ಬಂದಿದ್ದಳು

ಉಮೆಯ ಆಗಮನದಿಂದ ರಾಜಮ್ಮನಿಗೆ ಸಂತೋಷವಾಯಿತು ಆದರಿಸಿ ಸತ್ಕರಿಸಿದಳು

ರಾಜಮ್ಮನ ಮನೆಯನ್ನು ಮೆಚ್ಚಿ, ಉಮೆ ಹೇಳಿದಳು

"ನಿನ್ನ ಮನೆ ಚೆನ್ನಾಗಿದೆ ರಾಜೂ"

"ಆದರಲಿ ನಿನ್ನ ವಿಷಯವೇನೂ ಹೇಳಲಿಲ್ಲ"

ಉಮೆ ನಾಚಿದಳು

"ಹೇಳೀ ಪಡವಾಗಿಲ್ಲ ನಿನ್ನ ಗಂಡ ಹೇಗಿರುವರು?

"ಇವರ ಕೈಹಿಡಿಯಲು ನಾನು ಪುಣ್ಯಮಾಡಿದ್ದೆ ರಾಜೂ ನಾನೂ ಅಂದರೆ ಇವರಿಗೆ ಪ್ರಾಣ"

"ಹೋಗಲಿ ಬಿಡು ನಿನ್ನ ಹಟವಂತೇ ಆಯಿತು ಸಂತೋಷ"

"ನೀನೊಮ್ಮೆಯಾದರೂ ನಮ್ಮ ಮನೆಗೆ ಬಂದಿಲ್ಲ"

"ಹೇಗೆ ಬರಲಿ ಉಮಾ ನಾನಲ್ಲಾದರೂ ಹೊರಟರೆ ಈ ಪ್ರಾರಬ್ಧವೂ ಗಂಟಾಗುತ್ತೆ ಇಡೀ ಸಂಸಾರ ಕಟ್ಟಿಕೊಂಡು ಎಲ್ಲಿಗೆ ಹೋಗಲಿ ಹೇಳು?"

"ಸುಮಿತ್ರೆ ಒಳ್ಳೆಯ ಹುಡುಗಿ ರಾಜು"

"ನಾಲ್ಕು ದಿನ ನೋಡಿದರೆ ಎಲ್ಲರೂ ಹಾಗೆಯೇ ಹೇಳುವುದು ಸದಾ ಇವಳ ಹಾವಳಿ ತಡೆಯುವವರಿಗೆ ತಾನೇ ಆ ಕಷ್ಟ ತಿಳಿಯಬೇಕು?"

ರಾಜಮ್ಮನ ಮಾತನ್ನು ನಂಬಿದಂತೆ ತೋರಿಸಿಕೊಂಡರೂ, ಅದರಲ್ಲಿ ಏನೇನೂ ಹುರುಳಿಲ್ಲವೆಂದು ಉಮೆ ತಿಳಿಯದಿರಲಿಲ್ಲ

ಸುಮಿತ್ರೆಯ ಬಗ್ಗೆ ರಾಜಮ್ಮ ಆಡುತ್ತಿದ್ದ ಮಾತುಗಳನ್ನು ಕೇಳಿ,

'ಮಲತಾಯಿಯಾದಾಕ್ಷಣ ಹೀಗೆ ಮಾಡಬಹುದೇ ?' ಎಂದು ಉಮಾ ತನ್ನಲ್ಲೇ ಆಶ್ಚರ್ಯಪಟ್ಟಳು

"ಭಾವ ಹೇಗಿದ್ದಾರೆ ರಾಜೂ ?"

"ಈಚೆಗೆ ಬುದ್ಧಿ ಬಂದಂತಿದೆ "

"ಆದಿನದ ಕಾಗದವನ್ನು ನೆನೆಸಿಕೊಂಡರೆ ಇನ್ನೂ ನಗುಬರುತ್ತದೆ" ಉಮಾ ನಗುತ್ತಿದ್ದಳು

ಉಮೆಯ ಹಾಸ್ಯದಿಂದ ಕೋಪ ಬಂದವಳಂತೆ ನಟಿಸುತ್ತಾ ರಾಜಮ್ಮ ಹೇಳಿದಳು

"ಎಲ್ಲರೂ ನಿನ್ನ ಗಂಡನಂತೆ ಜಾಣರಾಗಲು ಸಾಧ್ಯವೇನೇ ? ನಾವು ಕೇಳಿಬಂದುದು ನಮಗೆ "

ನರಸಿಂಹಯ್ಯ ಒಂದು ವಾರದ ರಜೆ ಪಡೆದು ಚಂದ್ರಶೇಖರನನ್ನು ಸತ್ಕರಿಸಿದ

ಮನೆಯಲ್ಲಿ ಕೆಲವು ದಿನಗಳು ಸಂತೋಷ ನೆಲೆಸಿತು

ಉಮಾ ಸುಮಿತ್ರೆಗೆ ತೋರಿಸುತ್ತಿದ್ದ ವಿಶ್ವಾಸ ಕಂಡು ರಾಜಮ್ಮನಿಗೆ ತಳಮಳವಾಗುತ್ತಿದ್ದಿತು 'ಎಷ್ಟು ದಿವಸ ನಡೆದೀತು ?' ಎಂದುಕೊಂಡು ತೃಪ್ತಿಪಟ್ಟಳು

ಒಂದು ವಾರ ಕಳೆದ ಮೇಲೆ ಊರಿಗೆ ಹೊರಡಲು ಚಂದ್ರಶೇಖರ ಆತುರಪಡಲಾರಂಭಿಸಿದ

ರಾಜಮ್ಮ ನರಸಿಂಹಯ್ಯನೊಡನೆ ಉಮೆಯ ಪ್ರಯಾಣದ ವಿಷಯ ಕುರಿತು ಪ್ರಸ್ತಾಪಮಾಡಿದಳು

"ಉಮಾ ಹೊರಡುವಳಂತೆ ಅವಳಿಗೊಂದು ಸೀರೆ ತರಬೇಕೆಂದಿದ್ದೇನೆ ಹಣವಿದೆಯೋ ?"

ನರಸಿಂಹಯ್ಯ ಪ್ರತಿ ನುಡಿಯದೆ ರಾಜಮ್ಮನ ಕೈಗೆ ನೂರು ರೂಪಾಯಿ ಹಾಕಿದ ರಾಜಮ್ಮನಿಗೆ ಸಂತೋಷವಾಯಿತು

ಅಂದು ಸಂಜೆಯೇ ರಾಜಮ್ಮ ಉಮೆಯೊಡನೆ ಅಂಗಡಿಗೆ ಹೊರಟಳು.

ಅಂಗಡಿಯನ್ನೆಲ್ಲಾ ಕೆದಕಿ ಗೋರಾಡಿದರೂ ಇಬ್ಬರೂ ಒಂದು ಸೀರೆ

ಯನ್ನೂ ಆಯ್ದಿರಲಿಲ್ಲ ಒಂದೊಂದಕ್ಕೂ ಒಂದೊಂದು ನ್ಯೂನತೆ ಕಂಡು ಕೆಳಗಿಡುತ್ತಿದ್ದರು

ಅವರು ಮಾಡುತ್ತಿದ್ದ ವ್ಯಾಪಾರ ಕಂಡು ಚಂದ್ರಶೇಖರನಿಗೆ ಸೈ ಚಿಟಿಗುಟ್ಟಿತು

"ಈಗಲೇ ಹೀಗಾದರೆ ಮುಂದೆ ಗತಿಯೇನ್ರೀ?"

"ಈ ದಿನ ನಿಮ್ಮ ಬಲವಂತಕ್ಕೆ ಅವರು ಹೊರಟಿದ್ದಾರೆ ಭಾವ ನನ್ನ ಜತೆ ಅವರು ಬರುವುದೇ ಇಲ್ಲ" ಉಮಾ ಗಂಡನ ಜಿಪುಣತನವನ್ನು ಭಾವನಿಗೊಪ್ಪಿಸಿದಳು

ರಾಜಮ್ಮ ಕೊನೆಗೊಂದು ನೀಲಿ ಸೀರೆ ಆಯ್ದಾಗ ಉಮೆಗೂ ಒಪ್ಪಿತು ಸೀರೆಯ ಜತೆಗೆ ಖಣವನ್ನೂ ಆಯ್ದುಕೊಂಡಳು,

"ಮುಗಿಯಿತು ತಾನೇ?" ಎಂದು ನರಸಿಂಹಯ್ಯ ಕೇಳಿದ

"ಏನು ಹೊತ್ತಾದ್ದಕ್ಕೆ ಹೀಗೆ ಗೊಣಗುತ್ತೀರಿ ಸುಮ್ಮನಿರಿ ಸಾಕು" ರಾಜಮ್ಮ ಗಂಡನ ಬಾಯಿ ಮುಚ್ಚಿಸಿದಳು

ಉಮ ಮತ್ತೆ ಎರಡು ಖಣಗಳನ್ನಾಯ್ದು ಗಂಡನಿಂದ ಹಣ ಕೊಡಿಸಿದಳು

ಹೆಂಡತಿ ಬೇಗನೆ ತನ್ನ ಆಯ್ಕೆ ಮುಗಿಸಿದುದಕ್ಕೆ ಚಂದ್ರಶೇಖರ ಮೆಚ್ಚಿ, ಹೊಗಳಿದ

"ಏನು? ಬಹಳ ಬುದ್ಧಿ ಬಂದುಬಿಟ್ಟಿದೆಯಲ್ಲಾ"

"ಹೋಗ್ರೀ ಅದೆಷ್ಟು ಸಲ ಹಂಗಿಸುತ್ತೀರಿ?" ಉಮ ಕೋಪ ನಟಿಸಿದಳು

ದಾರಿಯಲ್ಲಿ ಬರುತ್ತಾ ಹೂ, ಹಣ್ಣನ್ನು ಕೊಂಡು ಗಾಡಿಯಲ್ಲೇ ಮನೆ ತಲುಪಿದರು

ರಾಜಮ್ಮ ಚಿತ್ರಾನ್ನ, ಖೀರು, ಬೋಂಡ ಮಾಡಿ ಉಮೆಗೆ ಔತಣ ಮಾಡಿ ಉಡುಗೆರೆ ಕೊಟ್ಟಳು

ಉಮ ತಾನು ಕೊಂಡಿದ್ದ ಎರಡು ಖಣಗಳನ್ನು ಸುಮಿತ್ರೆ, ಸ್ವರ್ಣಳಿಗೆ ಕೊಟ್ಟು,

ವಾಗಿ ಹುಡುಗ ಲಕ್ಷಣವಾಗಿದ್ದಾನೆ ಅವನಿರುವ ರೀತಿ ನೋಡಿದರೆ ಕೈ ತುಂಬಾ ಸಂಪಾದಿಸುತ್ತಾನೆಂವೇ ಹೇಳಬೇಕು "

"ತಂದೆ-ತಾಯಿ, ಅಣ್ಣ-ತಮ್ಮ ಎಲ್ಲರೂ ಇರುವರೋ ?"

"ನಮ್ಮ ಊರಿನ ಪರಮೇಶ್ವರಯ್ಯನವರ ಮನೆಗೆ ಒಂದು ಸಲ ಹುಡುಗ ಬಂದಿದ್ದ ಆಗ ಅವರು ಗೀತಯನ್ನು ನೋಡಲು ಬಂದಿದ್ದರು ನನಗೆ ತಿಳಿದಮಟ್ಟಿಗೆ ಉತ್ತರ ದೇಶದಲ್ಲಿ ಒಬ್ಬ ಅಕ್ಕ ಇರುವಳಂತೆ ತಾಯಿ ಚಿಕ್ಕ ಹುಡುಗನಾಗಿದ್ದಾಗಲೇ ತೀರಿಕೊಂಡಳು ತಂದೆಯೂ ಪತ್ತಿರವಲ್ಲಿಲ್ಲ "

"ಸುಮಿತ್ರೆ ಇನ್ನೂ ಚಿಕ್ಕವಳು ಹೋದ ಕೂಡಲೇ ಅವಳಿಗೆ ಸಂಸಾರ ಗಂಟು ಬೀಳುತ್ತದಲ್ಲಾ " ನರಸಿಂಹಯ್ಯ ಅನುಮಾನಿಸಿದ

"ನೀವು ಹೇಳುವುದೂ ಚೆನ್ನಾಗಿದೆ ಈ ಸಂಬಂಧ ಕುದುರಿದರೆ ಮದುವೆಮಾಡಿ ಜವಾಬ್ದಾರಿ ಕಳೆದುಕೊಳ್ಳಿ ಸುಮ್ಮನೆ ಎಷ್ಟು ದಿನ ಹೆಣ್ಣು ಮಗಳನ್ನು ಮನೆಯಲ್ಲಿಟ್ಟುಕೊಂಡಿರುವುದು ?" ರಾಜಮ್ಮ ಸಲಹೆಕೊಟ್ಟಳು

"ಸುಮಿತ್ರೆಯನ್ನು ಓದಿಸಬೇಕೆಂದು ನನಗೆ ಅಭಿಲಾಷೆ "

"ಓದು - ಓದಿ ಅವಳೇನು ಮೇಡಮ್ಮಾಗಬೇಕಾಗಿದೆಯೇ ? ಲಕ್ಷಣ ವಾಗಿ ಮನೆ - ಮಕ್ಕಳೊಂತ ಸಂಸಾರ ಮಾಡಿಕೊಂಡು ಮರ್ಯಾದ ಯಾಗಿರುವುದು ಬಿಟ್ಟು ಓದಬೇಕಂತೆ ಇಲ್ಲದ ಹುಚ್ಚನ್ನು ನೀವೇ ಅವಳಿಗೆ ಅಂಟಿಸಿ" ರಾಜಮ್ಮ ಸಿಡಿಗುಟ್ಟಿದಳು

"ಅಣಿಯಾದ ಗಂಡು ಸಿಕ್ಕಿದರೆ ಮದುವೆಮಾಡುವುದು ಚೆನ್ನ " ರಂಗಮ್ಮ ವಿವೇಕ ಹೇಳಿದರು

ಅತ್ತೆಯನ್ನು ಅಸಮಾಧಾನಪಡಿಸುವ ಇಚ್ಛೆಯಿಲ್ಲದೆ ನರಸಿಂಹಯ್ಯ,

"ನಂಜುಂಡಯ್ಯನವರಿಗೆ ನಾಳೆ ಒಂದು ಕಾಗದ ಹಾಕುತ್ತೇನೆ ಹೆಣ್ಣು ಗಂಡು ಪರಸ್ಪರ ಒಪ್ಪಿದಲ್ಲಿ ಆಗಲಿ" ಎಂದು ಹೇಳಿದ

ತನ್ನ ಮದುವೆಯ ವಿಷಯ ಕುರಿತಾದ ಮಾತುಕತೆಗಳು ಸುಮಿತ್ರೆಯ ಕಿವಿಗೆ ಬಿದ್ದಿದ್ದವು ತನ್ನ ಭಾವೀ ಜೀವನದ ಬಗ್ಗೆ ಸುಮಿತ್ರೆಯಲ್ಲಿ ಕುತೂಹಲವಡಗಿದ್ದರೂ, ಇದುವರೆಗೂ ತನಗೆ ಒಗ್ಗಿಬಂದಿದ್ದ ಜೀವನ ಬದಲಾಗುವು ದೆಂದರಿತಾಗಿ ಅವಳು ಹೆದರಿದಳು

ಅವೊಂದು ದಿನ ಸ್ವರ್ಣ ಹಾಸಿಗೆ ಹಿಡಿದು ಮಲಗಿದ್ದಳು. ಜ್ವರ ಕುದಿಯುತ್ತಿದ್ದಿತು. ಲೆಕ್ಕವಿಲ್ಲದಷ್ಟು ಸಲ ವಾಂತಿಯಾಗುತ್ತಲಿದ್ದಿತು. ಎಡೆಬಿಡದೆ ಮಗಳನ್ನು ನೋಡಿಕೊಳ್ಳಬೇಕಾದುದಕ್ಕಾಗಿ ರಾಜಮ್ಮನೇ ಕೆಲವು ಸಲ ಬೇಸರಪಡುತ್ತಿದ್ದಳು. ಸುಮಿತ್ರೆ ಹಡೆದ ತಾಯಿಗಿಂತಲೂ ಹೆಚ್ಚಿನ ಮಮತೆಯಿಂದ ಸ್ವರ್ಣನಿಗೆ ಹೊತ್ತುಗೊತ್ತಿಗೆ ಹಾಲು, ಗಂಜಿ, ಔಷಧ ಕುಡಿಸಿ ಉಪಚಾರಮಾಡಿದ್ದಳು. ಹಗಲು ರಾತ್ರಿ ತನ್ನ ಮಗುವಿಗಾಗಿ ನಿದ್ರೆಗೆಡುತ್ತಿದ್ದ ಸುಮಿತ್ರೆಯನ್ನು ಕಂಡು ರಾಜಮ್ಮ ಗಂಡನೊಡನೆ

"ಸ್ವರ್ಣ ನನ್ನ ಮಗಳಲ್ಲ, ಸುಮಿತ್ರೆಯ ಮಗಳು" ಎಂದು ಹೇಳಿ ಸಂತೋಷ ವ್ಯಕ್ತಪಡಿಸಿದಳು.

"ಈ ಬಾರಿ ಸುಮಿತ್ರೆ ಇದ್ದುದರಿಂದಲೇ, ನನ್ನ ಸ್ವರ್ಣ ಉಳಿದಳು" ಎಂದು ಮೆಚ್ಚುಗೆ ಸೂಚಿಸಿ,

"ತಂಗಿಯನ್ನು ಕಂಡರೇ ಇಷ್ಟು ಪ್ರೀತಿ. ಇನ್ನು ನಿನಗೇ ಮಗುವಾದರೆ ಎಷ್ಟು ಅಕ್ಕರಾಸ್ತೆ ಪಡುವೆಯೋ! ಬೇಗ ಮದುವೆ ಮಾಡಿಬಿಡುತ್ತೇನೆ ಸುಮ್ಮನಿರು" ಎಂದು ಹಾಸ್ಯಮಾಡುತ್ತಿದ್ದಳು.

ಅಪೇಕ್ಷಿಸಿದ್ದಂತೇ ಸುಮಿತ್ರೆಯ ಮನಸ್ಸು ಮದುವೆಯ ಕಡೆಗೆ ಹರಿಯಿತು. ಕಾಣದ ತನ್ನಿನಿಯನ ರೂಪವನ್ನು ತನ್ನ ಅಭಿರುಚಿಗೆ ತಕ್ಕಂತೆ ರೂಪಿಸಿಕೊಂಡು ಮುಂಬರುವ ಸುಖದ ದಿನಗಳನ್ನು ಸವಿಯುತ್ತಲೇ ಸುಮಿತ್ರೆ ನಿದ್ರಾಪರವಶಳಾದಳು.

ನರಸಿಂಹಯ್ಯನ ಕಾಗದ ತಲುಪಿದ ಮಾರನೆಯ ದಿನವೇ ನಂಜುಂಡಯ್ಯ ಬಂದಿಳಿದರು. ತಮ್ಮ ಮಾತಿಗೆ ಅಳಿಯ ಬೆಲೆ ಕೊಟ್ಟದ್ದಕ್ಕಾಗಿ ಅವರಿಗೆ ಸಂತೋಷವಾಗಿದ್ದಿತು.

"ಗಂಡಿನ ವಿಷಯ ಹೆಚ್ಚಿಗೆ ತಿಳಿಯದಿದ್ದರೂ ಪರಮೇಶ್ವರಯ್ಯ ನನಗೆ ಬಹಳ ಬೇಕಾದವರು. ನೋಡಿದರೆ ಹುಡುಗ ಯೋಗ್ಯನಂತೆ ಕಾಣುತ್ತಾನೆ. ಕೈಯಲ್ಲಿ ನಾಲ್ಕು ಕಾಸೂ ಇರಬಹುದು. ಈ ಸಂಬಂಧವಾದರೆ ಸುಮಿತ್ರೆ ಬದುಕು ಸುಖಮಯವಾಗುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿ ತಮ್ಮ ಮನೋನಿಶ್ಚಯವನ್ನು ತಿಳಿಸಿದರು.

"ನಿಮ್ಮ ಬೆಂಬಲವೇ ನನಗಿರುವುದು. ಈ ಕಾರ್ಯವನ್ನು ಆಗ

ಮಾಡಿಸಿ ಕೊಡಬೇಕಾದವರೂ ನೀವೇ ? ಎಂದು ನರಸಿಂಹಯ್ಯ ಉಪಚಾರ ಹೇಳಿದ

ಗಂಡ ತನ್ನ ಜನಕ್ಕೆ ಕೊಡುತ್ತಿದ್ದ ಮರ್ಯಾದೆಯಿಂದ ರಾಜಮ್ಮನ ಹೃದಯ ಅರಳಿತು ಸುಮಿತ್ರೆಯ ಮೇಲೆ ಕಿಡಿಕಾರುವುದೂ ಕಡಿಮೆಯಾಯಿತು ಮಗಳ ವರ್ತನೆ ಕಂಡು ರಂಗಮ್ಮನಿಗೆ ಸಂತೋಷವಾಯಿತು

"ರಾಜೂ ಒಳ್ಳೆಯವಳು ಆ ಭಾಗೀರತಿಯ ಸಹವಾಸದಿಂದ ಹಾಗೆ ಆಡುತ್ತಿದ್ದಳು" ಎಂದು ಸಮಾಧಾನ ತಂದುಕೊಂಡರು

ಚಿಕ್ಕಮ್ಮ ತನಗೆ ಮಾಡುತ್ತಿದ್ದ ಉಪಚಾರದಿಂದ ಸುಮಿತ್ರೆಗೆ ಸಂಕೋಚವಾಗುತ್ತಿದ್ದಿತು ರಾಜಮ್ಮನ ಕೈಯಿಂದ ಕೆಲಸಗಳನ್ನು ಕಿತ್ತುಕೊಳ್ಳುತ್ತಾ,

"ಬಿಡು ಚಿಕ್ಕಮ್ಮ ನಾನು ಮಾಡುತ್ತೇನೆ" ಎನ್ನುತ್ತಿದ್ದಳು

"ಇರಲಿ ನೀನು ಸ್ಕೂಲಿಗೆ ತಲೆಬಾಚು ಹೋಗು ನಾನು ಮಾಡುತ್ತೇನೆ"

"ಅವಳನ್ನು ಸ್ಕೂಲಿಗೆ ಕಳಿಸಿಯಾಯಿತು ಚಿಕ್ಕಮ್ಮ" ಎಂದು ಸುಮಿತ್ರೆ ರಾಜಮ್ಮನ ಸಹಾಯಕ್ಕೆ ನಿಲ್ಲುತ್ತಿದ್ದಳು

"ನಾಲ್ಕು ದಿನಗಳಾದರೂ ಹಾಯಾಗಿರಬಾರದೇ ಹೇಳು" ರಾಜಮ್ಮ ಸಹಾನುಭೂತಿ ತೋರಿಸುತ್ತಿದ್ದಳು

ನರಸಿಂಹಯ್ಯನ ಒಪ್ಪಿಗೆ ದೊರೆತಮೇಲೆ ನಂಜುಂಡಯ್ಯ ಒಂದು ನಿಮಿಷವೂ ವ್ಯರ್ಥ ಮಾಡಲಿಲ್ಲ ಪರಮೇಶ್ವರಯ್ಯನವರಿಗೆ ತಿಳಿಸಿ ಗಂಡನ್ನು ಕರೆತರುವ ಏರ್ಪಾಡು ಮಾಡಿದರು

ನಂಜುಂಡಯ್ಯನ ಮಾತಿನಂತೆ ಪರಮೇಶ್ವರಯ್ಯ ಗಂಡಿನೊಡನೆ ಒಂದು ಸಂಜೆ ಬಂದಿಳಿದರು ಹೊತ್ತಿಗೆ ಸರಿಯಾಗಿ ಸೀತಾರಾಮುವೂ ಬಂದು ಸೇರಿದ ನಂಜುಂಡಯ್ಯ ಪರಸ್ಪರ ಪರಿಚಯ ಮಾಡಿಕೊಟ್ಟರು ಸ್ವಲ್ಪ ಹೊತ್ತಿನಲ್ಲೇ ಕಾಫಿ, ತಿಂಡಿಯ ಸಮಾರಾಧನೆಯಾಯಿತು ಪರಮೇಶ್ವರಯ್ಯ ಪಟ್ಟಾಗಿ ಹೊಡೆದರು ಸೀತಾರಾಮು ತಟ್ಟೆಯನ್ನೂ ಬಿಡುವಂತೆ ಕಾಣಲಿಲ್ಲ ನರಸಿಂಹಯ್ಯ ನಗುತ್ತಾ ಮತ್ತೊಂದು ಸಲ ಕೇಸರೀಭಾತ್ ತಂದಿತ್ತ

"ರಂಗಮ್ಮನವರು ಮಾಡಿದರೇನಯ್ಯಾ? – ಬಹಳ ಚೆನ್ನಾಗಿದೆ" ಎಂದು ಹೊಗಳಿ ಅದನ್ನು ಮುಗಿಸಿದ ನಾಗರಾಜ ಮಾತ್ರ ತಾನು ಗಂಟೆಬುವನ್ನು ಮರೆಯಲಿಲ್ಲ ಕಾಫಿ ಪಾತ್ರ ಕುಡಿದು ಜೋಬಿನಲ್ಲಿಟ್ಟಿದ್ದ ಸಿಲ್ಕಿನ ಕರವಸ್ತ್ರದಿಂದ ಬಾಯೊರೆಸಿಕೊಂಡ

ತಾಂಬೂಲದ ತಟ್ಟೆ ಎಲ್ಲರ ಮುಂದೆಯೂ ಓಡಾಡಿತು

ರಾಜಮ್ಮ ಒಳಗಿನಿಂದಲೇ ಗಂಡನನ್ನು ನೋಡಿ, 'ಸುಮಿತ್ರೆ ಪುಣ್ಯ ಮಾಡಿದ್ದಳು' ಎಂದು ಸುಚ್ಚುಗೆ ಸೂಚಿಸಿದಳು

ರಾಜಮ್ಮ ಸುಮಿತ್ರೆಗೆ ಒಡವೆ ಹಾಕಿ, ತನ್ನದೇ ಒಂದು ಭಾರಿಯ ಸೀರೆ ಉಡಿಸಿದ್ದಳು ಚಿಕ್ಕಮ್ಮನ ಅಪೂತವಾತ್ಸಲ್ಯ ಕಂಡು ಸುಮಿತ್ರೆಗೆ ಇದು ಸತ್ಯವೇ? ಎಂದು ಭ್ರಮೆಯಾಯಿತು

ಒಣ ಹರಟೆಯಲ್ಲಿಯೇ ಕಾಲ ವ್ಯರ್ಥವಾಗುತ್ತಿರುವುದನ್ನು ಮನಗಂಡ ನಾಗರಾಜ ಮುಜುಗರಪಡಲಾರಂಭಿಸಿದ ಅವನ ಅವಸ್ಥೆಯನ್ನು ಗ್ರಹಿಸಿದ ನಂಜುಂಡಯ್ಯ, "ಹೆಣ್ಣನ್ನು ಕರೆತರಬಹುದಲ್ಲವೇ?" ಎಂದು ಸೂಚಿಸಿದರು ನಾಗರಾಜ ನಿರಾಯಾಸವಾಗಿ ಉಸಿರುಗರೆದ

ರಾಜಮ್ಮ ಮತ್ತು ಸ್ವರ್ಣನೊಡನೆ ಸುಮಿತ್ರೆ ಪ್ರವೇಶಿಸಿದಳು ನವವಸ್ತ್ರಾಲಂಕಾರಭೂಷಿತೆಯಾದ ಸುಮಿತ್ರೆ ಅಪೂರ್ವ ಶೋಭೆಯಿಂದ ಕಂಗೊಳಿಸುತ್ತಿದ್ದಳು ಸುಮಿತ್ರೆಯ ಆಗಮನದಿಂದ ನಾಗರಾಜನ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು ಇಂತಹ ಅಪ್ರತಿಮ ಸುಂದರಿಯ ಕೈಹಿಡಿಯುವ ಭಾಗ್ಯ ತನ್ನದೇ? ಎಂದು ಕಣ್ಣು ಹೊಸಕಿಕೊಂಡು ಮತ್ತೆ ಮತ್ತೆ ನೋಡಿದ

ಸ್ವಲ್ಪಹೊತ್ತು ಮೌನ ಮನೆಯನ್ನಾಳಿತು ಪರಮೇಶ್ವರಯ್ಯನೇ ಮೌನಮುರಿದರು

"ಒಂದು ಹಾಡು ಹೇಳುವೆಯಾ ಅಮ್ಮಾ?"

ಸುಮಿತ್ರೆ ನಾಚಿ ಸುಮ್ಮನಾದಳು. ನರಸಿಂಹಯ್ಯ ಮಗಳಿಗೆ ಧೈರ್ಯ ಕೊಟ್ಟ

"ಹೇಳು ಸುಮಿತ್ರ" ಎಂದು ಮೆಲ್ಲನೆ ರಾಜಮ್ಮ ಚಿವುಟಿದಳು.

ಸ್ವಲ್ಪ ಬಲವಂತ ಮಾಡಿದಮೇಲೆ ಸುಮಿತ್ರೆ ಒಂದು ದೇವರ ನಾಮ ಹಾಡಿಮುಗಿಸಿದಳು ಪರಮೇಶ್ವರಯ್ಯ ಶಾರೀರ ಸೊಗಸಾಗಿದೆ ಇನ್ನೊಂದು ಹೇಳಮ್ಮಾ ಎಂದರು

ಸುಮಿತ್ರೆಗೆ ಮೊದಲಿದ್ದ ಹೆದರಿಕೆ ಹೋಗಿದ್ದಿತು ತನ್ನ ಇಸಿಧ್ವನಿಯಲ್ಲಿ 'ನೀನೇ ಅನಾಥ ಬಂಧು – ಕಾರುಣ್ಯ ಸಿಂಧು' ಎನ್ನುವ ದೇವರ ನಾಮವನ್ನು ಭಾವಗರ್ಭಿತವಾಗಿ ಹಾಡಿ ಎಲ್ಲರ ಮನವನ್ನೂ ಸೂರೆಗೊಂಡಳು

"ಸೊಗಸಾಗಿದೆ – ಸೊ ಗ ಸಾ ಗಿ ದೆ" ಎಂದು ಹೊ ಗ ಳು ತ್ತಾ ಪರಮೇಶ್ವರಯ್ಯ ಎಲಡಿಕೆಯನ್ನುಗುಳಿ ಬರಲು ಹೊರಗೆ ಹೋದರು

ಇಂಗಿತವನ್ನರಿತ ನಾಗರಾಜನೂ ಅವರನ್ನು ಹಿಂಬಾಲಿಸಿದ

"ಏನಯ್ಯಾ ? ಏನನ್ನುತ್ತೀ ?"

"ನಿಮಗೆಷ್ಟು ವಂದಿಸಿದರೂ ಸಾಲದು ಮಾವಯ್ಯ"

"ಹೊಗಳಿಕೆ ಇರಲಿ ಹುಡುಗಿ ಒಪ್ಪಿಗೆ ತಾನೇ ?"

" "

"ಮುಂದೆ ಮಾತಾಡಲೇ ?"

"ಆಗಬಹುದು"

ಪರಮೇಶ್ವರಯ್ಯ ಪ್ರವೇಶಿಸಿದ ಮೇಲೆ ಐದು ನಿಮಿಷ ಬಿಟ್ಟು ನಾಗರಾಜ ಪ್ರವೇಶಿಸಿದ ಸುಮಿತ್ರೆ ಹಿರಿಯರಿಂದ ಆಶೀರ್ವಾದ ಪಡೆದು ಒಳಗೆ ಹೋದಳು ಕೆಲವು ನಿಮಿಷಗಳು ಯಾರೂ ಮಾತಾಡಲಿಲ್ಲ ನರಸಿಂಹಯ್ಯ ಒಳಗೆದ್ದು ಹೋಗಿ ಹೆಂಡತಿಯ ಒಪ್ಪಿಗೆ ಪಡೆದು ಬಂದು, "ಯಥಾನುಶಕ್ತಿ ಧಾರೆಯೆರೆದು ಕೊಡುತ್ತೇನೆ ದಯವಿಟ್ಟು ಕನ್ಯೆಯನ್ನು ಸ್ವೀಕರಿಸಬೇಕು" ಎಂದು ಕೇಳಿಕೊಂಡ

"ಊರಿಗೆ ಹೋಗಿ ತಿಳಿಸಿದರಾಗುತ್ತದೆಯೋ ?"

"ಹಾಗೆಯೇ ಮಾಡಿ ಆತುರವೇನಿಲ್ಲ" ನಂಜುಂಡಯ್ಯ ಸ್ವಲ್ಪ ಅಸಮಾಧಾನಪಟ್ಟರೂ ತೋರಗೊಡದೆ ಹೇಳಿದರು

೨೮

ಪರಮೇಶ್ವರಯ್ಯ ನಾಗರಾಜನ ವಿವಾಹದಲ್ಲಿ ಆಸಕ್ತಿ ವಹಿಸಲು ಕಾರಣವಿಲ್ಲದಿರಲಿಲ್ಲ

ಶಾರದಮ್ಮನನ್ನು ಕಂಡರೆ ಪರಮೇಶ್ವರಯ್ಯನಿಗೆ ಮೊದಲಿನಿಂದಲೂ ಹೆಚ್ಚು ಪ್ರೀತಿ ಅಣ್ಣಾ ತಂಗಿಯರ ವಿಶ್ವಾಸ ಊರಿನ ಇತರರಿಗೆ ಮಾದರಿಯಂತಿದ್ದಿತು ತಂಗಿಯನ್ನು ಗಂಡನ ಮನೆಗೆ ಕಳುಹಿಸಿಕೊಟ್ಟಮೇಲೆ ಪರಮೇಶ್ವರಯ್ಯ ತಾಯಿಗಿಂತಲೂ ಹೆಚ್ಚು ದುಃಖಪಟ್ಟಿದ್ದರು ಪ್ರತಿ ಹಬ್ಬಕ್ಕೂ ತಂಗಿಗೆ ಉಡುಗೆರೆ ಕಳುಹಿಸಿಕೊಡದಿದ್ದಲ್ಲಿ ಪರಮೇಶ್ವರಯ್ಯನಿಗೆ ಹಬ್ಬಮಾಡಿದಂತೆಯೇ ಆಗುತ್ತಿರಲಿಲ್ಲ

ನಾಗರಾಜ ಮೂರು ವರ್ಷದ ಮಗುವಾಗಿದ್ದಾಗಲೇ ಶಾರದಮ್ಮ ಅಕಾಲಮೃತ್ಯುವಿಗೆ ಬಲಿಯಾದರು ಎರಡನೆಯ ಮದುವೆ ಮಾಡಿಕೊಳ್ಳಬೇಕೆಂದು ಅವರಿವರು ಹೇಳಿದರೂ ನಾಗರಾಜನ ತಂದೆ ಒಪ್ಪಲೇ ಇಲ್ಲ

"ಮಹಾಲಕ್ಷ್ಮಿಯಂತೆ ನನ್ನ ಮನೆ ಬೆಳಗಿಸಿದಳು ಅವಳನ್ನು ಮರೆತು ಪುನಃ ಮದುವೆ ಮಾಡಿಕೊಳ್ಳಲೇ ? ಈ ಜನ್ಮದಲ್ಲಿ ಸಾಧ್ಯವಿಲ್ಲ" ಎಂದು ತಮ್ಮ ದೃಢನಿರ್ಧಾರ ಹೇಳಿಬಿಟ್ಟರು ಮಕ್ಕಳಿಬ್ಬರೂ ಇತರರ ಪೋಷಣೆಯಲ್ಲೇ ಬೆಳೆದರು.

ಹಿರಿಯ ಮಗಳೇನೋ ನಾಗಪುರದಲ್ಲಿ ಬಾಳುತ್ತಿದ್ದಳು ಮದುವೆಯಾಗಿ ಹೋದ ದಿನವೇ ಅವಳಿಗೆ ತೌರುಮನೆಯ ಸಂಬಂಧ ತೊಡೆದು ಹೋಗಿದ್ದಿತು ಮಗಳ ಮದುವೆಯಾದ ಮೇಲೆ ನಾಗರಾಜನ ತಂದೆ ಮಗನೊಡನೆ ಉಳಿಯಲಿಲ್ಲ. ಅವನ ವಿದ್ಯಾಭ್ಯಾಸಕ್ಕೆ ಸಾಕಷ್ಟು ಹಣವಿರಿಸಿ,

ವಿರಕ್ತರಾಗಿ ಶೃಂಗೇರಿ ಸೇರಿದರು. ನಾಗರಾಜನನ್ನು ಮುಂದೆ ತರುವ ಜವಾಬ್ದಾರಿ ಪರಮೇಶ್ವರಯ್ಯನವರ ಮೇಲೆ ಬಿದ್ದಿತು.

ನಾಗರಾಜ ಮೊದಲಿನಿಂದಲೂ ಅಂಕೆ ಶಿಕ್ಷೆ ಇಲ್ಲದೆ ಬೆಳೆದವನು. ತಾಯಿಯಿಲ್ಲದ ಮಗುವೆಂದು ಎಲ್ಲರೂ ಮುದ್ದು ಮಾಡಿ ಹಾಳುಮಾಡಿದ್ದರು. ತಂಗಿಯ ಮಗನಿಗೆ ಪರಮೇಶ್ವರಯ್ಯ ಯಾವ ವಿಷಯದಲ್ಲೂ ಕೊರತೆ ಮಾಡಿರಲಿಲ್ಲ. ಕೇಳಿದಷ್ಟು ಹಣ ಕಳುಹಿಸುತ್ತಿದ್ದರು. ನಾಗರಾಜ ಅದನ್ನು ಹೋಟೆಲು, ಸಿನೇಮಾ, ಬಟ್ಟೆ ಬರೆಗಳಿಗಾಗಿ ಖರ್ಚುಮಾಡುತ್ತಿದ್ದ. ವಿದ್ಯಾಭ್ಯಾಸದಲ್ಲಿ ಎಂದೋ ಆಸಕ್ತಿ ಹೋಗಿದ್ದಿತು. ನೆಪಕ್ಕೆ ಅವನು ಕಾಲೇಜಿನ ವಿದ್ಯಾರ್ಥಿಯಾಗಿದ್ದ. ಪ್ರತಿವರ್ಷವೂ ನಪಾಸಾಗುತ್ತಿದ್ದ. ಸೋದರಳಿಯನ ಮೇಲೆ ಪರಮೇಶ್ವರಯ್ಯನವರಿಗೆ ಕೋಪ ಬರುತ್ತಿದ್ದಿತು. ಆದರೂ ಸಂಯಮವ ತಂದುಕೊಂಡು ನಾಗರಾಜನ ಶ್ರೇಯಸ್ಸನ್ನು ಕುರಿತು ಆಲೋಚಿಸುತ್ತಿದ್ದರು.

'ಮುರಿದುಬೀಳುತ್ತಿರುವ ತಂಗಿಯ ಮನೆಯನ್ನು ಉಳಿಸಬೇಕು' ತಂಗಿಯ ಮೇಲಣ ಈ ವಿಶ್ವಾಸವೇ ನಾಗರಾಜನಿಗೆ ಪರಮೇಶ್ವರಯ್ಯನವರ ಬೆಂಬಲ ಕೊಡಿಸಿದ್ದಿತು.

ಹೆಣ್ಣು ನೋಡಿ ಬಂದ ನಾಲ್ಕು ದಿನಗಳ ಮೇಲೆ ಪರಮೇಶ್ವರಯ್ಯ ಕಾಗದ ಬರೆಯಲು ಕುಳಿತರು. ನಾಗರಾಜನನ್ನು ಪುನಃ ಒಂದು ಸಾರಿ ಕೇಳಬೇಕೆನ್ನಿಸಿತು. ಮೂಗಿನಮೇಲೆ ಕನ್ನಡಕವನ್ನು ಸರಿಯಾಗಿ ಸಿಕ್ಕಿಸಿ, ಪೆನ್ನನ್ನು ಕೆಳಗಿಟ್ಟು ಹೆಂಡತಿಯನ್ನು ಕೂಗಿದರು.

"ಲೇ"

"ಏನೂಂಪ್ರೇ" ಸಂಜಮ್ಮ ರಾಗವೆಳೆದುಕೊಂಡೇ ಬಂದರು.

"ನಾಗರಾಜ ಎಲ್ಲಿ? ಕರಿ"

ಮಾವ ಕೂಗಿದುದನ್ನು ಕೇಳಿ ನಾಗರಾಜ ಬೇಗ ಬಂದ.

"ಈ ದಿನ ಕಾಗದ ಬರೆಯುತ್ತೇನಪ್ಪಾ"

"ಬರೆಯಿರಿ ಮಾವಯ್ಯ?

"ಒಂದು ಕರಾರು"

"ಏನದು? ಹೇಳಿ ಮಾವಯ್ಯ."

"ನಿನ್ನ ಹಿಂದಿನ ಚಾಳಿಯೆಲ್ಲವನ್ನೂ ಬಿಟ್ಟು ಬಿಡುತ್ತೇನೆಂದು ಪ್ರಮಾಣಮಾಡಿ ಹೇಳಿದರೇ ನಾನು ಬಯಸುವುದು ಬಡವರ ಮನೆ ಹೆಣ್ಣುಮಕ್ಕಳನ್ನು ತಂದು ಗೋಳಾಡಿಸಿದರ ನನಗೆ ಶ್ರೇಯಸ್ಸಿಲ್ಲ ಹಿಂದೆ ಮಾಡಿದುದರ ಪುನರಾವೃತ್ತಿ ಬೇಡ"

"ಸರಿ, ಗಿರೀಶನನ್ನು ಮದುವೆಗೆ ಕರೆದುಕೊಂಡು ಬರುವಿರಾ?" ಸಂಜಮ್ಮ ಕೇಳಿದರು

"ಮತ್ತೆ ಇನ್ನೆಂದೂ ಆ ವಿಷಯ ಬಾಯಿಬಿಟ್ಟೀಯಾ ಪ್ರಾಯಶ್ಚಿತ್ತ ಇಷ್ಟು ಮಾಡಿದುದೂ ನೀರಲ್ಲಿ ಹೋಮ ಮಾಡಿದಂತಾಗುತ್ತೆ" ಪರಮೇಶ್ವರಯ್ಯ ಹೆಂಡತಿಗೆ ಎಚ್ಚರಿಕೆಕೊಟ್ಟರು

"ಹಾಗಾದರೆ ಜನಗಳಿಗೆ ಈ ವಿಷಯ ತಿಳಿಯುವುದಿಲ್ವೇ?" ಸಂಜಮ್ಮ ಆಶ್ಚರ್ಯದಿಂದ ಕೇಳಿದರು

"ನಿನ್ನ ಸೋದರಳಿಯನ ಒಂದೊಂದು ಕಲ್ಯಾಣ ಗುಣಗಳನ್ನು ತಿಳಿದರೆ ಯಾರೇ ಇವನಿಗೆ ಹೆಣ್ಣು ಕೊಡುತ್ತಾರೆ?"

ಪರಮೇಶ್ವರಯ್ಯನ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ

"ನಿನ್ನದು ಒಡಕುಬಾಯಿ – ಎಲ್ಲವನ್ನೂ ಬಿತ್ತಿಬಿಟ್ಟೀಯಾ – ನಡೀ ಒಳಗೆ"

ಸಂಜಮ್ಮ ಪತಿಯ ಆಜ್ಞೆಯನ್ನು ಶಿರಸಾವಹಿಸಿದರು

"ಏನಯ್ಯಾ ಏನು ನಿರ್ಧರಿಸಿರುವೆ"

"ಇನ್ನುಮೇಲೆ ಸರಿಯಾಗಿರ್ತೀನಿ ಮಾವಯ್ಯ ನೀವೇ ನೋಡುವಿರಂತೆ" ನಾಗರಾಜ ಪರಮೇಶ್ವರಯ್ಯನಿಗೆ ನಂಬಿಕೆ ಹುಟ್ಟಿಸಿದ

ಪರಮೇಶ್ವರಯ್ಯ ಮತ್ತೊಮ್ಮೆ ಎಚ್ಚರಿಸಿ ಲೇಖನಿ ಹಿಡಿದರು ಅವರು ಬರವಣಿಗೆಯಲ್ಲಿ ತಲ್ಲೀನರಾದಾಗ ನಾಗರಾಜ ಮೆಲ್ಲನೆ ಕಾಲ್ತೆಗೆದ

೨೯

ನಂಜುಂಡಯ್ಯ, ಮತ್ತು ಪರಮೇಶ್ವರಯ್ಯನಿಂದ ಒಂದೇ ದಿನ ಪತ್ರ ಗಳು ಬಂದಿದ್ದವು ಅನಿರೀಕ್ಷಿತವಾಗಿ ಬಂದ ಸಂತಸದ ಸಮಾಚಾರವನ್ನಿದು ರಿಸಲು ಎಲ್ಲರಿಗೂ ಸ್ವಲ್ಪ ಹೊತ್ತೇ ಬೇಕಾಯಿತು ಕಾಗದಗಳನ್ನೋದಿದ ಮೇಲೆ ನರಸಿಂಹಯ್ಯ ಹೇಳಿದ

"ನಮ್ಮ ಸುಮಿತ್ರ ಪುಣ್ಯವಂತೆ ಹೂವಿನ ಸರ ಎತ್ತಿದಂತೆ ನಿರ್ವಿಘ್ನ ವಾಗಿ ಕಾರ್ಯಗಳಾಗುತ್ತಿದೆ"

"ನಿಜ ಗುರುಬಲ ಒದಗಿತೆಂದರೆ ಹೀಗೆಯೇ ಆಗುವುದು" ರಂಗಮ್ಮ ಹೇಳಿದರು

ಎಲ್ಲರ ಹೃದಯದಲ್ಲೂ ಸಂತಸ ಲಾಸ್ಯವಾಡಿತು

"ಪಶ್ಚಿಮವಾಹಿನಿಯಲ್ಲಿ ಮದುವೆಮಾಡುವುದೆಂದರೆ ತೊಂದರೆಯಾಗು ವುದಿಲ್ಲವೇ ? ಸಾಮಾನು – ಸರಂಜಾಮು ಸಾಗಿಸುವುದೆಂದರೆ ಕಷ್ಟ ಅಲ್ಲಿನ ಅನುಕೂಲ ಹೇಗಿದೆಯೋ ನೋಡಬೇಕು"

ನರಸಿಂಹಯ್ಯ ಅನುಮಾನಿಸಿದ.

"ಅಲ್ಲಿ ದಿವಿನಾದ ಛತ್ರವಿದೆ" ರಂಗಮ್ಮ ಹೇಳಿದರು

"ನಿಜಾಂದ್ರೆ. ಅಲ್ಲಿ ಹೋಗಿ ಮಾಡುವುದೇ ಒಳ್ಳೆಯದು ಖರ್ಚೂ ಹೆಚ್ಚಾಗುವುದಿಲ್ಲ ಇಲ್ಲಿಗೆ ಬಂದ ಮೇಲೆ ಒಂದು ದಿನ ಆರತಕ್ಷತೆ ಮಾಡಿ ಬೇಕಾದವರನ್ನು ಕರೆದರಾಯಿತು" ರಾಜಮ್ಮ ತನ್ನ ಅಭಿಪ್ರಾಯ ಮಂಡಿಸಿದಳು.

"ಒಪ್ಪಿಗೆ ತಿಳಿಸಲೇನು ?"

"ಹಾಗೆಯೇ ಮಾಡಿ"

"ಆದಷ್ಟು ಜಾಗ್ರತೆ ಮದುವೆ ಮಾಡಬೇಕಂತೆ ನಿಂತ ಘಳಿಗೆಯಲ್ಲಿ ನಾನೆಲ್ಲಿ ಹಣ ಹವಣಿಸಲಿ?" ನರಸಿಂಹಯ್ಯ ತನ್ನ ತೊಂದರೆ ಹೇಳಿಕೊಂಡ

"ಅಣಿಯಾದ ಗಂಡು" ರಂಗಮ್ಮ ಹುಡುಗನನ್ನು ಮೆಚ್ಚಿದರು

"ಈಗ ನಾವು ನಿಧಾನ ಮಾಡಿದರೆ ಚೆನ್ನಾಗಿರುವುದಿಲ್ಲಾಂಪ್ರ ಸದ್ಯಕ್ಕೆ ಏನಾದರೂ ಮಾಡಿ, ಕೆಲಸ ಮುಗಿಸಿ ಮುಂದಕ್ಕೆ ನೋಡಿಕೊಳ್ಳೋಣ"

"ಎಷ್ಟೇ ಕಡಿಮೆ ಆದರೂ ಎರಡುಸಾವಿರವಾದರೂ ಬೇಕೇ ಬೇಕು ಇರುವುದನ್ನೇನಾದರೂ ಮಾರಿ ತರಬೇಕು – ಅಷ್ಟೆ"

'ನಂಜುಂಡಯ್ಯನಿಗೆ ಹೇಳಿ ಭೋಗ್ಯಕ್ಕೆ ಏರ್ಪಾಡು ಮಾಡಿಸಿ ಇರುವ ಆಸ್ತಿಯನ್ನು ಮಾರಿದರೆ ಮುಂದೆ ಕಷ್ಟವಾಗುತ್ತದೆ" ರಂಗಮ್ಮ ಬುದ್ಧಿ ಮಾತು ಹೇಳಿದರು

ಅತ್ತೆಯ ಸಲಹೆ ಸೂಕ್ತವೆನಿಸಿತು

"ಅಮ್ಮ ಹೇಳುವುದು ನಿಜಾಂಪ್ರ ಸದ್ಯಕ್ಕೆ ಹೇಗೋ ಹಾಗೆ ಮದುವೆ ಮುಗಿಸಿಬಿಡೋಣ ಮುಂದೆ ಅನುಕೂಲವಾದಾಗ ಸುಮಿತ್ರೆಗೆ ಒಡವೆ ವಸ್ತ್ರ ತಂದರಾಯಿತು

ಬೇಕಾಬಿಟ್ಟಿಯಾಗಿ ಸುಮಿತ್ರೆಯ ಮದುವೆ ಮಾಡಿ ಮುಗಿಸಲು ನರಸಿಂಹಯ್ಯನಿಗೆ ಇಷ್ಟವಿರಲಿಲ್ಲ

"ಮುಂದಿನ ವೈಶಾಖಕ್ಕೆ ಲಗ್ನ ಇಡೋಣವೆಂದು ಕೇಳುತ್ತೇನೆ" ಎಂದು ಮಾತು ಮುಗಿಸಿದ

ಗೆಳೆಯನೊಡನೆ ಎಂದಿನಂತೆ ನರಸಿಂಹಯ್ಯ ಪ್ರಸ್ತಾಪ ಮಾಡಿದಾಗ, ಸೀತಾರಾಮು ಅನುಮಾನಿಸಿ,

"ಮದುವೆಗೆ ಇವರಿಷ್ಟು ಆತುರ ಮಾಡುತ್ತಿರುವುದನ್ನು ನೋಡಿದರೆ ನನಗೇನೋ ಅನುಮಾನ ಬರುತ್ತದೆ ನರಸಿಂಹ ಕೊಂಚ ದಿನ ತಡೆಯುವುದು ಒಳ್ಳೆಯದು"

"ಹುಡುಗ ನಿನಗೊಪ್ಪಿಗೆಯಾಗಿಲ್ಲವೇ ಹೇಳು"

"ಸಂಬಂಧ ಪರವಾಗಿಲ್ಲ ಆದರೆ ಒಳಗುಟ್ಟೇನಿದೆಯೋ ಬಲ್ಲವರು ಯಾರು?"

"ಸುಮಿತ್ರೆಗೂ ಮನಸ್ಸಿದೆ "

"ಸರಿಬಿಡು ಎಲ್ಲರೂ ಒಪ್ಪಿದಮೇಲೆ ನಾನೇಕೆ ಅಪಸ್ವರ ನುಡಿಯಲಿ?"

ಅರ್ಧಮನಸ್ಸಿನಿಂದ ಸೀತಾರಾಮು ಒಪ್ಪಿದ

"ಹಣದ್ದೇ ತೊಂದರೆಯಾಗಿದೆಯಲ್ಲಯ್ಯಾ ಲಗ್ನ ಮುಂದೆ ಹಾಕಿ ನೋಣವೆಂದಿರುವೆ "

"ಇಷ್ಟೆಲ್ಲಾ ಒದಗಿಬಂದಮೇಲೆ ಹಣದಿಂದ ಅಡ್ಡಿಯಾಗಬಾರದು ನರಸಿಂಹ ಅವರ ಇಚ್ಛೆಯಂತೇ ಮಾಡಿಬಿಡು ಒಂದು ಸಣ್ಣ ವಿಷಯ ದಲ್ಲಿ ಬೀಗರೇಕೆ ಬೇಸರಪಡಬೇಕು? ನೀನು ಈಗ ಮಾಡುವುದು ನಾಳೆ ಸುಮಿತ್ರೆಯ ಮೇಲೆ ಪರಿಣಾಮ ಬೀರಬಹುದು "

"ಹೇಗೆ ಮಾಡಿಕೊಟ್ಟರೂ ನಮ್ಮಿಂದ ಆಕ್ಷೇಪವಿಲ್ಲೆಂದು ಬರೆದಿದ್ದಾರೆ ಸೀತಾರಾಮು, ಅದೇ ನಮ್ಮ ಪುಣ್ಯ "

"ನಿಜ ಇಂತಹ ಬೀಗರು ಸಿಗುವುದು ಇಪರೂಪ "

ಸೀತಾರಾಮು ಅರ್ಧಮನಸ್ಸಿನಿಂದಲೇ ಬೀಗರನ್ನು ಮೆಚ್ಚಿದ

ನರಸಿಂಹಯ್ಯ ಹಣದ ಮುಗ್ಗಟ್ಟನ್ನು ನಂಜುಂಡಯ್ಯನವರಿಗೆ ಬರೆದು ತಿಳಿಸಿದ ನಂಜುಂಡಯ್ಯ ಸ್ವಲ್ಪವೂ ವಿಳಂಬ ಮಾಡದೆ ಹಣದ ವ್ಯವಸ್ಥೆ ಮಾಡಿ ನರಸಿಂಹಯ್ಯನ ಕೈಗಿತ್ತರು

ಒಂದಕ್ಕೊಂದು ಜತೆಯಾಗುತ್ತಿರುವುದನ್ನು ಕಂಡು ಎಲ್ಲರಿಗೂ ಹರ್ಷ ವಾಯಿತು ರಂಗಮ್ಮನಂತೂ ಕುಳಿತ ಕಡೆ ಕೂರಲಾರದಾದರು

ರಂಗಮ್ಮ ದಿನಕ್ಕೆ ನಾಲ್ಕೈದು ಬಾರಿ ಮಡಿಯುಡುವುದನ್ನು ಕಂಡು ಸುಮಿತ್ರೆ ಅವರ ಸಹಾಯಕ್ಕೆ ನಿಲ್ಲುತ್ತಿದ್ದಳು ಸುಮಿತ್ರೆ ತಮ್ಮ ಜತೆಗೂ ದುಡಿಯುತ್ತಿದ್ದುದನ್ನು ಗಮನಿಸಿ, ರಂಗಮ್ಮ ವ್ಯಥೆಪಡುತ್ತಿದ್ದರು.

"ಮಾಡಮ್ಮ - ಮಾಡು ತಾಯಿ ಎಲ್ಲಾ ನೀನು ಕೇಳಿಬಂದುದು ಮನೆಯಲ್ಲಿಷ್ಟು ಮಂದಿ ಹೆಂಗಸರಿದ್ದರೂ ಮದುವೆ ಹೆಣ್ಣು ನೀನು ದುಡಿಯ ಬೇಕಾಗಿದೆ ನಾಳೆ ಹಸೆಮಣೆಯನ್ನೂ ನೀನೇ ಹಾಕಿಕೊಂಡು ಧಾರೆಗೆ ಕೂಡಬೇಕೋ ಏನೋ."

"ಸುಮ್ಮನಿರಿ ಅಜ್ಜಿ ಚಿಕ್ಕಮ್ಮ ಕೋಪಿಸಿಕೊಂಡಾಳು." ಸುಮಿತ್ರೆ ರಂಗಮ್ಮನನ್ನು ಎಚ್ಚರಿಸುತ್ತಿದ್ದಳು.

ನರಸಿಂಹಯ್ಯ ಸುಮಿತ್ರೆಗಿಡಬೇಕಾದ ಬಟ್ಟೆಬರೆಗಳ ವಿಷಯ ಹೆಂಡತಿಯ ಹತ್ತಿರ ಚರ್ಚಿಸಿದ

"ಅವೇನೇನು ಬೇಕೋ ತಂದುಬಿಡಿ ಸುಮಿತ್ರೆಗೆ ಧಾರೆಗೊಂದು ಸೀರೆ – ಭಾರಿಯುದಿರಲಿ ಮಿಕ್ಕಿದುದನ್ನು ಹೇಗೋ ಸವರಿಸುವುದು"

"ಒಡವೆ ಏನಿಡುವುದು ಏನೂ ಬೇಡವೇ?"

"ಸರಿ – ಒಡವೆ ವಸ್ತ್ರ ಎಲ್ಲವನ್ನೂ ತಂದರೆ ಉದ್ಧಾರವಾದಂತೆ ತಿನ್ನುವ ಅನ್ನ ಅದುವಿಟ್ಟು ಮದುವೆಮಾಡುತ್ತಿರುವಿರಿ ನಾಳೆ ಸ್ವರ್ಣನ ಗತಿಯೇನು? ನಮ್ಮ ಕೈಗೆ ಚಿಪ್ಪು ಕೊಡುವಿರಾ?"

"ಸತ್ಯ ಸುಮ್ಮನಿರೇ ಮಹಾರಾಯ್ತಿ ಹುಳಿಯನ್ನ – ಪಾಯಿಸ ಮಾಡಿ ಧಾರೆಯೆರದು ಬಿಡೋಣ ಅದೃಷ್ಟವೊಂದಿದ್ದರೆ ನಾಳೆ ಅವಳ ಗಂಡನೇ ಮಾಡಿಸುತ್ತಾನೆ ನಾವು ಕೊಟ್ಟಿದ್ದು ಎಲ್ಲಿಯವರೆಗೆ?"

ನರಸಿಂಹಯ್ಯ ತನ್ನಲ್ಲೇ ಸಮಾಧಾನ ತಂದುಕೊಳ್ಳುತ್ತಿದ್ದ

ಮಗಳ ಏರ್ಪಾಡನ್ನು ಕೇಳಿ ರಂಗಮ್ಮ ಸುಮ್ಮನಿರಲಿಲ್ಲ

"ಹೇಗೂ ಸುಮಿತ್ರೆಯ ಒಡವೆ ನಿನ್ನ ಬಳಿ ಇದೆ ಅದನ್ನೇ ಇಟ್ಟು ಧಾರೆ ಎರೆದುಬಿಡು"

"ನಿನ್ನ ಯೋಚನೆಯೂ ಚೆನ್ನಾಗಿದೆ" ಮುಖ ತಿರುವಿಕೊಂಡು ರಾಜಮ್ಮ ಹೊರಟುಹೋದಳು

ಇನ್ನು ಹೆಚ್ಚು ಮಾತಾಡಿದರೆ 'ನಾನು ಮದುವೆಗೇ ಬರುವುದಿಲ್ಲ' ಎಂದೆಲ್ಲಿ ಹಟಹಿಡಿದು ಕೂಡುವಳೋ ಎಂದು ಹೆದರಿ ರಂಗಮ್ಮನೂ ಸುಮ್ಮನಾದರು

ಒಂದು ಸಂಜೆ ರಾಜಮ್ಮನೇ ಗಂಡನೊಡನೆ ಹೋಗಿ ಜವಳಿ, ಬೆಳ್ಳಿಯ ಪಾತ್ರೆಗಳನ್ನು ತಂದಳು

ಮಗಳು ಮಾಡಿದ ಒಂದೊಂದು ವ್ಯಾಪಾರದಲ್ಲೂ ರಂಗಮ್ಮನಿಗೆ ಒಂದೊಂದು ನ್ಯೂನತೆ ಕಂಡುಬರುತ್ತಿದ್ದಿತು

"ತನಗೆ ಹಿತವಿಲ್ಲದ ಕೆಲಸವನ್ನು ತೋರಿಕೆಗೆ ಮಾಡುತ್ತಿರುವಳು" ಎಂದುಕೊಂಡು,

"ಹೇಗಾದರಾಗಲಿ ಹುಡುಗಿ ಒಂದು ನೆಲೆ ಕಂಡಿತಲ್ಲಾ ಅದೇ ಸಂತೋಷ" ಎಂದು ತೃಪ್ತಿಪಟ್ಟರು

ನರಸಿಂಹಯ್ಯ ಬೇಕಾದವರಿಗೆ ಒಂದು ವಾರದ ಮುಂಚೆಯೇ ಆಮಂತ್ರಣ ಕಳುಹಿಸಿದ

ಲಗ್ನಕ್ಕೆ ಮೂರು ದಿನಗಳ ಮುಂಚೆಯೇ ನಂಜುಂಡಯ್ಯ ಹೆಂಡತಿ ಮಕ್ಕಳನ್ನು ಕಳುಹಿಸಿಕೊಟ್ಟು ತಾವು ಬೀಗರ ಜತೆಯಲ್ಲಿ ಬರುವುದಾಗಿ ತಿಳಿಸಿದ್ದರು

ಸೀತಾರಾಮುವಿನ ಸಂಸಾರವೂ ಬೇಗನೆ ಬಂದು ಸೇರಿತು ಎಲ್ಲರೂ ಮುಂಚೆಯೇ ಹೊರಟು ಸಪ್ತಮಿ ಸಂಜೆಯ ಹೊತ್ತಿಗೆ ಬೀಗರ ಸ್ವಾಗತಕ್ಕೆ ಬೇಕಾದ ಏರ್ಪಾಡು ಮಾಡಿದರು

ಸಾಯಂಕಾಲ ಸುಮಾರು ಆರುಗಂಟೆಯ ವೇಳೆಗೆ ನಂಜುಂಡಯ್ಯ ಬೀಗರೊಡನೆ ಬಂದಿಳಿದರು ಬೀಗರ ಕಡೆಯಲ್ಲಿ ಪರಮೇಶ್ವರಯ್ಯ, ನಂಜಮ್ಮ, ಪುರೋಹಿತರು ಮತ್ತು ಮದುವೆಯ ಹುಡುಗ ಮಾತ್ರ ಬಂದಿರುವರೆಂದು ತಿಳಿದಮೇಲೆ ರಂಗಮ್ಮನಿಗೆ ನಿರಾಶೆಯಾಯಿತು ವರಪೂಜೆ ಮೊದಲಾದ ಶಾಸ್ತ್ರೋಕ್ತ ವಿಧಿಗಳು ನಿರ್ವಿಘ್ನವಾಗಿ ನೆರವೇರಿದುವು

ಮರುದಿನ ಸುಮಾರು ಹತ್ತು ಗಂಟೆಗೆ ಧಾರೆಯ ಮುಹೂರ್ತ ನಿಶ್ಚಯವಾಗಿತ್ತು

ಶುಭಮುಹೂರ್ತದಲ್ಲಿ ಸುಮಿತ್ರೆ ನಾಗರಾಜನ ಧರ್ಮಪತ್ನಿಯಾದಳು

ನಿರ್ವಿಘ್ನವಾಗಿ ಕಾರ್ಯ ನೆರವೇರಿದುದಕ್ಕಾಗಿ ಎಲ್ಲರೂ ಆನಂದಪರವಶರಾದರು

ಊಟದ ಸಮಯಕ್ಕೆ ಸರಿಯಾಗಿ ಬಂದ ಶಂಕರನಾರಾಯಣ ಜೋಯಿಸರನ್ನು ಸೀತಾರಾಮು ಆದರಿಸಿ ತಾಂಬೂಲ ಕೊಟ್ಟ ಬಂದ ಬ್ರಾಹ್ಮಣ ಹೊರಡುವ ಸೂಚನೆ ತೋರಿಸಲಿಲ್ಲ ಪರಮೇಶ್ವರಯ್ಯ, ನಾಗರಾಜನಿಗೆ ಕಸಿವಿಸಿಯಾಯಿತು

ತಾಂಬೂಲವನ್ನು ಕೈಲಿ ಹಿಡಿದುಕೊಂಡು ಬಂದು ತಾವೇ ಮಾತು ತೆಗೆದರು

"ಏನು ಅಳಿಯದೇವರೇ ? ಚೆನ್ನಾಗಿರುವಿರಾ ?"

ನಾಗರಾಜ ಮಾತು ಕೇಳದವನಂತೆ ನಟಿಸಿದ ಜೋಯಿಸರು ಅಲ್ಲಿಗೂ ಬಿಡಲಿಲ್ಲ

"ಏನಯ್ಯಾ ನನ್ನ ನೆನಪಿಲ್ಲವೇ ?"

ನಾಗರಾಜನಿಗೆ ಮಾತಾಡದೆ ನಿರ್ವಾಹವೇ ಇರಲಿಲ್ಲ

"ಸರಿಯಾಗಿ ನೆನಪಿಲ್ಲ"

"ಇದೇನಯ್ಯಾ ಹೀಗೆ ಹೇಳುವೆ ? ನಿನ್ನ ಮೊದಲ ಮದುವೆಯಲ್ಲಿ ನಾನಲ್ಲವೇ ಹೆಣ್ಣಿನ ಕಡೆಯ ಪುರೋಹಿತ ಈಗಲೇ ಇಷ್ಟು ಅರುಳು ಮರುಳಾದರೆ ಸರಿಯುಪ್ಪ"

ಇವರ ಮಾತುಕಥೆಯನ್ನೇ ಸೀತಾರಾಮು ಗಮನಿಸುತ್ತಿದ್ದ

ಹತ್ತಿರದಲ್ಲಿದ್ದ ಸೀತಾರಾಮುವಿನ ಕಿವಿಗೆ ಈ ಮಾತು ಬೀಳದಂತೆ ಮಾಡಲು ನಾಗರಾಜನಿಗೆ ಸಾಕುಸಾಕಾಗಿ ಹೋಯಿತು ಜೋಯಿಸರ ಬಾಯಿಗೆ ಬೀಗವೇ ಇರಲಿಲ್ಲ

ಈ ಪ್ರಕರಣವನ್ನು ಸೀತಾರಾಮು ಅಲ್ಲಿಗೇ ಬಿಡಲಿಲ್ಲ

ಊಟವಾದ ನಂತರ ಶಂಕರನಾರಾಯಣ ಜೋಯಿಸರನ್ನು ಕರೆದು ಕೊಂಡು ಹೊಳೆಯ ತೀರಕ್ಕೆ ಹೋಗಿ ಕುಳಿತು

"ಜೋಯಿಸರೇ ? ಮದುಗನ ವಿಷಯ ನಿಮಗೆ ಬಹಳ ತಿಳಿದಿರು ವಂತಿದೆ"

"ಗೊತ್ತಿಲ್ಲದೇ ಏನಪ್ಪಾ ಈ ಪುಣ್ಯಾತ್ಮನಿಗೆ ಮೊದಲ ಸಲ ಮದುವೆ ಮಾಡಿಸಿದವನೇ ನಾನು ಇವನಿಗೆ ಕೂದುವುದಕ್ಕಿಂತಾ ಹುಡುಗಿಯನ್ನು ಕೆರೆಗೋ ಭಾವಿಗೋ ನೂಕಬಹುದಾಗಿತ್ತಲ್ಲಯ್ಯಾ ಯಾಕೆ ? ನಿಮಗೆ ಇನ್ನೆಲ್ಲೂ ಗಂಡು ಸಿಕ್ಕಲಿಲ್ಲವೇ ?"

"ಮೊದಲ ಮದುವೆ ಅಂದಿರಲ್ಲಾ ಹೆಣ್ಣು ಯಾವುದು ?"

"ಬೆಂಗಳೂರಿನ ಹತ್ತಿರ ಒಂದು ಹಳ್ಳಿ ಅವರು ನನಗೆ ಬಹಳ ಬೇಕಾದವರು"

"ಈಗ ಹೆಂಡತಿ ಜೀವಂತವಾಗಿರುವಳೇ ?"

"ಎರಡು ಮಕ್ಕಳನ್ನು ಬಿಟ್ಟು ಪುಣ್ಯಾತ್ಗಿತ್ತಿ ಸತ್ತು ಸಂಪಿಗೆ ಮರವಾಗಿ ದ್ದಾಳೆ"

"ಮಕ್ಕಳು ಬೇರೆ ಇದೆಯೇನು ?"

"ಹೌದಪ್ಪಾ ಈ ಅನ್ಯಾಕಾರ ಅವರನ್ನು ಸಾಕಲಾರದೆ 'ಅನಾಥಾಶ್ರಮ'ಕ್ಕೆ ಸೇರಿಸಿದ್ದಾನೆ"

"ನಿಜ ಹೇಳುತ್ತಿರುವಿರಾ ಜೋಯಿಸರೇ ?"

"ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ ಬಿಡಪ್ಪಾ"

"ಹೂಂ ಮುಂದೆ ಹೇಳಿ ಜೋಯಿಸರೇ ?"

"ನನಗೀ ವಿಷಯ ನಿನ್ನೆಯೇ ತಿಳಿದಿದ್ದರೆ ಖಂಡಿತವಾಗಿ ಈ ಮದುವೆ ಆಗಮಾಡಿಸುತ್ತಿರಲಿಲ್ಲ ನನ್ನ ಕುಟುಂಬವನ್ನು ನೋಡಲು ನಾಸಿಕ್‌ಗೆ ಬಂದಿದ್ದೆ ನಮ್ಮ ಜನದ ಮದುವೆಯೊಂದು ನಡೆಯುತ್ತಿದೆಯೆಂದು ತಿಳಿದು ಬಂತು. ಹಾಗೆಯೇ ಒಳಹೊಕ್ಕು ಯಾರಾದರೂ ಗುರುತಿನವರಿರುವರೇ ನೋಡಿ ಹೋಗೋಣವೆಂದು ಬಂದೆನಪ್ಪಾ ನಿನ್ನೆಯೇ ನನಗೀ ಬುದ್ಧಿ ಹುಟ್ಟಿದ್ದರೆ ಚೆನ್ನಾಗಿರುತ್ತಿದ್ದಿತು ಆ ಹೆಣ್ಣುಮಗುವಿನ ಭವಿಷ್ಯ ಉಳಿಸಬಹುದಾಗಿದ್ದಿತು"

"ಈಗಲಾದರೂ ಬುದ್ಧಿ ಬಂದು ನಮ್ಮ ಹುಡುಗಿಯನ್ನು ಸರಿಯಾಗಿ ಬಾಳಿಸಬಹುದು ಜೋಯಿಸರೇ ಯಾಕೆ ಅನುಮಾನವೇ ?"

"ಇವನಿಗೆ ಬುದ್ಧಿ ಬರುವುದು ಚಿತೆಯಮೇಲಿಟ್ಟಾಗಲೇ ?"

"ಯಾಕೆ ಜೋಯಿಸರೇ ? ಹೀಗೆನ್ನುವಿರಿ ?"

"ಇವನಿಗೆ ಒಂದೊಂದು ಚಟವಿದೆಯೇನಪ್ಪಾ ? ಹೋಗಲಿ ಬಿಡು ಹೇಳಿ ನಾನು ಯಾಕೆ ಬಾಯಿ ಹೊಲಸುಮಾಡಿಕೊಳ್ಳಲಿ ?"

"ಪರವಾಗಿಲ್ಲ ಹೇಳಿ ಜೋಯಿಸರೇ ? ವಿಷಯ ತಿಳಿದ ಮೇಲೆ ಪೂರ್ತಿಯಾಗಿಯೇ ಕೇಳಿಬಿಡೋಣ"

"ಕೈತುಂಬಾ ತರುವ ಛಾತಿಯೇನೋ ಇದೆ"

" . "

"ಆದರೆ ಇವನ ಕೈಹಿಡಿದ ಹುಡುಗಿಯ ಬಾಳು ನರಕವಾಗುತ್ತದೆ, ಮದುವೆಯಾದವಳಲ್ಲದೆ ಹಂಗಾಮಿ ಸಂಬಂಧಗಳೂ ಬೇಕಾದಷ್ಟಿವೆಯಪ್ಪಾ"

ಸುಮಿತ್ರೆಯ ಭವಿಷ್ಯ ನೆನೆದು ಸೀತಾರಾಮುವಿಗೆ ಸಂಕಟವಾಯಿತು

"ಸಾಕು ಸುಮ್ಮನಿರಿ ಜೋಯಿಸರೇ ಕೇಳಲಾರೆ" ಎಂದು ಕಿವಿ ಮುಚ್ಚಿಕೊಂಡು ಹೊರಡಲು ಎದ್ದು ನಿಂತ

ಉಟ್ಟಿದ್ದ ಕಚ್ಚೆಪಂಚೆಯನ್ನು ಸರಿಮಾಡಿಕೊಳ್ಳುತ್ತಾ ಜೋಯಿಸರೂ ಹೊರಡಲನುವಾದರು

ಸೀತಾರಾಮುವಿಗೆ ಸಮಾಧಾನವೆನ್ನುವುದು ಲೇಶಮಾತ್ರವೂ ಉಳಿದಿರಲಿಲ್ಲ ಮನಬಂದಂತೆ ಸುತ್ತಾಡಿಕೊಂಡು ಸಂಜೆಯ ವೇಳೆಗೆ ಛತ್ರ ತಲುಪಿದ ಗಂಡನ ಸ್ಥಿತಿ ಕಂಡು ವಿಶಾಲಾಕ್ಷಮ್ಮ ಭಯಪಟ್ಟಳು ಸೀತಾರಾಮುವಿನ ನಡವಳಿಕೆ ನರಸಿಂಹಯ್ಯನಿಗೆ ಅರ್ಥವೇ ಆಗಲಿಲ್ಲ ತನ್ನ ಪಾಲಿಗೆ ಬಂದ ಕೆಲಸಗಳನ್ನು ಅವನು ಕಾಟಾಚಾರಕ್ಕೆ ನಿರ್ವಹಿಸುತ್ತಿರುವುದನ್ನು ಕಂಡು ನರಸಿಂಹಯ್ಯ ಹೇಳಿದ

"ನಿನಗೆ ಹುಷಾರಿಲ್ಲವೆಂದು ಕಾಣುತ್ತದೆ ಸುಮ್ಮನೆ ಕುಳಿತುಕೋ ಸೀತಾರಾಮು"

ಸೀತಾರಾಮುವಿಗೆ ಇಷ್ಟೇ ಸಾಕಾಗಿತ್ತು ತನ್ನ ಪಾಡಿಗೆ ಒಂದು ಕಡೆ ಕುಳಿತು ಯೋಚನೆಯಲ್ಲಿ ಲೀನನಾದ ನಾಗರಾಜನ ಮುಖ ಕಂಡರೆ ಅವನ ಮೈ ಚಿಟಗುಟ್ಟುತ್ತಿದ್ದಿತು ಸುಮಿತ್ರಳಿಗಾಗಿ ತನ್ನ ಕೋಪವನ್ನಡಗಿಸಿಕೊಳ್ಳುತ್ತಿದ್ದ

# ೩೦

ಮದುವೆಯನ್ನು ಮಾಡಿ ನರಸಿಂಹಯ್ಯ ಗೆದ್ದ

ಬೀಗರನ್ನೆಲ್ಲಾ ಕಳುಹಿಸಿದ ಮೇಲೆ ಹೆಣ್ಣಿನ ಕಡೆಯವರು ಒಂದು ದಿನ ಛತ್ರದಲ್ಲಿಯೇ ಉಳಿದರು

ಸ್ವರ್ಣ ಸುಮಿತ್ರೆಯ ಎಡೆಬಿಡದಿರುವುದನ್ನು ಕಂಡು ಉಮಾ ಹಾಸ್ಯ ಮಾಡುತ್ತಿದ್ದಳು

"ಸುಮಿ ಗಂಡನ ಮನೆಗೆ ಹೋಗುತ್ತಾಳಲ್ಲ ನೀನೇನು ಮಾಡು ತ್ತೀಯಾ ?"

ಸ್ವರ್ಣನಿಗೆ ಏನು ಹೇಳಬೇಕೆಂಬುದು ತೋರುತ್ತಿರಲಿಲ್ಲ ನಪ್ಪೆಮುಖ ಹಾಕಿಕೊಂಡು ಇಬ್ಬರನ್ನೂ ನೋಡುತ್ತಿದ್ದಳು ತಂಗಿಯ ಮ್ಲಾನವದನ ನೋಡಲಾರದೆ ಸುಮಿತ್ರೆ ಬಾಚಿ ತಬ್ಬಿಕೊಂಡು,

"ಸುಮ್ಮನಿರು ಸ್ವರ್ಣ ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ" ಎಂದು ರಮಿಸುತ್ತಿದ್ದಳು

ಊಟ ಮುಗಿಸಿ ಆರಾಮವಾಗಿ ಕುಳಿತಾಗ ಸೀತಾರಾಮು ಮಾತು ತೆಗೆದ,

"ಈ ಮದುವೆಗೆ ನೀನು ದುಡುಕಿದೆ ನರಸಿಂಹ"

"ಯಾಕಯ್ಯಾ ? ಈಗೇನು ಅನರ್ಥವಾಗಿರುವುದು ?"

"ಗಂಡಿನ ಕಡೆಯ ಪರಮೇಶ್ವರಯ್ಯ ಕೊರವ ನಿಮಗೆ ಮೋಸ ಮಾಡಿದ್ದಾನೆ"

"ಏನು ವಿಷಯ ಸೀತಾರಾಮಯ್ಯನವರೇ"

ಎಲೆಡಿಕೆ ಮೆಲ್ಲುತ್ತಾ, ಹಾಗೆಯೇ ದಿಂಬಿಗೆ ತಲೆಕೊಟ್ಟಿದ್ದ ನಂಜುಂಡಯ್ಯ ಚಟ್ಟನೆದ್ದು ಕುಳಿತರು

ಸೀತಾರಾಮು ಸವಿಸ್ತಾರವಾಗಿ ವರನ ವಿಷಯ ತಿಳಿಸಿದ

“ಇದೆಲ್ಲಾ ನಿಮಗೆ ಹೇಗೆ ತಿಳಿಯಿತು ಸೀತಾರಾಮಯ್ಯ” ನಂಜುಂಡಯ್ಯ ಕೇಳಿದರು

‘ನಂಜನಗೂಡಿನವರ ಕಡೆಯಿಂದಲೇ ಸುದ್ದಿ ಬಂದಿದೆ’

“ನನಗೆ-ಏನಂತೂ ನಂಬಲಾರೆ ವರದೇಶ್ವರಯ್ಯ ತುಂಬ ಸಾತ್ವಿಕರಂತೆ ಕಾಣಿಸುತ್ತಾರೆ” ನರಸಿಂಹಯ್ಯ ಹೇಳಿದ

“ವರದೇಶ್ವರಯ್ಯ ಸಾತ್ವಿಕನಾದರೇನು ಅಂತಹವರ-ವರ ಕಿಡಿಗೇಡಿ” ಸೀತಾರಾಮು ಕೋಪದಿಂದ ನುಡಿದ

ಸೀತಾರಾಮುವಿನ ಮಾತು ನರಸಿಂಹಯ್ಯನಿಗೆ ನುಂಗಲಾರದ ತುತ್ತಾಯಿತು

ನಂಜುಂಡಯ್ಯ “ನನ್ನ ಅಪ್ಪನೆಂದು ಮರ್ಯಾದೆ ಕೊಟ್ಟಿದಕ್ಕೆ ಈ ರೀತಿಯೇ ಮಾಡುವುದು? ಹೋಗಿ ಅವನಿಗೆ ಸರಿಯಾದ ಶಾಸ್ತಿಮಾಡುತ್ತೇನೆ” ಎಂದು ಹಾರಾಡಿದರು ತಾವು ಕೈ ಹಾಕಿದ ಕೆಲಸ ಈ ರೀತಿ ಮುಕ್ತಾಯಗೊಂಡಿತಲ್ಲ ಎಂದು ಅವರಿಗೆ ಅತ್ಯಂತ ಸಂಕಟವಾಗಿದ್ದಿತು

ನಂಜುಂಡಯ್ಯನವರನ್ನು ಶಾಂತರನ್ನಾಗಿ ಮಾಡುವುದರಲ್ಲಿ ಸೀತಾರಾಮು ಸುಸ್ತಾದ

‘ನಾಗರಾಜ ನಮ್ಮ ಸುಮಿತ್ರೆಯ ಗಂಡನೆನ್ನುವುದನ್ನು ಮರೆಯಬಾರದು ನಂಜುಂಡಯ್ಯ ನಾವೀಗ ಆತುರಪಟ್ಟರೆ ಸುಮಿತ್ರೆಗೆ ನಾಳೆ ಅದರಿಂದ ತೊಂದರೆಯಾಗಬಹುದು’ ಎಂದು ಸಮಾಧಾನ ಹೇಳಿದ

“ಕೊನೆಗೂ ಸುಮಿತ್ರೆಗೆ ಕಷ್ಟಪಡುವುದೇ ಗಂಟಾಯಿತೆ?” ಎಂದು ನರಸಿಂಹಯ್ಯ ಮಮ್ಮಲ ಮರುಗಿದ

ಗಂಡನಿಂದ ವಿಷಯ ತಿಳಿದಮೇಲೆ ರಾಜಮ್ಮ,

“ನತದೃಷ್ಟ ಮುಂಡೇದು ಕೈ ಹಾಕಿದ ಕೆಲಸವೆಲ್ಲ ಹಾಳು ಈಗಲೇ ಹೀಗಾದರೆ ಮುಂದೆ ಕಟ್ಟಿಕೊಂಡು ಬಾಳಿಸುವನೇ? ನನಗೇ ಈ ಪ್ರಾರಬ್ಧ ಗಂಟು” ಎಂದು ಸುಮಿತ್ರೆಯಮೇಲೆ ದ್ವೇಷ ಕಾರಿದಳು

ಸುಮಿತ್ರೆ ಯಾರಿಗೂ ಮುಖ ತೋರಿಸದೆ ಒಂದು ರೂಮು ಸೇರಿದಳು

ಈ ವಾತಾವರಣದಲ್ಲಿ ತಾನು ಹೇಗಿರಬೇಕೆಂಬುದು ಉಮೆಗೆ ತಿಳಿಯು ಲಿಲ್ಲ ಹೆಂಡತಿಯ ಉದ್ವಿಗ್ನಗೊಂಡ ಮನಸ್ಸನ್ನು ಶಾಂತಗೊಳಿಸಲು ಚಂದ್ರಶೇಖರ ಉಮೆಯನ್ನು ನದಿಯ ತೀರಕ್ಕೆ ಕರೆದೊಯ್ದ

ಬರುವಾಗ ಇದ್ದ ಉತ್ಸಾಹಕ್ಕೆ ಘಟನೆಗಳು ತಣ್ಣೀರೆರಚಿದ್ದಿತ್ತು ನಿರುತ್ಸಾಹದಿಂದಲೇ ಎಲ್ಲರೂ ಗಂಟುಮೂಟೆಕಟ್ಟಿ ಪ್ರಯಾಣಕ್ಕೆ ಸಿದ್ಧರಾದರು

ನರಸಿಂಹಯ್ಯ ತಪ್ಪುಮಾಡಿದವನಂತೆ ಸುಮಿತ್ರೆಯಿಂದ ಮುಖ ಮರೆಸಿಕೊಂಡಿರಲು ಯತ್ನಿಸುತ್ತಿದ್ದ.

ತಂದೆಯ ಚರ್ಯೆಯನ್ನು ಗಮನಿಸುತ್ತಿದ್ದ ಸುಮಿತ್ರ, "ಎಲ್ಲರೂ ನನ್ನಿಂದ ದೂರವಾಗುತ್ತಿರುವರಲ್ಲಾ" ಎಂದು ದುಃಖಿಸಿದಳು

ತನ್ನ ಜೀವನದ ಒಂದು ಘಟ್ಟವಾದ ಮದುವೆ ತನ್ನನ್ನು ಕಗ್ಗನೆಯ ಕಾಡಲ್ಲಿ ಬಿಟ್ಟಿದೆಯೆಂದು ಭಾವಿಸಿ, ಸುಮಿತ್ರೆ ಚಡಪಿಸಿದಳು

ಗುಂಡಮ್ಮ, ನಂಜುಂಡಯ್ಯ ಎರಡುದಿನ ಬಂಗಳೂರಿನಲ್ಲಿದ್ದು ಹಾಸನಕ್ಕೆ ಹೊರಟರು

ಸುಮಿತ್ರೆಯ ಮದುವೆ ದುಃಖಾಂತ್ಯವಾಗಿ ಪರಿಣಮಿಸಿದುದನ್ನು ತಿಳಿದ ಮಂಜುಳೆ ಅದಕ್ಕೆ ಕಾರಣರಾದವರನ್ನೆಲ್ಲಾ ಮನಸ್ಸಿನೀ ನಿಂದಿಸಿದಳು ಅವಳ ಕೋಪ ತಗ್ಗಿಸಲು ನರಸಿಂಹಯ್ಯ ಪಟ್ಟ ಶ್ರಮವೆಲ್ಲ ನಿರರ್ಥಕವಾಯಿತು

"ಮೊದಲಿನಿಂದಲೂ ಹೀಗೆಯೇ ಮಾಡಿ ಆ ಹುಡುಗಿಯ ಬಾಳನ್ನು ಮಣ್ಣುಗೂಡಿಸಿದಿರಲ್ಲ ಈಗ ಸುಮಿತ್ರೆಗೆ ಮದುವೆಗೇನು ಆತುರವಾಗಿದ್ದಿತು ?"

"ಅಣಿಯಾದ ಗಂಡೆಂದು ಎಲ್ಲರೂ ಒಪ್ಪಿದರು ನಾನೂ ಮಾಡಿದೆ"

"ಹೇಗೋ ಕರ್ಮಕಳೆದುಕೊಂಡರೆ ಸಾಕೆನಿಸಿದ್ದಿತು ಮಾಡಿ ಮುಗಿಸಿದಿರಿ"

"ಸುಮಿತ್ರೆ ನನ್ನ ಮಗಳಲ್ಲವೇನೇ ? ಅವಳ ಸುಖ ದುಃಖ ನನಗೂ ಸೇರಿದುದಲ್ಲವೇ ?"

"ಅದಕ್ಕೇ ಮಾಡಿ ತೋರಿಸಿರುವಿರಲ್ಲ" ಮಂಜುಳೆ ಹಂಗಿಸಿದಳು.

ಇನ್ನು ಮಾತು ಬೆಳೆಸಿದರೆ ಪ್ರಯೋಜನವಿಲ್ಲವೆಂದುಕೊಂಡು ನರಸಿಂಹಯ್ಯ ಸುಮ್ಮನಾದ

"ಒಂದು ಪ್ರಕರಣ ಮುಗಿಯಿತಲ್ಲ ಸುಮಿತ್ರೆಯನ್ನು ಸ್ಕೂಲಿಗಾದರೂ ಸೇರಿಸಿ ವಿದ್ಯೆಯಾದರೂ ಇರಲಿ" ಮಂಜುಳೆ ಮುಂದಿನ ದಾರಿಹುಡುಕಿದಳು

"ಇನ್ನು ನಮ್ಮದೇನಿದೆ ಮಂಜುಳ ಅವಳ ಗಂಡ ಒಪ್ಪಿದರೆತಾನೇ ಓದಿಸುವುದು ?"

"ಅವನು ಒಪ್ಪುವುದೇ ಇಲ್ಲ"

"ಮಾಡುವುದೇನು ? 'ಕೊಟ್ಟಹೆಣ್ಣು ಕುಲಕ್ಕೆ ಹೊರಗು' ಎಂದು ಕೊಂಡು ಸುಮಿತ್ರೆಯನ್ನು ಕಳುಹಿಸಿಕೊಡಬೇಕಾಗುತ್ತದೆ"

"ಮಾಡುವುದೆಲ್ಲಾ ಮಾಡಿ ಈಗ ಸುಮಿತ್ರೆಯ ಹಣೆಯಬರಹವೆಂದು ತೆಪ್ಪಗಾಗಿರುವಿರಿ ನಿಮಗೇನು ಹೇಳಿ ಮುಂದೆ ಅನುಭವಿಸುವವರಿಗಲ್ಲವೇ ಆ ಕಷ್ಟ ಅರಿವಾಗುವುದು

"ಕೆಟ್ಟ ಮೇಲೆ ಬುದ್ಧಿ ಬಂತು ಅನ್ನುವ ಹಾಗೆ ಈಗೇನಾದರೂ ವಿವೇಕ ಬಂದಿರಬಹುದೆನಿಸುತ್ತದೆ"

"ಅಷ್ಟಲ್ಲಿ ಪರಿವರ್ತನೆಯಾಗಿದ್ದರೆ ಹೀಗೇಕೆ ಮೋಸದಿಂದ ಮದುವೆಯಾಗುತ್ತಿದ್ದ ? ನಿಮ್ಮ ಅಳಿಯನ ಗುಣಗಾನ ಸಾಕುಮಾಡಿ. ಕೇಳಲಾರೆ" ಮಂಜುಳೆ ಬೇಸರದಿಂದ ಸುಮ್ಮನಾದಳು

ಮದುವೆ ಮುಗಿದ ಇಪ್ಪತ್ತು ದಿನಗಳ ಮೇಲೆ ನರಸಿಂಹಯ್ಯನಿಗೆ ಅಳಿಯನಿಂದ ಪತ್ರ ಬಂದಿತು ತನ್ನ ಸ್ನೇಹಿತರಿಗಾಗಿ ಶುಕ್ರವಾರದ ದಿನ ಒಂದು ಸಂತೋಷಕೂಟವೇರ್ಪಡಿಸಿರುವುದಾಗಿ ತಿಳಿಸಿ, ಆ ಸಮಾರಂಭಕ್ಕೆ ಸುಮಿತ್ರೆಯೊಡನೆ ಬರಬೇಕೆಂದು ಆಹ್ವಾನಿಸಿದ್ದ ರಾಜಮ್ಮ ಅಳಿಯನನ್ನು ಮೆಚ್ಚುತ್ತಾ,

"ಮರ್ಯಾದಸ್ಥ ನೀವೇನೇನೋ ಯೋಚಿಸಿ ಕೊರಗುತ್ತೀರಿ" ಎಂದು ಗಂಡನಿಗೆ ಹೇಳಿದಳು

"ನೀನು ಹೇಳಿದಂತೇ ಆಗಲಿ – ನಾನು ಬದುಕುತ್ತೇನೆ" ನರಸಿಂಹಯ್ಯ ದೂರದ ಆಸೆಯಿಂದ ನುಡಿದ.

"ನಾನೂ ಮೈಸೂರಿಗೆ ಬರುತ್ತೇನೆ" ಎಂದು ಸ್ವರ್ಣ ಕುಣಿದಾಡಿದಳು

"ತನ್ನ ಗಂಡನ ಬಗ್ಗೆ ಎಲ್ಲರೂ ತಳೆದಿದ್ದ ಅಭಿಪ್ರಾಯ ಬದಲಾಗಲಿ" ಎಂದು ಸುಮಿತ್ರೆ ಹಾರೈಸಿದಳು ಲಗ್ನ ಕಾಲದ ಗಡಿಬಿಡಿಯಲ್ಲಿ ಸುಮಿತ್ರೆ ನಾಚಿಕೆಯಿಂದ ಸರಿಯಾಗಿ ನೋಡಿರಲಿಲ್ಲವಾದುದರಿಂದ ನಾಗರಾಜನನ್ನು ಕಾಣುವ ಕುತೂಹಲ ಸಹಜನಾಗಿ ಅವಳಲ್ಲಿ ನೆಲೆಗೊಂಡಿದ್ದಿತು ಪ್ರಯಾಣದ ದಿನವನ್ನು ಸುಮಿತ್ರೆ ಕಾತರದಿಂದ ನಿರೀಕ್ಷಿಸತೊಡಗಿದಳು

ಭಯ – ಕುತೂಹಲಗಳೆರಡೂ ಅವಳಲ್ಲಿ ಸಮ್ಮಿಲನಗೊಂಡಿದ್ದವು ದಿನವೊಂದು ಯುಗವಾಗಿ ಸುಮಿತ್ರೆಗೆ ಭಾಸವಾಗುತ್ತಿದ್ದುವು

ನರಸಿಂಹಯ್ಯ ಸೀತಾರಾಮುವನ್ನು ಆಹ್ವಾನಿಸಿದಾಗ ಅವನು ಖಂಡಿತವಾಗಿ ನುಡಿದು, ಆಮಂತ್ರಣವನ್ನು ತಿರಸ್ಕರಿಸಿ,

"ಆ ಅಯೋಗ್ಯನ ಮುಖ ನೋಡಿದರೆ ನನ್ನ ರಕ್ತ ಕುದಿಯುತ್ತೆ ನರಸಿಂಹ ಕೋಪದ ವೇಳೆಯಲ್ಲಿ ನಾನು ಹಗುರನಾದ ಮಾತಾಡಿ ಸಮಾರಂಭ ವಿರಸದಲ್ಲಿ ಮುಕ್ತಾಯಗೊಳ್ಳಬಹುದು. ನಾನು ಬರುವುದಿಲ್ಲವೆಂದು ಮನಸ್ಸು ಚಿಕ್ಕದು ಮಾಡಿಕೊಳ್ಳಬೇಡ ಸಂತೋಷವಾಗಿ ಹೋಗಿ ಬನ್ನಿ ಸುಮಿತ್ರೆ ಎಲ್ಲಾದರೂ ಸುಖವಾಗಿರಬೇಕು ಅದು ಮುಖ್ಯ"

ಸೀತಾರಾಮುವಿನ ಮಾತು ಕೇಳಿದ ನರಸಿಂಹಯ್ಯ ಪುನಃ ಗೆಳೆಯನನ್ನು ಬಲವಂತ ಮಾಡಲಿಲ್ಲ

ಬಟ್ಟೆಬರೆಗಳನ್ನು ಹವಣಿಸುವುದರಲ್ಲೇ ರಾಜಮ್ಮನ ಹೊತ್ತು ಕಳೆದು ಹೋಯಿತು ಅವಳ ಸಿದ್ಧತೆಗಳನ್ನು ಗಮನಿಸಿದ ನರಸಿಂಹಯ್ಯ ಕೇಳಿದ

"ಎಷ್ಟು ದಿನದ ಪ್ರೋಗ್ರಾಂ ಇಟ್ಟಿದ್ದೀನೆ ರಾಜು ?"

"ಹೋದ ಮರುದಿನವೇ ಬರಲು ಸಾಧ್ಯವೇನ್ರೀ ? ಒಂದು ವಾರವಾದರೂ ಆಗಬಹುದು" ರಾಜಮ್ಮ ದೂರಾಲೋಚನೆ ಮಾಡಿದಳು.

ಹೆಂಡತಿಯ ಮಿತಿಮೀರಿದ ಉತ್ಸಾಹವನ್ನು ಕಂಡು ನರಸಿಂಹಯ್ಯ "ಸುಮಿತ್ರೆಗಿಂತಲೂ ನಿನಗೇ ಪ್ರಯಾಣದಲ್ಲಿ ಆಸಕ್ತಿ ಹೆಚ್ಚು"

"ಹೂಂ ನನ್ನ ಳಿಯನ ಮನೆ ನೋಡುವ ಕುತೂಹಲ ನನಗಿಲ್ಲವೇ ?"

ನರಸಿಂಹಯ್ಯ ಮನದಲ್ಲೇ, 'ಇಂತಹ ಪರಿಶುದ್ಧ ಹೃದಯದವಳನ್ನು ನಿಷ್ಕಾರಣವಾಗಿ ಎಲ್ಲರೂ ನಿಂದಿಸುತ್ತಿದ್ದರಲ್ಲಾ' ಎಂದು ದುಃಖಿಸಿದ.

## ೩೧

ನಾಗರಾಜ ಅತ್ಯುತ್ಸಾಹದಿಂದ ಅತ್ತೆ, ಮಾವ ಮತ್ತು ಸುಮಿತ್ರೆಯ ಸ್ವಾಗತಕ್ಕೆ ಸಿದ್ಧಪಡಿಸತೊಡಗಿದ ಮೊದಲು ವಾಸಿಸುತ್ತಿದ್ದ ಸಣ್ಣ ಮನೆ ತನ್ನ ಘನತೆಗೆ ಕುಂದೆನ್ನಿಸಿತು ತಾನು ಸಂಸಾರ ಹೂಡಲು ಆ ಮನೆ ಯಾತಕ್ಕೂ ಸಾಲದೆಂದು ಊಹಿಸಿದ ನಾಗರಾಜ ಚಾಮರಾಜಪುರದಲ್ಲಿ ಅಚ್ಚುಕಟ್ಟಾದ ಒಂದು ಮನೆಯನ್ನು ಬಾಡಿಗೆಗೆ ಹಿಡಿದು, ಸುಣ್ಣ ಬಣ್ಣ ಮಾಡಿಸಿದ ಕರಿಯ ಮರದ ಮಂಚ, ಕುರ್ಚಿ, ಕನ್ನಡಿಯಬೀರು ಎಲ್ಲವನ್ನೂ ತಂದು ಅಲಂಕರಿಸಿದ ತನ್ನ ರಸಿಕತೆಯನ್ನು ಕಂಡಕ್ಷಣವೇ ಸುಮಿತ್ರ ತನಗೆ ಮನಸೋಲಬೇಕೆಂದು ಅವನ ಚಪಲ

ನಾಗರಾಜನ ಉತ್ಸಾಹ ಕಂಡು ಅವನೊಡನೆ ಪಾಲುಗಾರನಾಗಿದ್ದ ಸೋಮಸುಂದರಂ ಗೆಳೆಯನನ್ನು ಹಾಸ್ಯಮಾಡಿದ

"ಏನು ನಾಗರಾಜ ಈಗಲೇ ಹೀಗಾದರೆ ಮುಂದಕ್ಕೆ ನಿನ್ನ ದರ್ಶನವೂ ದುರ್ಲಭವೆಂದು ತೋರುತ್ತದೆ"

"ಹಾಗೇನಿಲ್ಲ ಸೋಮು ಅವರೆಲ್ಲ ಬಂದರೂ ಒಂದು ನಾಲ್ಕು ದಿನಗಳಿರಬಹುದು—ಅಷ್ಟೆ"

"ಯಾಕಯ್ಯಾ?"

"ಇರುತ್ತಲ್ಲಪ್ಪಾ. ನೂರೆಂಟು ಶಾಸ್ತ್ರಗಳು ಅವುಗಳನ್ನೆಲ್ಲಾ ಮುಗಿಸಿಯೇ ಕಳುಹಿಸುವುದು"

"ನಿನಗಾ ಶಾಸ್ತ್ರಗಳೆಲ್ಲ ಕಾಟವಾಗಿದೆ"

ನಾಗರಾಜ ನಕ್ಕು ಸುಮ್ಮನಾದ.

"ನಿನಗೊಂದು ವಾರದ ರಜ ಕೊಟ್ಟುಬಿಡುತ್ತೇನಪ್ಪ ಹೊಸ ಹೆಂಡತಿ ಯೊಡನೆ "

"ಥ್ಯಾಂಕ್ಸ್ ಪಾಲ್ (Thank you Pal)" ನಾಗರಾಜ ಗೆಳೆಯು ನನ್ನು ಅಭಿನಂದಿಸಿದ

"ಸೋಮು ಹಾಗೆಯೇ ಒಂದು ವಾರದವರೆಗೆ—'

"ಅವಶ್ಯಕವಾಗಿ ನನ್ನ ಸ್ಟ್ಯಾಂಡರ್ಡ್ (Standard) ನಿಮಗೇ ಮೀಸಲು"

"ವೆರಿ ಮೆನಿ ಥ್ಯಾಂಕ್ಸ್ ಸೋಮು (Very many thanks Somu)" ಗೆಳೆಯನಿಗೆ ನಾಗರಾಜ ಮತ್ತೊಮ್ಮೆ ಕೃತಜ್ಞತೆಯನ್ನರ್ಪಿಸಿದ

"ಒಣ ಉಪಚಾರ ಇರಲಿ—ಬೇಗ ಹೊರಡಯ್ಯ "

"ಆಹ್ವಾನ ಪತ್ರಿಕೆ ಅಚ್ಚುಮಾಡಿಸಬೇಕು ಕೆಲಸವಿದೆ ಸೋಮು "

"ಕಾರಿನಲ್ಲೇ ಪ್ರೆಸ್ ಕಡೆಗೂ ಹೋದರಾಯಿತು "

"ಈ ದಿನ ಬೇಡ ಸೋಮು "

"ಪಂಚಾಯ್ತಿಗೆ ಶುರುಮಾಡಿದ ಮದುವೆಯಾದ ಮೇಲೆ ನಿನ್ನ ದರ್ಶನವೇ ಇಲ್ಲವೆಂದು ಮೀರಿ ಬಡುಕೋತಿದ್ದಾಳೆ "

" "

ನಾಗರಾಜ ಹಿಂದುಮುಂದು ಯೋಚಿಸಹತ್ತಿದುದನ್ನು ಕಂಡ ಸೋಮ ಸುಂದರಂ ಅವನ ರಟ್ಟೆ ಹಿಡಿದೆಬ್ಬಿಸಿದ

"ಆಗಲೇ ಇವನಿಗೇನೋ ಬಂದುಬಿಟ್ಟಿತು ನೀನು ಮಹಾ ಸತೀ ವ್ರತ—ಕಂಡಿದೀನಿ—ಏಳಯ್ಯಾ "

ಮರುಮಾತಾಡದೆ ನಾಗರಾಜ ಗೆಳೆಯನನ್ನು ಹಿಂಬಾಲಿಸಿದ

ಗುರುವಾರ ಸಂಜೆ ನರಸಿಂಹಯ್ಯ ಸಂಸಾರ ಸಮೇತ ಬಂದಿಳಿದ ಸ್ಟೇಷನ್ನಿಗೆ ಕಾರು ತೆಗೆದುಕೊಂಡು ಹೋಗಿ ನಾಗರಾಜ ಅತ್ತೆಮಾವಂದಿರನ್ನು ಎದುರುಗೊಂಡ. ಅಳಿಯ ಮಾಡುತ್ತಿದ್ದ ಮರ್ಯಾದೆಯಿಂದ ನರಸಿಂಹಯ್ಯನ ಮನಸ್ಸು ಆಹ್ಲಾದಗೊಂಡಿತು. ಆದರೂ ತೋರಗೊಡದೆ,

"ನೀವು ಯಾಕಿಷ್ಟು ಶ್ರಮ ತೆಗೆದುಕೊಂಡಿರಿ ಅಡ್ರೆಸ್ ಇತ್ತಲ್ಲ ಕರೆದುಕೊಂಡು ಬರುತ್ತಿದ್ದೆ "

"ಹೇಗೂ ಬ್ಯಾಂಕಿಗೆ ಬರಬೇಕಾಗಿದ್ದಿತು—ಹಾಗೆಯೇ ನೋಡಿ ಹೋದ ರಾಯಿತೆಂದು ಬಂದ"

ಅವರಿಗಾಗಿಯೇ ತಾನು ಕಾರು ತಂದುದೆಂದು ತಿಳಿಸಿದರೆ ತನ್ನ ಘನತೆಗೆ ಕುಂದೆಂದು ಭಾವಿಸಿದ ನಾಗರಾಜ ಮರು ಕಾರಣ ಸೂಚಿಸಿದ್ದ

ಹಾಗೆ ಟ್ರಂಕನ್ನು ಕಾರಿಗೆ ನಾಗಿಸಿದ ಮೇಲೆ ರಾಜಮ್ಮ, ಸುಮಿತ್ರೆ, ಸ್ವರ್ಣ ಮೂವರೂ ಹಿಂದಿನ ಸೀಟಲ್ಲಿ ಕುಳಿತರು ನರಸಿಂಹಯ್ಯ ಅಳಿಯನ ಪಕ್ಕದಲ್ಲಿ ಕುಳಿತ ನಾಗರಾಜನೇ ಸ್ವತಃ ಕಾರು ನಡೆಸುತ್ತಿದ್ದುದನ್ನು ಕಂಡು ಸುಮಿತ್ರೆ ಹೆಮ್ಮೆಪಟ್ಟಳು ಸ್ವರ್ಣನ ಉತ್ಸಾಹ ತಡೆಯಲಸಾಧ್ಯ ವಾಗಿದ್ದಿತು ನಿಮಿಷಕ್ಕೊಂದು ಬಾರಿ ಗಾಜಿನ ಮೂಲಕ ಹಣಕಿ ನೋಡು ತ್ತಿದ್ದಳು ಅವಳ ಆಸಕ್ತಿಯನ್ನು ಗಮನಿಸಿದ ನಾಗರಾಜ ನಗುತ್ತಾ ಗಾಜನ್ನು ಕೆಳಕ್ಕೆ ಸರಿಸಿದ

ಸ್ವರ್ಣ ಅವಮಾನಿತಳಂತೆ ಸುಮ್ಮನೆ ಕುಳಿತಳು

ಮನೆಯ ಮುಂದೆ ಕಾರು ನಿಲ್ಲಿಸಿ ನಾಗರಾಜ ಬಾಗಿಲನ್ನು ತೆಗೆದು "ಇಳಿಯಿರಿ" ಎಂದ

ರಾಜಮ್ಮ ನಿಧಾನವಾಗಿ ಕೆಳಗಿಳಿದಳು ಸುಮಿತ್ರೆ ಸ್ವರ್ಣನೂ ತಾಯಿ ಯನ್ನು ಹಿಂಬಾಲಿಸಿದರು ನಾಗರಾಜ ಎಲ್ಲರನ್ನೂ ಮನೆಯೊಳಗೆ ಕರೆದೊಯ್ದ.

ಮನೆ ನೋಡಿ ರಾಜಮ್ಮ ಭ್ರಾಂತಳಾಗಿ ಹೇಳಿದಳು

"ಮನೆ ಎಷ್ಟು ಚೆನ್ನಾಗಿದೆಯೇ ! ಸುಮಿತ್ರ ನೀನು ಪುಣ್ಯಮಾಡಿದ್ದೆ"

ಸುಮಿತ್ರೆ ಮುಗುಳ್ನಕ್ಕು ಸಂತೋಷ ಸೂಚಿಸಿದಳು,

ಸ್ವರ್ಣ ಕುತೂಹಲದಿಂದ ಮನೆಯೆಲ್ಲವನ್ನೂ ವೀಕ್ಷಿಸಿ ರಾಜಮ್ಮ ಸುಮಿತ್ರ ಕುಳಿತಿದ್ದೆಡೆ ಬಂದು ಪಿಸಗುಟ್ಟಿದಳು

"ಸುಮಿ ಒಳಗೆಲ್ಲ ಎಷ್ಟು ಚೆನ್ನಾಗಿದೆ ಅಂತ ಪರದೆ ಎಲ್ಲ ಹಾಕಿದೆ—ಆ ರೂಮಿನಲ್ಲಿ ಕನ್ನಡಿಯ ಬೀರು ಇಟ್ಟಿದೆ ನಾನು ನೋಡಿ ಬಂದೆ"

"ಎಂದೂ ಕಾಣದಿದ್ದವಳಂತಾಡಬೇಡ ಬಾಯಿಮುಚ್ಚೆ ಸಾಕು" ರಾಜಮ್ಮ ಮೆಲ್ಲನೆ ಮಗಳ ಮೇಲೆ ರೇಗಿದಳು.

ಸುಮಿತ್ರೆ ತಗ್ಗಿಸಿದ ತಲೆ ಎತ್ತಿರಲಿಲ್ಲ

ಮೂರು ನಾಲ್ಕು ಬಾರಿ ಹೆಂಗಸರ ಕಡೆ ತಿರುಗಿದ ನಾಗರಾಜ ಕೊನೆಗೆ ಹೇಳಿದ

"ನಿಮ್ಮನ್ನು ಎದುರುಗೊಳ್ಳಲು ಮನೆಯಲ್ಲಿ ಹೆಂಗಸರೇ ಇಲ್ಲ ನಿಮಗೆ ಬೇಸರಬರುವುದೇನೋ"

"ಹಾಗೇನಿಲ್ಲ ಇದೂ ನಮ್ಮ ಮನೆಯೇ" ರಾಜಮ್ಮ ತಕ್ಷಣ ಹೇಳಿದಳು

"ಹಾಗೆ ಭಾವಿಸುವುದು ನಿಮ್ಮ ದೊಡ್ಡತನ"

ರಂಗಮ್ಮ ಮಾಡಿಕೊಟ್ಟಿದ್ದ ತಿಂಡಿಯ ಗಂಟು ಬಿಚ್ಚಿ ಅಳಿಯನಿಗೆ ತಿಂಡಿ ಕೊಡಲೇ ಎಂದು ಒಂದು ಕ್ಷಣ ರಾಜಮ್ಮ ಯೋಚಿಸಿ ಏಳುವ ಪ್ರಯತ್ನ ಮಾಡಿದರು ಅತ್ತೆಯನ್ನು ಕೂಡಿಸುತ್ತಾ,

"ಕುಳಿತುಕೊಳ್ಳಿ. ಕಾಪಿ ಬರುತ್ತೆ" ಎಂದು ಹೇಳಿ ಒಳಗೆ ಹೋದ

ಅಳಿಯನ ನಡವಳಿಕೆಯನ್ನು ಮೆಚ್ಚುತ್ತಾ ರಾಜಮ್ಮ ಹೇಳಿದಳು

"ಎಷ್ಟು ವಿವೇಕಾಂದ್ರೆ ನಾವು ಬರುತ್ತೇವೆಂದು ಎಷ್ಟು ಅಣಿಮಾಡಿರುವರು ನೋಡಿ"

ನರಸಿಂಹಯ್ಯ ಮಾತನಾಡಲಿಲ್ಲ

"ಕಾರು ಸ್ವಂತದ್ದೇಂದ್ರೇ?" ರಾಜಮ್ಮ ಕುತೂಹಲದಿಂದ ಕೇಳಿದಳು

"ನನಗೆ ತಿಳಿಯದು" ಎನ್ನುವಂತೆ ನರಸಿಂಹಯ್ಯ ತಲೆಯಲ್ಲಾಡಿಸಿ,

"ಸ್ವಲ್ಪ ಹೊತ್ತು ಸುಮ್ಮನಿರಬಾರದೇ?" ಎಂದು ಹೆಂಡತಿಯ ಮೇಲೆ ರೇಗಿದ

ರಾಜಮ್ಮ ಬಾಯಿಮುಚ್ಚಿಕೊಂಡು ಕುಳಿತಳು

ಅಡಿಗೆಯವನ ಕೈಲಿ ಕಾಫಿ, ಉಪ್ಪಿಟ್ಟು ತೆಗೆಸಿಕೊಂಡು ಬಂದ ನಾಗರಾಜ ತಾನೇ ನಿಂತು ಎಲ್ಲರಿಗೂ ಕೊಡಿಸಿದ.

ಅಲ್ಪ ಫಲಾಹಾರ ಮುಗಿಸಿದ ಮೇಲೆ, ನಾಗರಾಜ ಮಾವನನ್ನು ಕೇಳಿದ.

"ಎಲ್ಲಾದರೂ ಹೊರಗೆ ಹೋಗಬೇಕಾಗಿದ್ದಿತೇ?"

"ಏನಿಲ್ಲ."

"ನನಗೆ ಸ್ವಲ್ಪ ಕೆಲಸವಿದೆ ಹೋಗಿ ಬೇಗ ಬಂದುಬಿಡುತ್ತೇನೆ ನೀವಿಲ್ಲಿಯೇ ವಿಶ್ರಮಿಸಿಕೊಳ್ಳುತ್ತಿರಬಹುದು ಪ್ರಯಾಣದಿಂದ ಬಳಲಿಕೆಯಾಗಿರಬೇಕು"

ಮಾವನನ್ನು ಉಪಚರಿಸಿ, ಅಡುಗೆಯವನಿಗೆ ಮತ್ತೊಮ್ಮೆ ಸೂಚನೆ ಕೊಟ್ಟು ನಾಗರಾಜ ಕಾರಿನಲ್ಲಿ ಹೊರಹೊರಟ

ಕಾರು ಶಬ್ದ ಕೇಳಿದ ಮೇಲೆ ಸುಮಿತ್ರೆ ಸರಿಯಾಗಿ ಉಸಿರುಬಿಟ್ಟಳು ಅವಳ ಸ್ಥಿತಿ ನೋಡಿ ರಾಜಮ್ಮ,

"ಯಾಕೆ ಹಾಗೆ ಹೆದರಿಕೊಳ್ಳುವೆ? ಅವರೇನು ಹುಲಿಯೆ ಕರಡಿಯೆ?"

'ನನಗೇಕೋ ಭಯವಾಗುತ್ತ ಚಿಕ್ಕಮ್ಮ"

"ಹುಚ್ಚು ಹುಡುಗಿಯಂತೆ ಆಡಬೇಡ, ಸುಮ್ಮನಿರು"

ರಾಜಮ್ಮ ಸುಮಿತ್ರೆಯೊಡನೆ ಮನೆಯನ್ನೊಂದುಬಾರಿ ಸುತ್ತಿಬಂದಳು ನಾಗರಾಜನ ಆಡಳಿತ, ವ್ಯವಸ್ಥೆ ರಾಜಮ್ಮನಿಗೆ ಬಹಳ ಹಿಡಿಸಿದ್ದಿತು

"ನಿನ್ನ ಗಂಡ ತುಂಬಾ ಒಳ್ಳೆಯವರು ಸುಮಿತ್ರ" ಎಂದು ಹೊಗಳಿದಳು

"ಅದೇನೇನೋ ಹೇಳುತ್ತಿದ್ದರಲ್ಲಾ ಚಿಕ್ಕಮ್ಮ" ಸುಮಿತ್ರೆ ತನ್ನ ಅನುಮಾನ ಪರಿಹರಿಸಿಕೊಳ್ಳಲೆತ್ನಿಸಿದಳು

"ಹೊಟ್ಟೆಯುರಿಕಿಚ್ಚಿಗೆ ಅವರಿವರು ಹೇಳುವ ಮಾತು ನಂಬಿಕೊಂಡು ಸುಮ್ಮನೆ ವ್ಯಥೆಪಡಬೇಡ"

"ಅವೆಲ್ಲ ಸುಳ್ಳೇ?"

"ಕೈ ಹುಣ್ಣಿಗೆ ಕನ್ನಡಿಬೇಕೇ? ಆಳಿಯಂದಿರು ಮಾಡುತ್ತಿರುವ ಕೆಲಸಗಳೇ ಅವರ ಮನಸ್ಸಿನ ಸಾಕ್ಷಿ—ನಿನ್ನ ಗಂಡನದು ಬಹಳ ದೊಡ್ಡ ಗುಣ"

ರಾಜಮ್ಮ ಸುಮಿತ್ರೆಯಲ್ಲಿ ಅಲ್ಪಸ್ವಲ್ಪ ನಂಬಿಕೆ ಹುಟ್ಟಿಸಿದ್ದರೂ, ಅವಳ ಮನದಲ್ಲಿ ಭಯ ಬೇರೂರಿದ್ದಿತು.

ನಾಗರಾಜನ ನಡವಳಿಕೆಯಿಂದ ನರಸಿಂಹಯ್ಯನೂ ಮನಸ್ಸು ಬದಲಾಯಿಸಬೇಕಾಗಿ ಬಂದಿತು

"ಸುಮ್ಮನೆ ಇಲ್ಲದ ಕಾಮ್ಮಾವ್ಯಸನ ಹಚ್ಚಿಕೊಂಡು ಕೊರಗಿದೆವು ಚಿನ್ನದಂಥಾ ಹುಡುಗ" ಎಂದುಕೊಂಡು ತೃಪ್ತಿಪಟ್ಟ

ಅಳಿಯ ತರಿಸಿಟ್ಟಿದ್ದ ತರಕಾರಿ, ಹೂವು, ಹಣ್ಣು, ಸಾಮಾನುಗಳನ್ನೆಲ್ಲಾ ಪರಿಶೀಲಿಸಿ ಬಂದ ರಾಜಮ್ಮ,

"ಇವರದೆಲ್ಲಾ ದೊಡ್ಡ ಆಡಳಿತಾಂದ್ರೆ. ಅಲ್ಲಿ ಸುರಿದಿರುವ ತರಕಾರಿ ರಾಶಿ ನೋಡಿ ಬನ್ನಿ" ಎಂದು ಗಂಡನನ್ನು ಆಹ್ವಾನಿಸಿದಳು

"ಹೂ. ದೊಡ್ಡ ಮನುಷ್ಯರ ಸಹವಾಸದಲ್ಲಿ ಓಡಾಡುವವರು ಅವರ ಅಂತಸ್ತಿಗೆ ಸರಿಯಾಗಿ ನಡೆದುಕೊಳ್ಳಬೇಡವೇ ?"

"ಸುಮ್ಮನೆ ಆ ಸೀತಾರಾಮು ಹಾರಾಡಿಬಿಟ್ಟರು. ಅವರನ್ನೂ ಕರೆತಂದು ತೋರಿಸಬೇಕಾಗಿದ್ದಿತು"

"ಯಾರೋ ಹೇಳಿದುವನ್ನು ಅವನೂ ನಂಬಿಕೊಂಡ. ಪಾಪ ಅವನಿಗೇನು ಗೊತ್ತೇ ?"

"ಸರಿಯಾಗಿ ವಿಷಯ ತಿಳಿಯದೆ ಯಾವ ಮಾತೂ ಆಡಬಾರದೂಂದ್ರೆ"

" "

"ಅವರಂದ ಒಂದು ಮಾತಿನಿಂದ ಎಷ್ಟು ಜನ ಕಣ್ಣೀರಲ್ಲಿ ಕೈತೊಳೆದಾಯಿತು ನೋಡಿ"

"ಹೋಗಲಿ ಬಿಡು. ಕಳೆದ-ಹೋದ ಮಾತು ಈಗೇಕೆ ?"

ರಾಜಮ್ಮ ಸುಮ್ಮನಾದಳು

ಊಟದ ವೇಳೆಗೆ ನಾಗರಾಜ ಮನೆಗೆ ಬಂದ. ನಾಗರಾಜನ ಸೂಚನೆಯಂತೆ ಅಡಿಗೆಯವನು ಒಂದು ಸಣ್ಣ ಔತಣವನ್ನೇ ತಯಾರಿಸಿದ್ದ

ಊಟಕ್ಕೆ ಕುಳಿತಾಗ ನರಸಿಂಹಯ್ಯ ಕೇಳಿದ

"ಪರಮೇಶ್ವರಯ್ಯನವರು ಬರುವುದಿಲ್ಲವೇ ?"

"ಕಾಗದವನ್ನೇನೋ ಹಾಕಿರುವೆನು. ನಾಳೆ ಬಂದರೂ ಬರಬಹುದು"

ಬೆಂಗಳೂರಿನ ಕಷ್ಟಸುಖಗಳ ವಿಷಯ ನರಸಿಂಹಯ್ಯ ಮಾತನಾಡಿದ. ನಾಗರಾಜ ತನಗಾ ವಿಷಯಗಳಲ್ಲಿ ಉತ್ಸಾಹವೇನೂ ಇಲ್ಲದಿದ್ದರೂ ಮಾವನಿಗೆಲ್ಲಿ ಅಸಮಾಧಾನವಾಗುತ್ತದೆಯೋ ಎಂದು ಕೇಳತೊಡಗಿದ

ಮಾರನೆಯ ಬೆಳಗ್ಗೆ ಔತಣ ಸಮಾರಂಭ ಒಂದು ಘಳಿಗೆಯೂ ಪುರುಸೊತ್ತಿಲ್ಲದೆ ನಾಗರಾಜ ಓಡಾಡಿದ. ಸುಮಾರು ಹತ್ತುಗಂಟೆಯ ವೇಳೆಗೆ

ಪರಮೇಶ್ವರಯ್ಯ ಬಂದರು ಅವರೊಬ್ಬರನ್ನೇ ನೋಡಿದ ನಾಗರಾಜ ಕೇಳಿದ

"ಅತ್ತೆಯನ್ನೇಕೆ ಕರೆದುಕೊಂಡು ಬರಲಿಲ್ಲ ಮಾವಯ್ಯ"

"ಇರುತ್ತಲ್ಲಾ ಹೆಂಗಸರೆಂದರೆ ನೂರೆಂಟು ಕಾರಣಗಳು" ಎಂದು ಹೇಳಿ ಪರಮೇಶ್ವರಯ್ಯ ನಕ್ಕು ಕಾರಣ ಸೂಚಿಸಿದರು

ಅವರು ಕೊಟ್ಟ ಕಾರಣ ಎಲ್ಲರಿಗೂ ಸಮಂಜಸವಾಗಿ ತೋರಿತು ನಾಗರಾಜ ಒಬ್ಬನೇ ಸಿಕ್ಕಿದಾಗ ಪರಮೇಶ್ವರಯ್ಯ ಹೇಳಿದರು

"ಅವಳಿಗೂ ಬರಬೇಕೆಂದು ಬಹಳ ಆಸೆಯಿತ್ತು ನಾಗರಾಜ ನಿನ್ನ ಮನೆ, ಆಡಳಿತ ನೋಡಿ ಎಷ್ಟೋ ಸಂತೋಷಪಡುತ್ತಿದ್ದಳು"

"ಮತ್ತೆ ಯಾವಾಗಲಾದರೂ ಖಂಡಿತವಾಗಿ ಕರೆತನ್ನಿ ಮಾವಯ್ಯ"

"ಈಗಲೇ ಹೊರಡುತ್ತೇನೆಂದು ಗಂಟು ಕಟ್ಟಿದ್ದಳು"

"ಹಾಗಾದರೆ ನೀವು ಸುಳ್ಳು ಹೇಳಿ ನಂಬಿಸಿದಿರಿ"

"ಸಂದರ್ಭ ಹಾಗೆ ಒದಗಿಬಂತು ನಾನೇನು ಮಾಡಲಿ ಹೇಳು?"

" "

"ಅವಳೀಗ ಬಂದಿದ್ದರೆ ಸುಮ್ಮನಿರುತ್ತಿದ್ದಳೇ? ವ್ಯವಹಾರ ಜ್ಞಾನ ಅನ್ನೋದು ಸ್ವಲ್ಪವೂ ಇಲ್ಲ ನಡೆದುದನ್ನೆಲ್ಲ ಸವಿಸ್ತಾರವಾಗಿ ವರ್ಣಿಸಿ ಬೀಗರ ಮನಸ್ಸು ಕೆಡಿಸುತ್ತಿದ್ದಳು ಇವೆಲ್ಲವನ್ನೂ ಯೋಚಿಸಿಕೊಂಡೇ ನಾನು ಬಿಟ್ಟುಬಂದೆ"

"ಈಗ ಅವರಿಗೇನೂ ತಿಳಿದಿಲ್ಲವೆಂದು ನಂಬುತ್ತೀರಾ?"

"ತಿಳಿದಿದ್ದರೆ ಅವರು ಹೀಗಿರಲು ಸಾಧ್ಯವೇ? ನಮಗೆ ಮೋಸಮಾಡಿದರೆಂದು ಒಂದಲ್ಲ ಒಂದುಸಲ ದೂರುತ್ತಿದ್ದರು'

"ನನಗೇನೋ ನಂಬಿಕೆಯಾಗುವುದಿಲ್ಲ ಆ ಜೋಯಿಸ ವರದಿ ಒಪ್ಪಿಸಿರಬಹುದು"

"ಮೊನ್ನೆ ನಂಜುಂಡಯ್ಯ ಸಿಕ್ಕಿದರು ಅವರು ವಿಷಯ ತಿಳಿದಂತೆ ಏನೂ ಮಾತಾಡಲಿಲ್ಲ"

" "

"ಇಷ್ಟರವೇಲೆ ತಿಳಿದರೂ ಏನೀಗ ? ಹೇಗಿದ್ದರೂ ತಾಳಿಕಟ್ಟಿಯಾಗಿದೆ ನೀನೇ ದಿಕ್ಕೆಂದು ಅವರು ಬಂದು ಕಾಲು ಕಟ್ಟಿಕೊಳ್ಳಲೇ ಬೇಕಾಗುತ್ತೆ "

"ನಿಜ ಆದ ಮದುವೆ ಹಿಂದಿರುಗಿಸಲು ಸಾಧ್ಯವೇ ?"

"ತದರ ಒಂದು ಮಾತು ಹೆಣ್ಣುಮಗುವನ್ನು ಕಷ್ಟಪಡಿಸಬೇಡ ಇನ್ನಾದರೂ ಬುದ್ಧಿ ಕಲಿತುಕೊಂಡು ಸರಿಯಾಗಿರು ನನ್ನ ತಂಗಿಯ ಮಗ ನಾಲ್ಕುಜನವಂತೆ ಮರ್ಯಾದೆಯಾಗಿ ಬಾಳುತ್ತಲಿರುವನೆಂದರೆ ನನಗೂ ಸಂತೋಷ ಸತ್ತು ಸ್ವರ್ಗದಲ್ಲಿರುವ ನಿಮ್ಮಮ್ಮನ ಆತ್ಮಕ್ಕೂ ಶಾಂತಿದೊರೆಯುತ್ತದೆ "

"ಈಗ ನೀವೇ ನೋಡುತ್ತಿರುವಿರಲ್ಲಾ ಮಾವಯ್ಯಾ "

"ನಿನ್ನದು ಬಿಡು ಅತೀವೃಷ್ಟಿ – ಅನಾವೃಷ್ಟಿ ಮನಸ್ಸು ಬಂತೆಂದರೆ ರಾಕ್ಷಸನಂತೆ ತಂದು ಬಲಿಹಾಕುತ್ತೀ ಇಲ್ಲವೆಂದರೆ ತಿಂಗಳುಗಟ್ಟಳೆ ತಿರುಗಿಯೂ ನೋಡುವುದಿಲ್ಲ "

ತನ್ನ ಬೇಳೆಯುಕಾಳು ಪರಮೇಶ್ವರಯ್ಯನ ಮುಂದೇನೂ ಬೇಯುವುದಿಲ್ಲವೆಂದರಿತು ನಾಗರಾಜ ಸುಮ್ಮನಾದ

ರಾಜಮ್ಮ ನಡಗರದಿಂದ ಸುಮಿತ್ರೆಗೆ ಅಭ್ಯಂಜನ ಸ್ನಾನಮಾಡಿಸಿ, ತಾನೇ ತಲೆಬಾಚಿ ಹೂ ಮುಡಿಸಿದಳು.

ಹೊಸಲಂಗ ಹಾಕಿಕೊಂಡು ಮನೆಯೆಲ್ಲವನ್ನೂ ಸುತ್ತುತ್ತಿದ್ದ ಸ್ವರ್ಣ ಬಂದು ಹೇಳಿದಳು

"ಅಕ್ಕಾ ಭಾವ ನಿನ್ನನ್ನು ಕೂಗಿದರು '

"ಯಾಕಂತ ?" ಕಂಪಿಸುವ ಧ್ವನಿಯಲ್ಲಿ ಸುಮಿತ್ರೆ ಕೇಳಿದಳು

"ನನಗೆ ತಿಳಿಯದು " ಸ್ವರ್ಣ ತಲೆಯಲ್ಲಾಡಿಸಿದಳು

ಸುಮಿತ್ರೆಯ ಹೃದಯ ವೇಗವಾಗಿ ಹೊಡೆದುಕೊಳ್ಳಲಾರಂಭಿಸಿತು

ಹೋಗಲು ಅವಳು ಅನುಮಾನಿಸುತ್ತಿದ್ದುದನ್ನು ಕಂಡು ರಾಜಮ್ಮ

"ಹೋಗಿ ಬಾ ಅಳಿಯಂದಿರಿಗೆ ಬೇಸರವಾಗಬಹುದು " ಎಂದಳು

"ನಾನೊಲ್ಲೆ ಹೋಗು ಚಿಕ್ಕಮ್ಮ ನನಗೆ ಭಯವಾಗುತ್ತೆ "

"ಇಷ್ಟು ದೊಡ್ಡವಳಾಗಿಯೂ ಎಳೆಕೂಸಿನಂತಾಡುತ್ತಿಯಲ್ಲ ಹೋಗೇ ಸಾಕು."

ಸುಮಿತ್ರೆ ಕದಲಲಿಲ್ಲ ಅವಳ ಮೊಂಡುತನ ಕಂಡು ರಾಜಮ್ಮನಿಗೆ ಕೋಪ ಮಿತಿಮೀರಿತು

"ಹೋಗಿ ಬಾರೇ ಎಷ್ಟುಹೊತ್ತು ಅವರು ನಿನಗಾಗಿ ಕಾದಿರಬೇಕು"

ಸುಮಿತ್ರೆಗೆ ಹೊರಡದೆ ವಿಧಿ ಇರಲಿಲ್ಲ.

ಸುಮಿತ್ರೆಯನ್ನು ನಿರೀಕ್ಷಿಸುತ್ತಿದ್ದ ನಾಗರಾಜನಿಗೆ ನಿಮಿಷಗಳೂ ನಿಧಾನವಾಗಿ ಸಾಗುತ್ತಿದ್ದಂತೇ ಭಾಸವಾಯಿತು, ಕಾತುರದಿಂದ ನಿರೀಕ್ಷಿಸು ತ್ತಿದ್ದ ಅವನಿಗೆ ಸುಮಿತ್ರೆ ಬೇಕೆಂದು ಮಾಡಿದ ನಿಧಾನದಿಂದ ಕೋಪಕೆರಳಿತು

ಸುಮಿತ್ರೆ ಬಂದವಳು ಬಾಗಿಲಬಳಿಯೇ ನಿಂತಳು ಅವಳನ್ನು ಕಂಡೊ ಡನೇ ನಾಗರಾಜ ಗಡಸುಧ್ವನಿಯಲ್ಲಿ ಕೇಳಿದ

"ಯಾಕಿಷ್ಟು ತಡಮಾಡಿದೆ?"

ಗಂಡನ ಧ್ವನಿಕೇಳಿದ ಸುಮಿತ್ರೆಗೆ ಜಂಘಾಬಲವೇ ಉಡುಗಿದಂತಾ ಯಿತು ಕಣ್ಣಲ್ಲಿ ಹನಿಗೂಡಿತು–ಮಾತು ಹೊರಡಲಿಲ್ಲ

ಸುಮಿತ್ರ ನಿಂತೇ ಇದ್ದಳು

ಅವಳ ರೀತಿ ಕಂಡು ನಾಗರಾಜ, "ಶುದ್ಧ ಹಳ್ಳಿಯ ಗುಗ್ಗು" ಎಂದು ತನ್ನಲ್ಲೇ ಹೇಳಿಕೊಂಡ ಒಂದುಕ್ಷಣ, "ಈ ಹುಡುಗಿ ನನ್ನ ಅಭಿರುಚಿಗೆ ತಕ್ಕಂತ ಹೊಂದಿಕೊಂಡಿರಬಲ್ಲಳೇ" ಎಂಬ ಅನುಮಾನ ಮೂಡಿತು.

ಗಂಡನ ಅನಾಸಕ್ತಿಕಂಡು ಸುಮಿತ್ರೆಗೆ ತಾನೇನು ಮಾಡಬೇಕೆಂದು ತಿಳಿಯಲಿಲ್ಲ

ಎಷ್ಟೋ ಹೊತ್ತಿನ ನಂತರ ನಾಗರಾಜ ಕೇಳಿದ

"ಯಾರು ನಿನಗೆ ತಲೆ ಬಾಚಿದರು?"

"ಚಿಕ್ಕಮ್ಮ"

"ಸರಿಯಾಗಿ ಜಡೆ ಹೆಣೆದುಕೊಳ್ಳಲೂ ನಿನಗೆ ಬರದೇನು? ನಿನ್ನನ್ನು ನೋಡಿದರೆ ನನ್ನ ಸ್ನೇಹಿತರು ನಗುತ್ತಾರೆ"

ಸುಮಿತ್ರೆ ಮಾತನಾಡಲಿಲ್ಲ

"ನಿನಗೆ ಸರಿಯಾದ ಸೀರೆಯಿಲ್ಲವೇ?"

ಸುಮಿತ್ರೆಯ ಮೌನವೇ ಉತ್ತರವಾಯಿತು ಹೆಂಡತಿಯ ಮೌನ ದಿಂದ ನಾಗರಾಜನಿಗೆ ತುಸು ಬೇಸರವೇ ಬಂದಿತು.

"ಮೂಗಿಯೇನೇ ನೀನು ?"

ಸುಮಿತ್ರೆ ಅದಕ್ಕೂ ತುಟಿಯೆರಡು ಮಾಡಲಿಲ್ಲ ನಾಗರಾಜ ಕೋಪದಿಂದ ಕಾಗದದ ಪೊಟ್ಟಣವನ್ನು ಡ್ರಾಯರಿಂದೆಳೆದು ಸುಮಿತ್ರೆಗೆ ಕೊಡುತ್ತಾ,

"ಊಟಕ್ಕೆ ನನ್ನ ಸ್ನೇಹಿತರೆಲ್ಲಾ ಬರುತ್ತಾರೆ ಎಲೆ ಹಾಕುವವರಂತೆ ಈ ಸೀರೆಯಲ್ಲಿರಬೇಡ ಹೋಗಿ ಮೊದಲು ನಿನ್ನ ಪತ್ತಲ ಬದಲಾಯಿಸು"

ಗಂಡನ ನಡವಳಿಕೆ ಕಂಡು ಸುಮಿತ್ರೆಗೆ ನಿಜವಾಗಿಯೂ ಭಯವಾಯಿತು ಪೊಟ್ಟಣ ತನ್ನ ಕೈ ಸೇರಿದುದೇ ತಡ ಚಿಕ್ಕಮ್ಮನ ಬಳಿಗೆ ಓಡಿದಳು

ಸುಮಿತ್ರೆಯ ಚರ್ಯೆಯಿಂದ ನಾಗರಾಜನಿಗೆ ಬೇಸರವಾಯಿತು "ಇದೆಲ್ಲಿಯ ಪ್ರಾರಬ್ಧ ಗಂಟುಬಿತ್ತು" ಎಂದು ಹೇಳಿಕೊಂಡು ಮನದ ಅಶಾಂತಿಯನ್ನು ಹೋಗಲಾಡಿಸುವಂತೆ ಕೊಠಡಿಯಲ್ಲಿಯೇ 'ಶತಪಥ' ತಿರುಗಲಾರಂಭಿಸಿದ

ಸುಮಿತ್ರೆಯನ್ನು ಕಂಡೊಡನೆ ? ರಾಜಮ್ಮ ಕೇಳಿದಳು

"ಏನಂದರೇ ? ಇದೇನಿದು ?"

ಸುಮಿತ್ರೆ ಮಾತಾಡದೆ ಕೈಲಿದ್ದ ಪೊಟ್ಟಣವನ್ನು ಚಿಕ್ಕಮ್ಮನ ಕೈಗಿತ್ತಳು ಪೊಟ್ಟಣ ಬಿಚ್ಚಿದ ರಾಜಮ್ಮ ಸೀರೆಗಳನ್ನು ನೋಡಿ,

"ಎಷ್ಟು ಚೆನ್ನಾಗಿದೆಯೇ" ಎಂದು ಆಶ್ಚರ್ಯವ್ಯಕ್ತಪಡಿಸಿದಳು

"ಇದನ್ನುಟ್ಟುಕೊಳ್ಳಬೇಕಂತೆ"

"ಉಟ್ಟುಕೋ"

"ಸುಮಾ ಈ ನೀಲೀ ಸೀರೆ ಉಟ್ಟುಕೊಳ್ಳೆ ತುಂಬಾ ಚೆನ್ನಾಗಿದೆ" ಸ್ವರ್ಣ ತನ್ನಿಷ್ಟ ಬಂದ ಸೀರೆ ಆರಿಸಿದಳು

ಸುಮಿತ್ರೆ ಎರಡು ಸೀರೆಗಳನ್ನೂ ಪರೀಕ್ಷಿಸಿದ ಮೇಲೆ ಒಂದು ಕಡೆಇಟ್ಟು,

"ನಾನೊಲ್ಲೆ ಚಿಕ್ಕಮ್ಮ ನಾನಿದನ್ನು ಉಡುವುದಿಲ್ಲ"

"ನಿನ್ನ ಗಂಡನಿಗೆ ಕೋಪ ಬರುವುದಿಲ್ಲವೇನೇ ?"

"ಬಂದರೆ ಬರಲಿ"

"ಈ ಸೀರೆ ನನಗುಡಿಸೇ" ಸ್ವರ್ಣ ಕೇಳಿದಳು

"ಅವಳಿಗೆ ತಂದ ಸೀರೆ ನಿನಗ್ಯಾಕೆ? ಸುಮ್ಮನಿರು" ರಾಜಮ್ಮ ಮಗಳನ್ನು ಅಟ್ಟಿ ಸುಮ್ಮನಾಗಿಸಿದಳು

"ಬೇಗ ಏಳು ಸುಮಿತ್ರಾ ಎಲ್ಲರೂ ಬರುವ ವೇಳೆಯಾಯಿತು"

"ಥೂ ಎಷ್ಟು ಸಣ್ಣದಾಗಿದೆ ನೋಡು ಚಿಕ್ಕಮ್ಮ ಇದನ್ನುಟ್ಟು ಹೇಗೆ ಬರಲಿ? ನನಗೆ ನಾಚಿಕೆಯಾಗುತ್ತೆ"

"ಈಗೆಲ್ಲಾ ಇಂತಹ ಸೀರೆಯನ್ನೇ ಉಡುವುದು ಏಳು"

ಸುಮಿತ್ರೆ ಅರ್ಧ ಮನಸ್ಸಿನಿಂದ ಸೀರೆಯುಟ್ಟಳು ತನಗೆ ಹಿತವಿಲ್ಲದ ಕಾರ್ಯವನ್ನವಳು ಬಲವಂತಕ್ಕೆ ಮಾಡುತ್ತಿದ್ದುದರಿಂದ, ಸುಮಿತ್ರೆಗೆ ಮುಜುಗರವೆನಿಸುತ್ತಿದ್ದಿತು

ಸುಮಿತ್ರ ಮಾಡಿಕೊಂಡಿದ್ದ ಅಲಂಕಾರದಿಂದ ತನ್ನ ಹೆಂಡತಿ ತಾನು ತಿಳಿದುದಕ್ಕಿಂತಲೂ ಅಸಂಸ್ಕೃತಳೆಂದು ನಾಗರಾಜ ಮನಗಂಡು ಮತ್ತಷ್ಟು ಅಸಮಾಧಾನ ಹೊಂದಿದ

ಆಮಂತ್ರಿತರು ಒಬ್ಬೊಬ್ಬರಾಗಿ ಬರಲಾರಂಭಿಸಿದರು ಅವರಲ್ಲಿ ಬಹು ಜನ ಗಂಡಸರು ನಾಗರಾಜ ತನ್ನ ಸ್ನೇಹಿತರನ್ನು ಆದರದಿಂದ ಬರಮಾಡಿಕೊಂಡು ಕುಳ್ಳಿರಿಸಿದ ತನಗೆ ಆಪ್ತಮಿತ್ರರಾದ ಕೆಲವರಿಗೆ ಸುಮಿತ್ರೆಯ ಪರಿಚಯ ಮಾಡಿಸಬೇಕೆಂದು ನಾಗರಾಜನ ಹಂಬಲ ಸುಮಿತ್ರೆ ರೂಮು ಬಿಟ್ಟು ಹೊರಗೇ ಬರಲಿಲ್ಲ ಸ್ವರ್ಣನ ಕೈಲಿ ಹೇಳಿಕಳುಹಿಸಿದಾಗಲೂ ಸುಮಿತ್ರ ನಾಚಿಕೆಯಿಂದ ಒಳಗೇ ಉಳಿದುದನ್ನು ನೋಡಿ ಅವನ ಕೋಪ ಉಕ್ಕೇರಿತು ಕೋಪದಿಂದ ಒಳಗೊಳಗೇ ಕುದಿಯತೊಡಗಿದ

ಸ್ವಲ್ಪ ಹೊತ್ತಾದನಂತರ ನಾಗರಾಜನ ಗೆಳೆಯರು ಸೋಮಸುಂದರನ ಕಾರಿನಲ್ಲಿ ಬಂದಿಳಿದರು ಕಾರಿನ ಬಳಿಯೇ ಹೋಗಿ ನಾಗರಾಜ ಮೇರಿ, ಮಣಿ ಮತ್ತು ಸೋಮಸುಂದರನನ್ನು ಎದುರುಗೊಂಡ

"ಇವರು ನನ್ನ ಸಹಭಾಗಿಗಳು ಮಿ ಸೋಮಸುಂದರಂ" ನಾಗರಾಜ ಮಾವನಿಗೆ ತನ್ನ ಸಹೋದ್ಯೋಗಿಯ ಪರಿಚಯ ಮಾಡಿಕೊಟ್ಟ

"ನಿಮ್ಮ ಪರಿಚಯವಾದುದು ಬಹಳ ಸಂತೋಷ" ನರಸಿಂಹಯ್ಯ ಕೈಕುಲುಕಿ ಸಂತೋಷ ವ್ಯಕ್ತಪಡಿಸಿದ

ಮೇರಿ ಮತ್ತು ಮಣಿ ಇಬ್ಬರೂ ನಸುನಗುತ್ತಾ ಒಳಗೆ ಹೋದರು ನಾಗರಾಜ ಅವರ ಜತೆ ಬಂದು ಮನೆ ತೋರಿಸಿದ

"ಎಲ್ಲಿ ರಾಜ್ ನಿಮ್ಮ ಮಿಸೆಸ್ ಕಾಣಿಸುವುದೇ ಇಲ್ಲವಲ್ಲಾ "

"ಅವರಿಗೆ ಸ್ವಲ್ಪ ನಾಚಿಕೆ ಬನ್ನಿ ಪರಿಚಯ ಮಾಡಿಸಿಕೊಡುತ್ತೇನೆ "

ಮೇರಿ ತನ್ನ ಕೈಯಲ್ಲಿದ್ದ ವ್ಯಾನಿಟಿ ಬ್ಯಾಗನ್ನು (Vanity Bag) ವರ್ತುಲಾಕಾರವಾಗಿ ತಿರುಗಿಸುತ್ತಾ ನಾಗರಾಜನನ್ನು ಹಿಂಬಾಲಿಸಿದಳು ಮಣಿ ಮೇರಿಯ ಮುಖ ನೋಡಿ ನಸುನಕ್ಕಳು

ತನ್ನ ಗಂಡನ ಜತೆಯಲ್ಲಿದ್ದವರನ್ನು ನೋಡಿದ ಸುಮಿತ್ರೆಗೆ ನಡುಕ ಪ್ರಾರಂಭವಾಯಿತು ಇವರೆದುರು ತನಗಿನ್ನೇನು ಅವಮಾನ ಕಾದಿದೆಯೋ ಎಂದು ಅವಳು ಭಯಪಟ್ಟು ಎದ್ದುನಿಂತಳು ಸ್ವರ್ಣ ಸುಮಿತ್ರೆಯ ಸೆರಗು ಹಿಡಿದೇ ನಿಂತಿದ್ದಳು

"ಈಕೆ ನನ್ನ ಸ್ನೇಹಿತೆ ಮಿಸ್ ಮೇರಿ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವವರು ಇವರು ಮಿಸ್ ಮಣಿ – ಮಿಸ್ ಮೇರಿಯವರ ತಂಗಿ "

"ಇವರು ನನ್ನ ಮಿಸಸ್ – ಸುಮಿತ್ರಾ "

"ಗ್ಲಾಡ್ ಟು ಮೀಟ್ ಯೂ (Glad to meet you)"

ಮಿಸ್ ಮೇರಿ ಹಸ್ತಲಾಘವ ಕೊಡಲು ಕೈ ನೀಡಿದಳು ಸುಮಿತ್ರೆ ಏನು ಮಾಡಬೇಕೆಂದೂ ತಿಳಿಯದೆ ಸುಮ್ಮನೆ ನಿಂತಾಗ ಮಿಸ್ ಮೇರಿ ಕೈಯನ್ನು ಹಿಂದಕ್ಕೆಳೆದುಕೊಳ್ಳುತ್ತಾ,

"ಷಿ ಈಸ್ ಎ ಬ್ಯೂಟಿ ರಾಜ್, (She is a beauty Raj)" ಎಂದು ಸುಮಿತ್ರೆಯನ್ನು ಮೆಚ್ಚಿ ನುಡಿದಳು

ನಾಗರಾಜನಿಗೆ ಸ್ವರ್ಗ ಒಂದೇ ಗೇಣಾಗಿಯಿತು

"ನೀವು ಮಾತಾಡುತ್ತಿರಿ ಬಂದುಬಿಡುತ್ತೇನೆ" ಎಂದು ಹೇಳಿ ಅಡಿಗೆಯ ವಿಚಾರಣೆ ಮಾಡಲು ಒಳಗೆ ಹೋದ

ಮಿಸ್ ಮೇರಿ ಮತ್ತು ಮಿಸ್ ಮಣಿ ಇಬ್ಬರೂ ಒಂದೊಂದು ಕುರ್ಚಿಯನ್ನಲಂಕರಿಸಿದರು ನಿಂತಿದ್ದ ಸುಮಿತ್ರೆಗೆ ಮಣಿ ಕುರ್ಚಿ ತೋರಿಸಿದಳು.

"ಬನ್ನಿ ಕುಳಿತುಕೊಳ್ಳಿ "

ಮರುಮಾತಾಡದೆ ಸುಮಿತ್ರೆ ಕುಳಿತಳು ಸ್ವರ್ಣ ಅಕ್ಕನ ಬಳಿ ನಿಂತಳು

ಅಕ್ಕತಂಗಿಯರಿಗೆ ಹೊತ್ತು ಹೇಗೆ ಕಳೆಯಬೇಕೆಂದು ತೋರಲಿಲ್ಲ ರೂಮನ್ನು ಕೆಲವು ಕಾಲ ಪರೀಕ್ಷಿಸಿ, ಮೇರಿ ಹೇಳಿದಳು

"ರಾಜ್ ಹ್ಯಾಸ್ ಗಾಟ್ ಎ ವೆರಿ ಫೈನ್ ಟೇಸ್ಟ್ (Raj has got a very fine taste)"

ಮಿಸ್ ಮೇರಿ ಸುಮಿತ್ರೆಯನ್ನು ವಿಚಾರಿಸಿಕೊಳ್ಳಲಾರಂಭಿಸಿದಳು

"ನೀವಿಬ್ಬರೇ ಬಂದಿರುವಿರಾ ?"

"ಇಲ್ಲ ತಾಯಿ-ತಂದೆ ಬಂದಿರುವರು ತಾಯಿ ಒಳಗಿದ್ದಾರೆ"

"ಈ ಹುಡುಗಿ ನಿಮ್ಮ ತಂಗಿಯೇ ?"

"ಹೂಂ"

"ಹೆಸರೇನಮ್ಮಾ ?"

"ಸ್ವರ್ಣ" ಸ್ವರ್ಣ ಕೂಡಲೇ ಉತ್ತರವಿತ್ತಳು

"ಸ್ವರ್ಣ – ಸ್ವರ್ಣ" ಎಂದು ತನ್ನಲ್ಲೇ ಎರಡು ಬಾರಿ ಹೇಳಿಕೊಂಡು ಮಿಸ್ ಮೇರಿ ನಕ್ಕಳು

ಸುಮಿತ್ರೆಯುಟ್ಟಿದ್ದ ಸೀರೆಯ ಮೇಲೆ ಮೇರಿಯ ಗಮನ ಹರಿಯಿತು ಅದರ ಬಗ್ಗೆ ಅಕ್ಕ ತಂಗಿಯರು ಕೆಲವು ಹೊತ್ತು ಮಾತಾಡಿಕೊಂಡರು ಅದೂ ಬೇಸರ ಬಂತು

ನಾಗರಾಜನ ಧ್ವನಿ ಕೇಳಿದ ಮೇರಿ ಎದ್ದು ಹೊರಗೆ ಬಂದು,

"ರಾಜ್" ಎಂದು ಕೂಗಿದಳು

ಆತುರದಲ್ಲಿದ್ದ ನಾಗರಾಜ ಕೂಡಲೇ ಬಂದು,

"ಏನು ಬೇಕಾಗಿತ್ತು ?"

"ಬಹಳ ಬೇಸರ ರಾಜ್."

"ಯಾಕೆ ? ಸರಿಯಾಗಿ ಮಾತಾಡಿಸುವುದಿಲ್ಲವೇ ?"

"ಓ – ಷಿ ಈಸ್ ಟೂ ಷೈ (She is too shy)"

ನಾಗರಾಜ ಮಾತಾಡಲಿಲ್ಲ

"ಯಾವುದಾದರೂ ಪುಸ್ತಕವಿವೆಯೇ ರಾಜ್"

"ಫಿಲಂಫೇರ್ ಇದೆ ಕೊಡಲೇ"

"ನಾನು ಈ ತಿಂಗಳು ನೋಡೇ ಇಲ್ಲ ಕೊಡಿ" ಮೇರಿ ಕಾತರ ವ್ಯಕ್ತಪಡಿಸಿದಳು

ನಾಗರಾಜ ಕೂಡಲೇ 'ಫಿಲಂಫೇರ್' ತಂದಿತ್ತ,

"ನೋಡುತ್ತಿರಿ ಇನ್ನೊಂದು ಸ್ವಲ್ಪ ಹೊತ್ತು" ಎಂದು ಹೇಳಿ ಹೋದ

ಅಕ್ಕತಂಗಿಯರಿಬ್ಬರೂ ಸಿನಿಮಾಸಾಮ್ರಾಜ್ಯದಲ್ಲಿ ವಿಹರಿಸಿದರು ಸುಮಿತ್ರೆ ಅವರ ಹಾವಭಾವಗಳನ್ನೇ ನೋಡುತ್ತಾ ಕುಳಿತಳು

ನಾಗರಾಜ ಪುನಃ ಬಾಗಿಲಿಗೆ ಬಂದು ಸುಮಿತ್ರೆಯನ್ನು ಸನ್ನೆಮಾಡಿ ಕರೆದ ಸುಮಿತ್ರೆ ಹೋಗಲೇ ಬೇಡವೇ ಎಂದುಕೊಂಡೇ ಎದ್ದಳು

"ಅವರನ್ನು ಸರಿಯಾಗಿ ಮಾತಾಡಿಸಬಾರದೇ? ಅದೇನು ನಾಚಿಕೆ ನಿನಗೆ ಕೊಳ್ಳೆಹೋಗುತ್ತೆ?"

" "

"ಹೋಗಲಿ ಒಳಗೆ ಹೋಗಿ ಕಾಫಿಯನ್ನಾದರೂ ತಂದುಕೊಡು" ನಾಗರಾಜ ಆಜ್ಞೆವಿಧಿಸಿ ಹೊರಟುಹೋದ

ಕಾಫಿ ಬೆರಸಿ ಸುಮಿತ್ರೆ ತಂದಳು

"ಈಗೇಕೆ? ಬೇಡ" ಎಂದು ಮೇರಿ ಸುಮ್ಮನಾದಳು

"ತೆಗೆದುಕೋ ಅವರೇಕೆ ಮನಸ್ಸು ಚಿಕ್ಕದು ಮಾಡಿಕೊಳ್ಳಬೇಕು?" ಮಣಿ ಅಕ್ಕನಿಗೆ ಹೇಳಿದಳು

ಮಣಿಯ ಮಾತಿಗೆ ಮೇರಿ ಲಕ್ಷ್ಯ ಕೊಡಲಿಲ್ಲ

ಅಕ್ಕ ಅಸಮಾಧಾನಗೊಂಡುದನ್ನು ಕಂಡು ಮಣಿಯೂ ಸುಮ್ಮನಾದಳು

ಅವರ ನಡವಳಿಕೆಯಿಂದ ಬೇಸರಗೊಂಡು ಸುಮಿತ್ರೆ ಸುಮ್ಮನಾದಳು ಪುನಃ ಬಂದ ನಾಗರಾಜ ಹಾಗೆಯೇ ಉಳಿದಿದ್ದ ಕಾಫಿಯನ್ನು ನೋಡಿದ ಮೇಲೆ ಬಲವಂತ ಮಾಡಿದ

ನಾಗರಾಜ ಕಣ್ಮರೆಯಾದಮೇಲೆ ಮಣಿ ಅಕ್ಕನನ್ನು ಹಾಸ್ಯಮಾಡಿ,

"ನಿನಗೆ ಅವರೇ ಬಂದು ಉಪಚಾರ ಹೇಳಬೇಕಿತ್ತೇನೋ" ಎಂದಳು.

ಮೇರಿ ಅರ್ಥವತ್ತಾಗಿ ಮಣಿಯನ್ನು ಚಿವುಟಿ, "ಸುಮ್ಮನಿರೇ ಸದ್ಯ" ಎಂದಳು

ಹನ್ನೆರಡು ಗಂಟೆಗೆ ಸರಿಯಾಗಿ ಎಲೆ ಹಾಕಲ್ಪಟ್ಟಿತು ನಾಗರಾಜ ಸ್ವಯಂವಿಚಾರಣೆಗೆ ನಿಂತು ಗೆಳೆಯರಿಗೆ ಎರಡೆರಡು ಬಾರಿ ಲಾಡು, ಚಿರೋಟಿ ಒಡಿಸುವಂತ ಮಾಡಿದ ಅತಿಥಿಗಳು ಕಂಠಪೂರ್ತಿ ಹೊಡೆದು ತೇಗಿ, "ಹೀಗೆಯೇ ಮುಂದಕ್ಕೂ ಊಟ ಹಾಕಯ್ಯಾ" ಎಂದು ಹೇಳಿ ಸಂತೋಷ ವ್ಯಕ್ತಮಾಡಿದರು

ಸುಮಿತ್ರ ಮೇರಿ, ಮನೆಯವರಿಗೆ ಎಲಡಿಕೆ ಕೊಟ್ಟಳು ನಾಗರಾಜ ಜ್ಞಾಪಕದಿಂದ ತಿಂಡಿಯ ಪೊಟ್ಟಣ ಕಟ್ಟಿ ಮೇರಿಯ ಕೈಗಿತ್ತ

ಸೋಮಸುಂದರಂ ಹೊರಗೆ ಕಾಯುತ್ತಿದ್ದುದರಿಂದ ಅಕ್ಕತಂಗಿಯ ರಿಬ್ಬರೂ ಅವಸರವಸರವಾಗಿ ಎಲ್ಲರಿಂದಲೂ ಬೀಳ್ಕೊಂಡರು

ಹೊರಬಂದಾಗ ಮೇರಿ ಕೇಳಿದಳು

"ಎಂದು ಪುನಃ ನಿಮ್ಮ ದರ್ಶನ ರಾಜ್ ?"

"ಸದ್ಯದಲ್ಲೇ ಬರುವೆ" ನಾಗರಾಜ ಉತ್ತರಿಸಿದ

"ಮರೆಯುವುದಿಲ್ಲವಷ್ಟೆ ?"

"ಸಾಧ್ಯವೇ ?" ನಾಗರಾಜ ನಗುತ್ತಾ ಕೇಳಿದ

ಇಬ್ಬರೂ ಕಾರಿನಲ್ಲಿ ಕುಳಿತರು ಸೋಮಸುಂದರಂ "ನಾಳೆ ಬಂದು ನೋಡುತ್ತೇನೆ" ಎಂದು ಕಾರನ್ನು ಸ್ಟಾರ್ಟ್ ಮಾಡಿದ

ಮೇರಿ, ಮಣಿ ಇಬ್ಬರೂ ನಾಗರಾಜನಿಗೆ "ಟಾ ಟಾ" ಹೇಳಿದರು

ಸ್ವಲ್ಪ ದೂರ ಬಂದ ಮೇಲೆ ಸೋಮಸುಂದರಂ,

"ನವವಧು ಹೇಗಿದ್ದಾಳೆ ?" ಎಂದು ಕೇಳಿದ

"ಶುದ್ಧ ಬೋರ್ (Bore) ನನಗಂತೂ ತುಂಬಾ ಬೇಸರವಾಯಿತು– ಏನು ಮಾಡಲಿ ? ರಾಜ್‌ಗಾಗಿ ತಡೆದುಕೊಂಡೆ"

ಮೇರಿ ಕೊಟ್ಟ ವಿವರಣೆ ಕೇಳಿ ಸೋಮಸುಂದರಂ ನಕ್ಕ

"ಲಕ್ಷಣವಾಗಿದ್ದಾಳೆ" ಮಣಿ ಹೇಳಿದಳು

"ಚೆನ್ನಾಗಿದ್ದರೆ ಬಂತೇ ? ಸ್ವಲ್ಪಾನೂ ಮ್ಯಾನರ್ಸ್ ಅನ್ನೋದೇ

ತಿಳಿದಿಲ್ಲ. ಈ ಕಾಡುಪ್ರಾಣಿಯನ್ನು ಎಲ್ಲಿ ಹಿಡಿದುಕೊಂಡು ಬಂದರೋ ?"

"ನೀನು ಬಿಡು. ಎಲ್ಲವನ್ನೂ ನಿನ್ನ ನಡವಳಿಕೆಯ ದೃಷ್ಟಿಯಿಂದಲೇ ನೋಡುತ್ತೀ." ಮಣಿ ಅಸಮಾಧಾನಪಟ್ಟಳು.

ಅಕ್ಕತಂಗಿಯರ ವಾದವಿವಾದದಿಂದ ಸೋಮಸುಂದರಂಗೆ ಹಿಡಿಸಲಾರದಷ್ಟು ನಗೆ ಬರುತ್ತಿದ್ದಿತು. ನಗುತ್ತಲೇ ಅವನು ಡ್ರೈವ್ ಮಾಡುತ್ತಿದ್ದ.

ಸ್ವಲ್ಪ ಹೊತ್ತಾದ ಮೇಲೆ ಮೀರಿ ಸೋಮಸುಂದರನನ್ನೇ ಕೇಳಿದಳು.

"ನಿಮಗೇನನ್ನಿಸಿತು ಸೋಮು ?"

"ನಾನು ಸರಿಯಾಗಿ ನೋಡಲೇ ಇಲ್ಲ."

ಅವನು ಕೊಟ್ಟ ಉತ್ತರದಿಂದ ಮೀರಿಗೆ ನಿರಾಸೆಯಾಯಿತು.

ನಾಗರಾಜ ಮಾಡಿದ್ದ ವ್ಯವಸ್ಥೆಯಿಂದ ಎಲ್ಲರಿಗೂ ಸಂತೋಷವಾಗಿದ್ದಿತು. ಪರಮೇಶ್ವರಯ್ಯನವರಿಗಂತೂ ತಮ್ಮ ಸೋದರಳಿಯನನ್ನು ಎಷ್ಟು ಹೊಗಳಿದರೂ ತೃಪ್ತಿಯಾಗುತ್ತಿರಲಿಲ್ಲ. ನಾಗರಾಜ ಯಾರೊಬ್ಬರೂ ಬೇಸರಪಡದಂತೆ ದಿನಕ್ಕೊಂದು ಕಡೆ ಕರೆದುಕೊಂಡು ಹೋಗಿ ಮೈಸೂರಿನ ಪ್ರೇಕ್ಷಣೀಯ ಸ್ಥಳಗಳನ್ನೆಲ್ಲಾ ತೋರಿಸಿಬಂದಿದ್ದ. ಸುಮಿತ್ರೆಗೆ ಒಳಗೊಳಗೇ ಸಂತೋಷವಾಗಿದ್ದರೂ, ಅದನ್ನು ವ್ಯಕ್ತಪಡಿಸುವ ಮಾರ್ಗ ತಿಳಿಯುತ್ತಿರಲಿಲ್ಲ. ಸುಮಿತ್ರೆಯೊಬ್ಬಳೇ ಏಕಾಂಗಿಯಾಗಿ ಸಿಗುತ್ತಿದ್ದ ಅವಕಾಶಗಳೇ ಅತ್ಯಲ್ಪ – ಆಗ ಸುಮಿತ್ರೆ ನಾಚಿಕೆಯ ಮೂರ್ತಿಯಾಗುತ್ತಿದ್ದಳು. ನಾಗರಾಜ ಕಷ್ಟಪಟ್ಟು ತಂದುಕೊಂಡಿದ್ದ ಸಂಯಮ ಕಳೆದುಕೊಂಡು ರೇಗಾಡುತ್ತಿದ್ದ. ಹೆಂಡತಿಯ ಮನಸ್ಸನ್ನು ಪ್ರೇಮದಿಂದ, ನಿಧಾನವಾಗಿ ಗೆಲ್ಲಬೇಕೆಂಬುದೇ ನಾಗರಾಜನ ಬುದ್ಧಿಗೆ ಹೊಳೆಯುತ್ತಿರಲಿಲ್ಲ. ಸುಮಿತ್ರೆಯ ಲಜ್ಜೆ, ಭಯ, ಕಾತರ ಅವನಿಗರಿವಾಗುತ್ತಿರಲಿಲ್ಲ.

ಹೊರಡುವಾಗ ಅಳಿಯ ಮಾಡಿದ ಸನ್ಮಾನ, ರಾಜಮ್ಮನ ದೃಷ್ಟಿಯಲ್ಲಿ ನಾಗರಾಜನನ್ನು ಅಟ್ಟಕ್ಕೇರಿಸಿತು. ಅತ್ತೆಗೆ ಧರ್ಮಾವರದ ಸೀರೆ ಕಣವನ್ನು ಸುಮಿತ್ರೆಯ ಕೈಲಿ ಉಡುಗೊರೆಯಾಗಿ ಕೊಡಿಸಿ,

"ಮದುವೆಯೂ ಅವಸರದಲ್ಲಾಯಿತು. ಏನು ತರಲೂ ಆಗಲಿಲ್ಲ. ದಯವಿಟ್ಟು ಸ್ವೀಕರಿಸಬೇಕು" ಎಂದು ಉಪಚಾರ ಹೇಳಿದ.

ರಾಜಮ್ಮ ಅಳಿಯನ ಪ್ರಾರ್ಥನೆಯನ್ನು ಸಂತೋಷದಿಂದ ಮನ್ನಿಸಿದ್ದಳು ಸ್ವರ್ಣನಿಗೂ ಲಂಗದ ಕಣ ಬಂದಿತ್ತು

ಬೀಗರು ಹೊರಡುವ ದಿನ ಪರಮೇಶ್ವರಯ್ಯ ತಾವೇ ಮಾತು ತೆಗೆದರು

"ಅದಷ್ಟು ಜಾಗ್ರತೆ ಹುಡುಗಿಯನ್ನು ಕಳುಹಿಸಿಕೊಟ್ಟರೆ ನಾಗರಾಜನಿಗೆ ಕಷ್ಟ ತಪ್ಪುತ್ತದೆ ಎಷ್ಟು ದಿನ ಒಂಟಿ ಬಾಳು ನಡೆಸಲು ಸಾಧ್ಯ ಹೇಳಿ"

ನರಸಿಂಹಯ್ಯನಿಗೆ ಹಣದ ಚಿಂತೆ ಆರಂಭವಾಗಿತ್ತು ಈಗಾಗಲೇ ಮದುವೆಗಾಗಿ ತಂದ ಹಣ ಕೈಬಿಟ್ಟು ಹೋಗಿದ್ದಿತು ಪುನಃ ಐನೂರು ರೂಪಾಯಿಗಳಾದರೂ ಹವಣಿಸಬೇಕು? ಎಲ್ಲಿಂದ ತರುವುದು?

ತನ್ನ ತೊಂದರೆಯನ್ನು ಮರೆಮಾಚುತ್ತಾ ನರಸಿಂಹಯ್ಯ ಹೇಳಿದ

"ಆಗಲಿ ಹೆಂಗಸರನ್ನು ವಿಚಾರಿಸಿ ನಿಮಗೆ ತಿಳಿಸುತ್ತೇನೆ"

"ನೋಡಿ ಆದಷ್ಟು ಹತ್ತಿರದ ಲಗ್ನವೇ ಇಡಿಸಿಬಿಡಿ.' ಪರಮೇಶ್ವರಯ್ಯ ಹೇಳಿದರು

ನಾಗರಾಜ ಕಾರಿನಲ್ಲೇ ಅತ್ತೆ, ಮಾವ ಸುಮಿತ್ರೆಯರನ್ನು ಸ್ಟೇಷನಿಗೆ ಕರೆತಂದು ಎರಡನೆಯ ತರಗತಿಯ ಡಬ್ಬಿಯಲ್ಲಿ ಕೂರಿಸಿದ

ಅಳಿಯ ಹೋದಮೇಲೆ ರಾಜಮ್ಮ ಆಶ್ಚರ್ಯಪಡುತ್ತಾ ಕೇಳಿದಳು

"ಇವರ ಆಡಳಿತ ನೋಡಿದರೆ ಆಶ್ಚರ್ಯವಾಗುತ್ತೇರಿ ತಿಂಗಳಿಗೆ ಎಷ್ಟು ಬರಬಹುದೋ?"

"ಕಂಟ್ರಾಕ್ಟ್ ಅಂದರೆ ಯಾವ ಲೆಕ್ಕ ಹೇಳು? ಬಂದರೆ ಬಂದೇ ಬಿಡುತ್ತೆ ಹಾಗೆಯೇ ಕೊಚ್ಚಿಕೊಂಡೂ ಹೋಗುತ್ತದೆ"

"ಕೈಹಿಡಿತವಿಲ್ಲದಿದ್ದರೆ ಕಷ್ಟಾಂದ್ರೆ" ಎಂದು ಉದ್ಗಾರವೆಳೆದು,

"ಸುಮಿತ್ರಾ ನೀನಾದರೂ ಸ್ವಲ್ಪ ವಿವೇಕವಾಗಿರಬೇಕಮ್ಮಾ" ಎಂದು ಮಗಳಿಗೆ ಬುದ್ಧಿವಾದ ಹೇಳಿದಳು

"ಸುಮ್ಮಾಗೇನು ತಿಳಿಯುತ್ತದೆ ವಾರ – ಮೂರು ಕಾಸು ಖರ್ಚು ಮಾಡಿ ಅರಿಯಳು" ನರಸಿಂಹಯ್ಯ ಹೇಳಿದ

ತನ್ನ ಕನಸಿನ ಪ್ರಪಂಚದಲ್ಲಿಯೇ ವಿಹರಿಸುತ್ತಿದ್ದ ಸುಮಿತ್ರೆಗೆ ತಾಯಿಯ ಮಾತು ಕೇಳಿಸಲಿಲ್ಲ

ಹಿಂದೆ ಹಿಂದೆ ಸರಿಯುತ್ತಿದ್ದ ಗಿಡಮರಗಳನ್ನು ನೋಡುವುದರಲ್ಲಿ ಸ್ವರ್ಣ ಉತ್ಸುಕಳಾಗಿದ್ದಳು

"ಈಗಲೇ ಪ್ರಸ್ತಮಾಡಿಕೊಡಬೇಕಂತೆ ಹೂಂ ಅದನ್ನೇ ಹೊರಡುವ ಮುನ್ನ ಪರಮೇಶ್ವರಯ್ಯ ತಿಳಿಸಿದರು" ಎಂದು ನರಸಿಂಹಯ್ಯ ಆರಂಭಿಸಿದ

"ಎಂದಾದರೂ ಮಾಡಬೇಕಾದ್ದೇ – ಮಾಡಿಬಿಟ್ಟರಾಯಿತು"

"ಸುಮಿತ್ರೆಗೆ ಈಗಲೇ ಸಂಸಾರದ ಭಾರ ಹೊರುವ ಯೋಗ್ಯತೆ ಇದೆಯೇನೇ? ಮನೆಯಲ್ಲಿ ಹಿರಿಯ ದಿಕ್ಕು ಇಲ್ಲ"

"ಜವಾಬ್ದಾರಿ ಮೈಮೇಲೆ ಬಿದ್ದರೆ ತಾನೇ ತಿಳಿದುಕೊಳ್ಳುತ್ತಾಳೆ ನ್ಯಾಯವಾಗಿ ಈ ವಯಸ್ಸಿಗೆ ಒಂದು ಮಗುವಿನ ತಾಯಾಗಬೇಕು – ಸುಮಿತ್ರೆಯೇನು ಆಡುವ ಮಗುವೇ?"

"ಸರಿ ಬಿಡು"

ಹೆಂಡತಿಯ ಮನಸ್ಸನ್ನರಿತು ನರಸಿಂಹಯ್ಯ ಸುಮ್ಮನಾದ ಗಂಡನನ್ನು ಸಮಾಧಾನಪಡಿಸುವಂತೆ ರಾಜಮ್ಮ ಹೇಳಿದಳು

"ಎಂದಾದರೂ ಅವರ ಮನೆ ಸೇರುವ ಪದಾರ್ಥ ನಿಧಾನಮಾಡಿ ಸುಮ್ಮನೆ ಯಾಕೆ ಅವರ ಮನಸ್ಸು ಚಿಕ್ಕದುಮಾಡಬೇಕು?"

ನರಸಿಂಹಯ್ಯನಿಗೆ ಹೆಂಡತಿಯ ಮಾತು ಸತ್ಯವೆನಿಸಿತು

"ಮುಂದಿನ ತಿಂಗಳಲ್ಲೇ ಒಂದು ಶುಭದಿನ ಆ ಶಾಸ್ತ್ರವನ್ನೂ ಮುಗಿಸಿಬಿಡೋಣ" ಎಂದು ಹೇಳಿ ರಾಜಮ್ಮನ ಮನಸ್ಸನ್ನು ಗೆದ್ದ

## ೩೨

ತಾಯಿಯ ಮುಂದೆ, ಅಕ್ಕಪಕ್ಕದವರೆದುರಿಗೆ ತನ್ನ ಅಳಿಯನ ಗುಣಗಳನ್ನು ಎಷ್ಟು ಹೊಗಳಿದರೂ ರಾಜಮ್ಮನಿಗೆ ತೃಪ್ತಿಯಾಗುತ್ತಿರಲಿಲ್ಲ ಉಡುಗೊರೆಯ ಸೀರೆಯನ್ನು ಭಾಗೀರಥಮ್ಮನಿಗೆ ತೋರಿಸಿ,

"ನೋಡಿ ಭಾಗೀರಥಮ್ಮ ನಾನೆಷ್ಟು ಕಷ್ಟಪಟ್ಟು ಸುಮಿತ್ರೆಯನ್ನು ಬೆಳೆಸಿದುದಕ್ಕೂ ಸಾರ್ಥಕವಾಯಿತು ಅಳಿಯಂದಿರ ಮನಸ್ಸು ಚೊಕ್ಕ ಭಂಗಾರ ನಮ್ಮ ಸುಮಿತ್ರ ಎಷ್ಟು ಜನ್ಮದ ಪೂಜಾಫಲದಿಂದಲೋ ಈ ಗಂಡನನ್ನು ಪಡೆದಿರುವಳು"

"ಹಾಗೇ" ಭಾಗೀರಥಮ್ಮ ಅಚ್ಚರಿಯಿಂದ ಕೇಳಿದ್ದಳು

"ಹೂನ್ರೀ ಅವರ ಆಡಳಿತ ನೋಡಬೇಕ್ರೀ ನೀವು ಯಾವ ದೊರೆಮಗನಿಗೂ ಕಡಿಮೆಯಿಲ್ಲ ಹಣವನ್ನು ನೀರಿನಂತೆ ಖರ್ಚು ಮಾಡುತ್ತಾರೆ"

"ಸುಮಿತ್ರೆ ಪುಣ್ಯಮಾಡಿದ್ದಳು ಬಿಡಿ"

ರಾಜಮ್ಮನೆದುರಿಗೆ ಹೊಗಳಿ ಉಬ್ಬಿಸಿದ ಭಾಗೀರಥಮ್ಮ ಕಣ್ಮರೆಯಾದ ಮೇಲೆ,

"ಮೊದಲೆಲ್ಲಾ ಹುರಿದು ಮುಕ್ಕಿದಳು – ಈಗೇನೋ ಹಿತ ಬಂದು ಬಿಟ್ಟಿದೆ ನೋಡಬೇಕು ಇದೆಷ್ಟುದಿನವೋ!" ಎಂದು ಆಡಿಕೊಂಡು ನಕ್ಕಳು

ಮೈಸೂರಿನಿಂದ ಹಿಂತಿರುಗಿದ ಮೇಲೆ ಸುಮಿತ್ರೆಗೆ ದೆಸೆ ಒದಗಿದ್ದಿತು ಮಗಳನ್ನು ಹೇಗೆ ನೋಡಿಕೊಂಡರೂ ರಾಜಮ್ಮನಿಗೆ ಸಮಾಧಾನವಾಗುತ್ತಿರಲಿಲ್ಲ

"ಸುಮಿತ್ರೆಗೆ ಚಕ್ಕುಲಿ ಕಂಡರೆ ತುಂಬಾ ಇಷ್ಟ ಇವತ್ತು ಮಾಡಮ್ಮ" ಎಂದು ಸುಮಿತ್ರೆಗೆ ಇಷ್ಟವಾದ ತಿಂಡಿ ಪದಾರ್ಥಗಳನ್ನೆಲ್ಲಾ ತಾನೇ ಹೇಳಿ ತಾಯಿಯ ಕೈಲಿ ಮಾಡಿಸುತ್ತಿದ್ದಳು ನಡೆದರಲ್ಲಿ ಸವೆಯುತ್ತಾಳೋ ಎನ್ನುವಷ್ಟು ಉಪಚಾರ ಮಾಡಿ ಸುಮಿತ್ರೆಯನ್ನು ಸಂದಿಗ್ಧ ಪರಿಸ್ಥಿತಿಗೆ ಗುರಿಮಾಡುತ್ತಿದ್ದಳು ಮೊದಲಿನಿಂದಲೂ ತನಗೆ ಒಗ್ಗಿಬಂದಿದ್ದ ಜೀವನವನ್ನೇ ಅಪ್ಪಲು ಸುಮಿತ್ರೆ ಬಯಸುತ್ತಿದ್ದಳು ರಾಜಮ್ಮ ಬಲವಂತವಾಗಿ ಮಗಳನ್ನು ಕೂರಿಸಿ,

"ಸುಮ್ಮನಿರೇ ತಾಯಿ ಸಾಕೆ ನಿನ್ನ ಗಂಡ ನನ್ನನ್ನು ನಿಂದಿಸಿಯಾನು" ಎಂದು ಉಪಚಾರ ಹೇಳುತ್ತಿದ್ದಳು

ಮೈಸೂರಿನ ವಿದ್ಯಮಾನಗಳನ್ನು ತಾಯಿಗೆ ಬಣ್ಣಬಣ್ಣವಾಗಿ ವರ್ಣಿಸುತ್ತಾ ರಾಜಮ್ಮ, ನಾಗರಾಜನ ಗೆಳೆಯ, ಗೆಳತಿಯರ ಚರ್ಯೆಗಳನ್ನು ವಿಡಂಬನ ಮಾಡಿದಳು ಅವಳ ಮಾತು ಕೇಳಿ ರಂಗಮ್ಮ ನಕ್ಕರು ಸುಮಿತ್ರೆಯ ಹೃದಯದಲ್ಲಿ ತಳಮಳವಾಯಿತು

ರಾಜಮ್ಮನ ಪರಿಹಾಸ್ಯ ಸುಮಿತ್ರೆಯ ಮನದಲ್ಲಿ ಅಚ್ಚಳಿಯದೆ ನಿಂತಿತು ಚಿಕ್ಕಮ್ಮ ಹೇಳಿದಂತೇ ಅವರು ಮಾಡುವರೇ? ಎಂದು ಹಲವು ಬಾರಿ ಯೋಚಿಸಿದಳು ನಾಗರಾಜನ ಚರ್ಯೆಗಳು ಈ ಅನುಮಾನಕ್ಕೆ ಮತ್ತಷ್ಟು ಪುಟಗೊಡುವಂತಿದ್ದಿತು ಮೇರಿಗೂ ತನ್ನ ಗಂಡನಿಗೂ ಹೆಚ್ಚಿನ ಸಂಬಂಧವಿರಬಹುದೇ? ಸುಮಿತ್ರ ಅವಳನ್ನು ಮತ್ತೊಮ್ಮೆ ಜ್ಞಾಪಿಸಿಕೊಂಡಳು – ಚಿಕ್ಕಮ್ಮ ಹೇಳುವುದೆಲ್ಲವೂ ನಿಜವಿರಬೇಕೆನ್ನಿಸಿತು ಅವಳ ಸಲಿಗೆಯ ವರ್ತನೆಯೇ ಸುಮಿತ್ರೆಯ ಅನುಮಾನಗಳಿಗೆ ಗ್ರಾಸವಾಗಿದ್ದಿತು – ಇದೆಲ್ಲ ಮರೆಸುವಂತೆ ನಾಗರಾಜ ನಿಂತಿದ್ದ – ಅವನ ಅಭಿರುಚಿ, ವೇಷ ಭೂಷಣಗಳೂ ಸುಮಿತ್ರೆಗೆ ನೆನಪಾಯಿತು ತನ್ನ ಸ್ವಭಾವಕ್ಕೂ – ತನ್ನ ಗಂಡನದಕ್ಕೂ ಅಜಗಜಾಂತರ ವ್ಯತ್ಯಾಸವಿದೆಯೆಂದು ಮನಗಂಡು ಸುಮಿತ್ರ ತನ್ನ ಭವಿಷ್ಯವನ್ನು ಚಿಂತಿಸಿ ದುಃಖಿಸಿದಳು

ರಾಜಮ್ಮ, ರಂಗಮ್ಮ ಇಬ್ಬರೂ ಸುಮಿತ್ರೆಯನ್ನು ಸಂಶಯಕೂಪಕ್ಕೆ ಅನಪೇಕ್ಷಿತವಾಗಿ ತಳ್ಳಿ ತಮ್ಮ ಕೆಲಸ ಹುಡುಕಿಕೊಂಡು ಹೊರಟುಹೋಗಿ

ದ್ದರು. ತಾನು ಏಕಾಂಗಿ - ತನ್ನ ಕಷ್ಟದಲ್ಲಿ ಯಾರೂ ಪಾಲುಗಾರರಾಗಲಿಚ್ಛಿಸುವುದಿಲ್ಲ ಎಂದು ಸುಮಿತ್ರೆ ನೆನೆದು ಕಂಬನಿಗರೆದಳು.

ದಿನಗಳೆದಂತೆ ಸುಮಿತ್ರೆ ಕಂಗೆಡಲಾರಂಭಿಸಿದುದನ್ನು ಕಂಡು ರಂಗಮ್ಮ

“ಇನ್ನು ಸುಮಿತ್ರೆಗೆ ತಂದೆಯ ಮನೆಯ ಅನ್ನ ಮೈಗೆ ಹಿಡಿಯುವುದಿಲ್ಲ. ಬೇಗ ಗಂಡನ ಮನೆಗೆ ಕಳುಹಿಸುವ ಏರ್ಪಾಡು ಮಾಡಿಬಿಡಬೇಕು” ಎನ್ನುತ್ತಿದ್ದರು.

ತಾಯಿಯ ಮಾತಿಗೆ ಬೆಂಬಲ ಕೊಡುತ್ತಾ ರಾಜಮ್ಮ ನರಸಿಂಹಯ್ಯನಿಗೆ

“ಅವರೂ ಆತುರಪಡುತ್ತಿದ್ದಾರೆ. ನಾನೆಷ್ಟು ಹೇಳಿದರೂ ನೀವು ಕಿವಿಮೇಲೆ ಹಾಕಿಕೊಳ್ಳುವುದಿಲ್ಲ” ಎಂದಳು.

ಈ ಮಾತು ಬಂದೊಡನೇ ಸುಮಿತ್ರೆ ಏಳುವ ಸನ್ನಾಹ ಮಾಡಿದಳು.

ನರಸಿಂಹಯ್ಯ ಹೆಂಡತಿಗೆ ಸಮಾಧಾನ ಹೇಳುತ್ತಾ,

‘ಮರೆತಿಲ್ಲ ಕಣೆ. ನಾನೂ ಅದೇ ಆಲೋಚನೆಯಲ್ಲಿದ್ದೇನೆ”

“ಸರಿ. ನಿಮ್ಮ ಆಲೋಚನೆ ಈ ಜನ್ಮಕ್ಕೆ ಮುಗಿಯುತ್ತದೆಯೇ? ಇನ್ನೆಷ್ಟು ಜನರನ್ನು ಕೇಳಬೇಕೋ...”

ರಾಜಮ್ಮನ ಮಾತಿಗೆ ನರಸಿಂಹಯ್ಯ ನಗುತ್ತಾ,

“ನಾಳೆ ಶಾಸ್ತ್ರಿಗಳನ್ನು ವಿಚಾರಿಸಿ ಲಗ್ನ ನಿಷ್ಕರ್ಷೆ ಮಾಡಬೇಕೆಂದಿದ್ದೇನೆ”

“ಲಗ್ನ ನಿಶ್ಚಯಿಸಿಬಿಟ್ಟರೆ ಮುಗಿಯಿತೇ? ನಾವೂನು ಅಣಿಮಾಡಬೇಡವೇ?”

“ಯಾಕಿಷ್ಟು ಅವಸರಪಡುತ್ತೀ? ಎಲ್ಲಾ ಆಗುತ್ತೆ ಸುಮ್ಮನಿರು”

“ನಿಮಗೆ ಸ್ವಲ್ಪವೂ ಅರ್ಥವಾಗುವುದೇ ಇಲ್ಲವಲ್ರೀ... ಮದುವೆಯಂತೂ ತರಾತುರಿಯಲ್ಲಿ ಮುಗಿಸಿಯಾಯಿತು. ಲಕ್ಷಣವಾಗಿ ಬಂದು ‘ಆರತಕ್ಷತೆ’ಯನ್ನೂ ಮಾಡಲಿಲ್ಲ. ಈಗಲಾದರೂ ಬೇಕಾದ ನಾಲ್ಕು ಜನರನ್ನು ಕರೆಯಬೇಡವೇ?”

“ಬೀಗರನ್ನು ವಿಚಾರಿಸೋಣ ತಡೀ” ಎಂದು ನರಸಿಂಹಯ್ಯ ಹೆಂಡತಿಯನ್ನು ಸುಮ್ಮನಾಗಿಸಿದ.

## ೩೩

"ಅಕ್ಕಾ ಇನ್ನಾದರೂ ನಿನ್ನ ಮನಸ್ಸು ಬದಲಾಯಿಸೇ' ಮಣಿ ತನ್ನ ಅಕ್ಕನಿಗೆ ಹೇಳಿದಳು ತಂಗಿಯ ಮಾತು ಮೇರಿಯ ಕಿವಿಗೆ ಬೀಳಲಿಲ್ಲ ತನ್ನ ಯೋಚನೆಯಲ್ಲೇ ಮೀಯುತ್ತಿದ್ದ ಮೇರಿ, ತನ್ನ ಉದ್ವೇಗವನ್ನು ಕಡಿಮೆ ಮಾಡಿಕೊಳ್ಳಲು ಸರಸರನೆ ಉಲ್ಲನ್ ಹೆಣೆಯುತ್ತಿದ್ದಳು ಅಕ್ಕನ ಅಮನಸ್ಕತೆಯನ್ನು ಕಂಡರೂ ಮಣಿ ಸುಮ್ಮನೆ ಬಿಡಲಿಲ್ಲ ಮೇರಿಯ ಪಕ್ಕದಲ್ಲಿ ಬಂದು ಕುಳಿತು,

"ನೀನು ಹಿಡಿದಿರುವ ಮಾರ್ಗ ತಪ್ಪು" ಎಂದಳು

"ಸರಿಯಾದ ಮಾರ್ಗ ಯಾವುದು?"

"ನಾಗರಾಜನ ಮೇಲೆ ದ್ವೇಷಸಾಧಿಸುತ್ತಿರುವುದು – ನಿನ್ನ ನಡತೆಯಿಂದ ಅವರ ಮನಸ್ಸಿಗೆ ನೋವಾಗುವುದು"

"ನೋವು? – ಅವರಿಗೇನಾದರೆ ನನಗೇನು ಮಣಿ?"

"ಹಾಗಾದರೆ ನೀನು ಬೇಕೆಂದೇ ಸೋಮುವಿನ ಸ್ನೇಹ ಬಯಸಿದೆಯಾ?"

"ಹೌದು"

"ನೀನು ನಾಗರಾಜನನ್ನೆಂದೂ ಪ್ರೀತಿಸಲಿಲ್ಲ?"

"ನನ್ನ ಪ್ರೀತಿಗೆ ಸರಿಯಾದ ಪ್ರತಿಫಲ ದೊರೆಯಿತಲ್ಲಾ – ಇನ್ನೇಕೆ ಆ ಮಾತು? ನನ್ನ ಹೃದಯವನ್ನು ನುಚ್ಚುನೂರು ಮಾಡಿ, ನನ್ನ ಕಣ್ಣೆದುರಿಗೇ ಅವರು ಇತರ ಹುಡುಗಿಯರ ಸ್ನೇಹ ಮಾಡಿದರು"

"ನೀನೂ ಅವರ ಹೃದಯ ಒಡೆಯಲಾಶಿಸುವೆಯಾ? ನೀನು ನಿನ್ನ

ಅತೃಪ್ತಿಯನ್ನು ನಾಗರಾಜನ ಮೇಲೆ ತೋರಿಸುತ್ತಿಲ್ಲ ಮತ್ತೋರ್ವ ಆಟಗಾರನ ಮೇಲೆ ಪ್ರಯೋಗಿಸುತ್ತಿರುವೆ ”

"ನಿನ್ನದು ರಾಕ್ಷಸೀ ಲಾಲಸೆ ”

"ತಾಮಸ ಪ್ರವೃತ್ತಿಯಲ್ಲಿ ನನಗೆ ನಂಬಿಕೆ ಇಲ್ಲ ”

ಮೇರಿ ಕಡ್ಡಿ ಎರಡು ತುಂಡು ಮಾಡಿದಂತೆ ಉತ್ತರವಿತ್ತು ತನ್ನ ಕೆಲಸದಲ್ಲಿ ಮಗ್ನಳಾದಳು

"ಅಗೋ ನಿನ್ನ ರಾಜ ಬಂದ ” ಎಂದು ಹೇಳಿ ಮನೆ ಒಳಗೆ ಹೋದಳು

ನಾಗರಾಜ ಬಂದವನೇ, ಕೇಳಿದ

"ಅಕ್ಕತಂಗಿಯರಲ್ಲೇನು ಮನಸ್ತಾಪ ?"

"ಹೀಗೆ ಒಂದೊಂದು ಸಲ ಇದ್ದದ್ದೇ ” ಮೇರಿ ಬೇಸರದಿಂದ ನುಡಿದಳು

"ಮನೆಗೆ ನನ್ನ ಮೇಲೂ ಕೋಪವಿರಬೇಕು ಕಂಡರೂ ಮಾತಾಡಿಸಲಿಲ್ಲ ” ನಾಗರಾಜ ಹೇಳಿದ ಮೇರಿ ನಕ್ಕು ಸುಮ್ಮನಾದಳು

"ಸೋಮಯಾಜಿಯಾದರೂ ಈಚೆಗೆ ಬಂದಿದ್ದನೆ ?" ನಾಗರಾಜ ಕೇಳಿದ

"ಆ ದಿನ ನಿಮ್ಮ ಮನೆಯಿಂದ ಕರೆತಂದು ಬಿಟ್ಟರು ಪುನಃ ಅವರ ದರ್ಶನವೇ ಇಲ್ಲ ” ಮೇರಿ ಸುಮ್ಮನೆ ಹೇಳಿದಳು

ನಾಗರಾಜ ನಂಬಿದಂತೆ ತೋರಗೊಡಲಿಲ್ಲ ಅವನ ಅಪನಂಬಿಕೆಯನ್ನು ಗ್ರಹಿಸಿದ ಮೇರಿ, ಕೈಲಿದ್ದ ನಿಟ್ಟಿಂಗ್ ಕಡ್ಡಿಯನ್ನು ಕೆಳಗಿಟ್ಟು ನಾಗರಾಜನ ಪಕ್ಕದಲ್ಲಿ ಕುಳಿತು,

"ಯಾಕೆ ಡಾರ್ಲಿಂಗ್ ”

"ಸುಮ್ಮನೆ ಕೇಳಿದೆ ಕೇಳಬಾರದೇ ?"

ಮೇರಿ ಮಾತಿನ ಓಘವನ್ನು ಬದಲಾಯಿಸಲು ಯತ್ನಿಸಿ,

"ನಿಮ್ಮ ಹೆಂಡತಿಯನ್ನೊಂದು ಕರೆತರುವಿರಿ ?"

ನಾಗರಾಜ ಉತ್ತರ ಕೊಡಲಿಲ್ಲ ಮೇರಿ ನಗಹತ್ತಿದಳು ಅವಳ ನಗೆಯನ್ನು ಕಂಡು ಭ್ರಾಂತನಾಗಿ, ಕೇಳಿದ

"ಯಾಕೆ ? ಮೇರಿ ”

"ಅಲ್ಲ ಏನೋ ನೆನಪಿಗೆ ಬಂತು" ಮೇರಿ ಕಷ್ಟಪಟ್ಟು ನಗು ತಡೆದು ಕೊಳ್ಳಲು ಯತ್ನಿಸಿದಳು

ಮಿತಿಮೀರಿದ ಆವಳ ನಗೆಯನ್ನು ಕಂಡು ನಾಗರಾಜನಿಗೆ ಕೋಪವೂ ಬಂತು ಇದಾವುದರ ಪರಿವೆಯೂ ಇಲ್ಲದಂತೆ ಮೇರಿ ನಗುತ್ತಲೇ ಇದ್ದಳು

"ಆ ಕಾಡುಪ್ರಾಣಿಯನ್ನು ಎಲ್ಲಿ ಹಿಡಿದು ತಂದಿರಿ ?" ಸ್ವಲ್ಪ ಹೊತ್ತಿನ ಮೇಲೆ ಮೇರಿ ಕೇಳಿದಳು

ನಾಗರಾಜನಿಗೆ ಯಾರೆಂದು ತಿಳಿಯಲಿಲ್ಲ

"ಯಾರನ್ನು ಕುರಿತು ಮಾತಾಡುತ್ತಿರುವೆ ಮೇರಿ ?"

"ನಿಮ್ಮ ಹೆಂಡತಿ – ಕೈಹಿಡಿದ ಪತ್ನಿಯ ವಿಷಯ ನಿಮಗೂ – ಅವರಿಗೂ ಯಾವ ವಿಷಯದಲ್ಲೂ ತಾಳೆಯಿಲ್ಲ"

ಮೇರಿಯ ಸ್ಪಷ್ಟ ಅಭಿಪ್ರಾಯ ಕೇಳಿ ನಾಗರಾಜ ಅಸಮಾಧಾನ ಗೊಂಡು,

"ಇರಲಿ ಬಿಡು ಮನೆಯಲ್ಲಿ ಬಿದ್ದಿರುತ್ತಾಳೆ" ಎಂದ

"ಎಲ್ಲಾದರೂ ಹೊರಗೆ ಹೋಗಿ ಬರೋಣ ಡಿಯರ್ ನನಗೇಕೋ ಇಂದು ತುಂಬಾ ಬೇಸರವಾಗಿದೆ"

"ಈದಿನ ನನಗೂ ಸೋಮುವಿಗೂ ಸ್ವಲ್ಪ ಮನಸ್ತಾಪವಾಯಿತು ನಡಿ ಎಲ್ಲವನ್ನೂ ತಿಳಿಸುತ್ತೇನೆ"

ಕೂಡಲೇ ಒಳಗೆಹೋಗಿ ಮೇರಿ ಅಲಂಕಾರ ಮಾಡಿಕೊಂಡು ಸಿದ್ಧಳಾಗಿ ಬಂದಳು

ಮೇರಿಯ ಮಾದಕಸೌಂದರ್ಯದಲ್ಲಿ ನಾಗರಾಜ ವೈಮರೆತ

೩೪

ಅಳಿಯನ ಆಕಾಂಕ್ಷೆಯಂತೇ ನರಸಿಂಹಯ್ಯ ಪ್ರೈಸೂಟಿನಲ್ಲಿಯೇ 'ಗರ್ಭಾದಾನ ಮಹೋತ್ಸವ'ವನ್ನು ನೆರವೇರಿಸಿದ ಮದುವೆಯಲ್ಲಿ ತೋರಿದ ಆಸಕ್ತಿಗಿಂತಲೂ ಮಿಗಿಲಾಗಿ, ರಾಜಮ್ಮ ಧಾರಾಳವಾಗಿ ಓಡಿಯಾಡಿದಳು

ಪರಿಸ್ಥಿತಿ ಹದಕ್ಕೆ ಬಂದಮೇಲೆ ನಂಜಮ್ಮ ಗಂಡನೊಡನೆ ಪ್ರಸ್ತಾಪ ಮಾಡಿದರು

"ಒಂದು ಮಾತು ಹೇಳಲೇನ್ರೀ ?"

ಪರಮೇಶ್ವರಯ್ಯನಿಗೆ ಹೆಂಡತಿ ಗುಟ್ಟು ತಿಳಿಸಿ ಬೇಗರೆದುದನಲ್ಲಿ ತಮ್ಮನ್ನು ಚಿಕ್ಕವನನ್ನಾಗಿ ಮಾಡಿರಬೇಕೆಂಬ ಅನುಮಾನವಾಯಿತು

"ಏನಾದರೂ ಬಾಯಿ ಬಿಟ್ಟೆಯೇನೆ – ಈಗಲೇ ಗಂಡಹೆಂಡಿರಲ್ಲಿ ಮನಸ್ತಾಪ ತಂದುಹಾಕೀಯಾ ?"

"ಹಾಗೇನೂ ಮಾಡಿಲ್ಲಾಂದ್ರೆ. ಸುಮ್ಮನೆ ಯಾಕೆ ನನ್ನನ್ನು ನಿಂದಿಸುತ್ತೀರಿ"

"ಹಾಗಾದರೆ ಏನು ವಿಷಯ ?"

"ಪಾಪ. ಆ ನಿರ್ಭಾಗ್ಯ ಮಕ್ಕಳು ತಂದೆಯಿದ್ದೂ ತಬ್ಬಲಿಗಳಂತೆ ಇರುವರಲ್ಲಾ"

"ನಾವಾದರೂ ತಂದಿಟ್ಟುಕೊಳ್ಳೋಣವೆಂದರೆ ಸುಮ್ಮನೆ ಆಗುತ್ತದೆಯೇ ? ಇನ್ನೊಬ್ಬರ ಜವಾಬ್ದಾರಿ ಹೊರುವುದೆಂದರೆ ಸಾಮಾನ್ಯವೇ ಹೇಳು ? ನಮಗೂ ವಯಸ್ಸಾಯ್ತು"

"ನಾಗರಾಜನಿಗೇ ಹೇಳೀಂದ್ರೆ."

"ಅವನೆಲ್ಲಿ ಒಪ್ಪುವನೇ ?"

"ನೀವು ಹೇಳುವುದೂ ಚೆನ್ನಾಗಿದೆ ಸ್ವಂತ ತಂದೆ ಅನಿಸಿಕೊಂಡವನಿಗೇ ಮಕ್ಕಳು ಬೇಡವಾದರ ಮತ್ತೆ ಯಾರು ಸಾಕುತ್ತಾರೆ ?"

"ಆ ಮೋಹ ಕಟ್ಟಿಕೊಂಡವರಿಗೆ"

"ಯಾರು ಒಪ್ಪಬಹುದು ನಿನ್ನ ಮಾತನ್ನ ?"

"ನಾಗರಾಜನನ್ನ ನೀನರಿಯೆ ಹೂಸಿಂವ ಹರಿಗೆ ನಾಗನ ಜಟ್ಟಿ ಸ್ವಭಾವ ಅವನದು – ಅವನಿಗೆ ಹೆಂಡತಿಯೇನು – ಮಕ್ಕಳೇನು ?"

"ತಿಳಿದೂ ತಿಳಿದೂ ನೀವು ಯಾಕೆ ಈ ಮದುವೆಗ ಕೈಹಾಕಿದಿರಿ ?"

"ಸುಮಿತ್ರೆಯ ಪುಣ್ಯದಿಂದಲಾದರೂ ನಾಗರಾಜನಿಗ ವಿವೇಕ ಬರಬಹುದು ಎಂದು"

"ಸುಮಿತ್ರೆ ಒಳ್ಳೆಯ ಹುಡುಗಿಯಂತೆ ಅವಳಿಗೇ ಹೇಳಿನೋಡುತ್ತೇನೆ–ಆ ಮಕ್ಕಳು ಬೀದಿಯ ಭಿಕಾರಿಯಾಗಿರುವುದು ಒಳ್ಳೆಯ ನ್ಯಾಯ ?" ನಂಜಮ್ಮನ ಮೃದುಹೃದಯ ಮಕ್ಕಳಿಗಾಗಿ ಮಿಡಿಯಿತು

ಪರಮೇಶ್ವರಯ್ಯ ಹೆಂಡತಿಗ ಎಚ್ಚರಿಕೆ ಕೊಡುವಂತೆ, ರೇಗಿ,

"ಇಷ್ಟು ವಯಸ್ಸಾದರೂ ತಿಳುವಳಿಕೆ ಎನ್ನುವುದು ನಿನಗೆ ಸ್ವಲ್ಪವೂ ಇಲ್ಲ ಕಣೆ ಯಾವುದು ಹೇಳಬೇಕು – ಹೇಳಬಾರದು ಎನ್ನುವ ಪರಿಜ್ಞಾನವೂ ನಿನಗಿಲ್ಲ"

"ಆ ಮಕ್ಕಳನ್ನೂ ಸಲಹುವುದು ಸುಮಿತ್ರೆಯ ಕರ್ತವ್ಯವಲ್ಲವೇನಪ್ಪ ?"

"ಸುಮಿತ್ರೆ ಒಂದು ವೇಳೆ ಒಪ್ಪಿದರೂ ನಾಗರಾಜನಿಗೇ ಮನಸ್ಸಿಲ್ಲ ಯಾವುದೋ ವಿಷಘಳಿಗೆಯಲ್ಲಿ ಆ ಮಕ್ಕಳು ಹುಟ್ಟಿದವು–ಹಾಗೆಂದುಕೊಂಡು ಸುಮ್ಮನಿರು"

"ಇದು ತುಂಬಾ ಅನ್ಯಾಯ" ನಂಜಮ್ಮ ಮರುಗಿದರು

ನಾಗರಾಜನನ್ನ ಒಂದೊಂದು ಸಲ ನೋಡುವಾಗಲೂ ಅವರಿಗೆ ಮಕ್ಕಳು ಬಂದು ಮುಂದೆ ನಿಲ್ಲುತ್ತಿದ್ದವು

ನರಸಿಂಹಯ್ಯ, ರಾಜಮ್ಮ, ಸ್ವರ್ಣ ಒಂದು ವಾರ ಸುಮಿತ್ರೆಯ ಜತೆಗಿದ್ದು ಪ್ರಯಾಣಕ್ಕೆ ಸಿದ್ಧರಾದರು ನಾಗರಾಜ, ಉಡುಗೆರೆಗಳಿಂದ ರಾಜಮ್ಮ, ಸ್ವರ್ಣ ಇಬ್ಬರನ್ನೂ ತೃಪ್ತಿಪಡಿಸಿದ

"ಮೊನ್ನೆ ತಾನೇ ಒಂದು ಸೀರೆ ಓದಿಸಿದಿರಿ ಈಗ ಯಾಕೆ ತರಬೇಕಿತ್ತು ?" ಎನ್ನುತ್ತಲೇ ರಾಜಮ್ಮ ಸ್ವೀಕರಿಸಿ ಸುಮಿತ್ರೆಯ ಕೊರಳು ಬಿಗಿದಪ್ಪಿ, ಕಂಬನಿಸುರಿಸಿ ತನ್ನ ಪ್ರೇಮ ವ್ಯಕ್ತಪಡಿಸಿದಳು

ನಾಗರಾಜ ಪರಮೇಶ್ವರಯ್ಯನವರಿಗೆ ಉಪಕಾರ ಮಾಡಿ ಹೇಳಿದ

"ಇಲ್ಲೇ ನಮ್ಮ ಜತೆ ಇದ್ದುಬಿಡಿ ಮಾವಯ್ಯಾ ಯಾಕ ನಮ್ಮನ್ನೇನು ಕೊಂಡ್ಹೋಗುತ್ತಿರಿ ? ಬೇಕಾದರೆ ವರ್ಷಕ್ಕೊಂದು ಬಾರಿ ಹೋಗಿ ಜಮೀನು ನೋಡಿಕೊಂಡು ಬಂದರಾಯಿತು"

ಪರಮೇಶ್ವರಯ್ಯ ಸೋದರಳಿಯನ ಮಾತಿಗೆ ನಸುನಗುತ್ತಾ ಉತ್ತರಿಸಿದರು

"ನಾಗರಾಜ, ಹೊಸದಾಗಿ ಸಂಸಾರ ಮಾಡುತ್ತಿದ್ದೀರ ಸ್ವಲ್ಪ ಬುಡ ಭದ್ರವಾಗಲಿ ತಾಳು"

"ನಮ್ಮನ್ನ ಕರೆಯುವುದಕ್ಕೇನಂತಾ, ಅಂಥಾವರಿಗೆ ಮೊದಲು ಜಾಗ ಕೊಡಪ್ಪಾ" ನಂಜಮ್ಮ ಸೂಕ್ಷ್ಮವಾಗಿ ಅಳಿಯನಿಗೆ ಬುದ್ಧಿ ಹೇಳಿದರು

ಪರಮೇಶ್ವರಯ್ಯ ಸುತ್ತಲೂ ನೋಡಿ, ಸುಮಿತ್ರೆ ಇಲ್ಲವೆಂದು ಖಚಿತಪಡಿಸಿಕೊಂಡು ಹೇಳಿದರು

'ನಿಜ ಕಣಪ್ಪಾ ಆ ವಿಷಯ ಸ್ವಲ್ಪ ಯೋಚನೆ ಮಾಡಬೇಕು'

"ಆಗಲಿ – ನೋಡೋಣ"

ಮಾವನ ಮನಸ್ಸಿಗೆ ಬೇಸರವೆನಿಸಬಾರದೆಂದು ನಾಗರಾಜ ಹೇಳಿದ

"ನಿನ್ನ ಹೆಂಡತಿಗೂ ಹೇಳಿ ಮಕ್ಕಳನ್ನು ಕರೆದು ತಂದು ಇಟ್ಟುಕೋ. ಯಾರದೋ ತಪ್ಪಿಗೆ ಆ ಮಕ್ಕಳೇಕೆ ಶಿಕ್ಷೆ ಅನುಭವಿಸಬೇಕು ?'

ಎಂದು ಪರಮೇಶ್ವರಯ್ಯ ಹೇಳಿದರು

ನಂಜಮ್ಮ ಗಂಡನಿಗೆ ವಾಗ್ದಾನ ಮಾಡಿದಂತೆ ಸುಮ್ಮನೆ ಕೂಡಲಿಲ್ಲ. ಸಮಯ ದೊರೆತಾಗಲೆಲ್ಲ ಸೂಕ್ಷ್ಮವಾಗಿ ಸುಮಿತ್ರೆಯ ಕಿವಿಗೆ ಒಂದೊಂದು ಮಾತು ಹಾಕಿ ಎಚ್ಚರಿಕೆ ಕೊಡುತ್ತಿದ್ದರು

ನಾಗರಾಜ ಕಣ್ಮರೆಯಾಗಿದ್ದಾಗ ಸುಮಿತ್ರೆಯನ್ನು ನಾನಾ ಆಲೋಚನೆಗಳು ಮುತ್ತುತ್ತಿದ್ದವು ಗಂಡನ ಒಂದೊಂದು ಚರ್ಯೆಗಳನ್ನು ಜ್ಞಾಪಿಸಿಕೊಂಡು, ಪತಿಯ ಪ್ರೇಮವನ್ನು ಪಡೆಯುವ ಮಾರ್ಗಗಳನ್ನು ಯೋಚಿಸುತ್ತಿದ್ದಳು ಆದರೆ ತನ್ನ ಆಲೋಚನೆಗಳನ್ನು ಕಾರ್ಯರೂಪಕ್ಕೆ

ತರುವ ಧೈರ್ಯವಾಗುತ್ತಿರಲಿಲ್ಲ ಮೊದಲಿನಿಂದಲೂ ವಿಧಿಯ ವಿಕಟಾಟ್ಟ ಹಾಸಕ್ಕೆ ತಲೆಬಾಗುವುದನ್ನೇ ಕಲಿತಿದ್ದ ಸುಮಿತ್ರೆ ಈಗಲೂ ಪರಿಸ್ಥಿತಿಗೆ ಸೋತು ತಲೆಬಾಗಿದಳು ನಾಗರಾಜನ ಧೋರಣೆ, ಮದಾಂಧತೆಯ ಮುಂದೆ ಸುಮಿತ್ರೆಯ ಯೋಚನೆಗಳು ಹಾರಿಹೋಗಿ, ಅದರ ಬದಲು ದೈನ್ಯತೆ ಆವಳನ್ನು ಆವರಿಸುತ್ತಿದ್ದಿತು

ಸುಮಿತ್ರೆಯ ಸ್ಥಿತಿ ಕಂಡು ನಂಜಮ್ಮನವರಿಗೂ ವಿಷಾದವಾಗಿತ್ತು ನಾಗರಾಜನ ಮೋಸ ಒಮ್ಮೆಲೇ ಸುಮಿತ್ರೆಗೆ ತಿಳಿದರೆ ಆಘಾತವಾಗಬಹು ದೆಂದು ಲೆಕ್ಕಿಸಿ, ಅವಳ ಮನಸ್ಸನ್ನು ಈಗಿನಿಂದಲೇ ಹದಗೊಳಿಸುವ ಕೆಲಸ ಕೈಗೊಂಡರು

"ನೀನು ಜಾಣೆ ಸುಮಿತ್ರೆ ನಿನ್ನ ಹೊಣೆಗಾರಿಕೆಯನ್ನು ನಿರ್ವಹಿಸ ಬಲ್ಲೆ"

" "

"ಕೆಲವು ವಿಷಯಗಳಲ್ಲಿ ನಿನಗೆ ಅನ್ಯಾಯವಾಗಿದೆ ಸುಮಿತ್ರಾ ನೀನವು ಗಳನ್ನು ನಾಗರಾಜನಲ್ಲಿ ಪ್ರಸ್ತಾಪಮಾಡುವುದಿಲ್ಲವೆಂದು ಪ್ರಮಾಣ ಮಾಡಿ ದರೆ ತಿಳಿಸುತ್ತೇನೆ"

"ಏನದು ಹೇಳಿಯಮ್ಮ" ಸುಮಿತ್ರೆ ಸಹಜ ಕುತೂಹಲದಿಂದ ಕೇಳಿದಳು

"ನಾಗರಾಜ ಎರಡು ಮಕ್ಕಳ ತಂದೆ?"

"ನಿಜವೇ?"

"ನಿಜ ಸುಮಿತ್ರಾ"

"ಮೊದಲೇ ತಿಳಿಸದೆ ಸುಳ್ಳು ಯಾಕೆ ಹೇಳಿದಿರಮ್ಮ?"

"ನಾನು ತಿಳಿಸಬೇಕೆಂದೇ ಇದ್ದೆ ಸುಮಿತ್ರ ಇವರು ನನ್ನ ಬಾಯಿ ಮುಚ್ಚಿಸಿಬಿಟ್ಟರು"

ಸುಮಿತ್ರೆಗೆ ಏನುಮಾಡಬೇಕೆಂದೂ ತಿಳಿಯಲಿಲ್ಲ

"ಆ ಮಕ್ಕಳನ್ನು ನೀನೇ ಸಾಕಿ ಸಲಹಬೇಕಮ್ಮಾ"

"ಈಗೆಲ್ಲಿರುವರು?"

"ಅಪ್ಪ ಅನಿಸಿಕೊಂಡವನೇ ಕರೆದುಕೊಂಡು ಹೋಗಿ ಅವರನ್ನೆಲ್ಲೋ ಬಿಟ್ಟು ಬಂದಿದ್ದಾನೆ"

"ಇವರಿಷ್ಟು ಸಂಪಾದಿಸುತ್ತಿದ್ದರೂ ಆ ಮಕ್ಕಳಿಗೆ ಲಭ್ಯವಿಲ್ಲವೇ ?"

"ನಿಜಾಮ್ಮ – ನಿಜ ನೀನಾದರೂ ಸ್ವಲ್ಪ ನಿನ್ನ ಗಂಡನಿಗೆ ವಿವೇಕ ಹೇಳು ಸುಮಿತ್ರ"

"ಅವರು ನನ್ನ ಕಂಡರೇ ಒಂದು ತರಹಾ – ಈ ಮಾತನ್ನು ಹಿರಿಯರಾದ ನೀವೇ ಹೇಳಿದರೆ ವಾಸಿ"

"ಈಗೇನೂ ಆ ಪ್ರಸ್ತಾಪವೆತ್ತಬೇಡ ಅವನ ಮನಸ್ಸು ಸಂತೋಷವಾಗಿರುವಾಗ ನೀನೇ ಹೇಳಿನೋಡು ಆ ಮಕ್ಕಳು ನೊಂದುಕೊಂಡರೆ ನಿನಗೇ ಶ್ರೇಯಸ್ಸಲ್ಲ'

'ನೀವು ಹೇಳುವುದು ಸತ್ಯವಾದ ಮಾತು"

"ವಯಸ್ಸಿಗೂ ಮೀರಿದ ತಿಳುವಳಿಕೆ ನಿನ್ನದು" ಎಂದು ಸುಮಿತ್ರೆಯನ್ನು ಹೊಗಳಿದರು

"ನಾನು ಬಲತಾಯಿಯ ಕೈಕೆಳಗೇ ಬೆಳೆದವಳಮ್ಮ ಅದನ್ನು ಹೇಗೆ ಮರೆಯಲಿ ?" ಸುಮಿತ್ರ ತಾನು ರಾಜಮ್ಮ ಪೋಷಣೆಯಲ್ಲಿ ಪಟ್ಟ ಪಾಡನ್ನು ನೆನೆದು ಹೇಳಿದಳು

"ನಿನ್ನ ಸಂಸಾರ ಹಾಲಿನಂತಾಗಲಮ್ಮ" ನಂಜಮ್ಮ ಸಂತೋಷದಿಂದ ಹೊಗಳಿದರು

ಕೆಲವು ಕಾಲ ನಿಶ್ಚಿಂತೆಯಿಂದ ಕಾಲಕಳೆಯುತ್ತಿದ್ದ ನಂಜಮ್ಮನವರಿಗೆ ಮನೆಯ ಚಿಂತೆ ಕಾಡಲಾರಂಭಿಸಿತು

"ಮನೆ ಚೆರೆ ಸೋರುತ್ತೆ ಪೆಟ್ಟಿಗೇಲೆಲ್ಲಾ ನೀರಿಳಿಯಬಹುದು ಹಸು ಕರು ಹಾಕಿವೆಯೋ ಏನೋ–ನಾವಿಲ್ಲಿ ಹಾಯಾಗಿ ಕುಳಿತುಬಿಟ್ಟೆವು "ಸಿದ್ದನಿಗೆ ಬಡ್ಡಿ ಹಣ ಖಂಡಿತ ತರಲು ಹೇಳಿದ್ದೇಂವ್ರೆ ಈಗ ಅ–ನು ಖರ್ಚು ಮಾಡಿಕೊಂಡುಬಿಟ್ಟದ್ದರೆ ಪುನಃ ಮುಂದಿನ ವರ್ಷದವರೆಗೂ ಮೂರುಕಾಸೂ ವಸೂಲಾಗುವುದಿಲ್ಲ"

ದಿನವೂ ನಂಜಮ್ಮ ಒಂದೊಂದೇ ವಿಷಯಗಳನ್ನು ಜ್ಞಾಪಿಸಿಕೊಂಡು ಚಡಪಡುತ್ತಿದ್ದರು. ಅವರನ್ನು ನೋಡಿ ಪರಮೇಶ್ವರಯ್ಯ, "ಹಾಯಾಗಿ

ನಾಲ್ಕು ದಿನಗಳನ್ನು ಕಳೆಯುವುದು ನಿನ್ನ ಜಾಯಮಾನಕ್ಕೆ ಬಂದಿಲ್ಲವೇನೋ– ಕೆಲವು ದಿನಗಳಾದರೂ ನಿನ್ನ ಸಂಸಾರ ತಾಪತ್ರಯವನ್ನು ಮರೆತಿರಬಾರದೇ"

"ಅತ್ತೆಗೆ ದೇಹವಿಲ್ಲಿದ್ದರೂ ಮನಸ್ಸೆಲ್ಲಾ ಹಾಸನದತ್ತ" ನಾಗರಾಜ ನಂಜಮ್ಮನವರ ಕಷ್ಟ–ವ್ಯಸನಕಂಡು ಹಾಸ್ಯಮಾಡುತ್ತಿದ್ದ

ಅವರ ತಮಾಷೆಗೆ ನಂಜಮ್ಮ ಕೋಪಿಸುತ್ತಿದ್ದರು

"ನೀವು ಬೇಕಾದರೆ ಇರಿ ನಾನು ಹೊರಡುತ್ತೇನೆ–ಮಗೂ–ನನ್ನನ್ನು ಬೆಳಗಿನ ರೈಲಲ್ಲಿ ಕೂರಿಸಿಬಿಡಪ್ಪ"

"ಎಷ್ಟು ಧೈರ್ಯ ಬಂದುಬಿಟ್ಟಿತೇ ನಿನಗೆ" ಪರಮೇಶ್ವರಯ್ಯ ಹೆಂಡತಿಯನ್ನು ಲೇವಡಿ ಮಾಡುತ್ತಿದ್ದರು

"ನಿಮ್ಮನ್ನು ಹಾಸನಕ್ಕೆ ತಲುಪಿಸಿಬಿಟ್ಟರೆ ಸರಿಯೋ ಅತ್ತೆ" ನಾಗರಾಜ ಅತ್ತೆಯನ್ನು ಸಮಧಾನ ಪಡಿಸುವಂತ ಹೇಳಿದ

ಹೆಂಡತಿಯನ್ನು ತಮಾಷೆಮಾಡಿದ್ದರೂ ಪರಮೇಶ್ವರಯ್ಯನವರಿಗೂ ಕರ್ತವ್ಯ ಕರೆದಿತ್ತು ತಾವು ಹೊರಡುವ ವಿಷಯವನ್ನು ಒಂದು ದಿನ ನಾಗರಾಜನಲ್ಲಿ ಪ್ರಸ್ತಾಪ ಮಾಡಿದರು ಬಲವಂತ ಮಾಡಿದರೆ ಏನೂ ಪ್ರಯೋಜನವಿಲ್ಲವೆಂದರಿತ ನಾಗರಾಜ ಒಪ್ಪಿಗೆ ಸೂಚಿಸಿ, ಪ್ರಯಾಣವನ್ನು ಎರಡುದಿನ ಮುಂದೆ ಹಾಕಿದ

ಹೊರಡುವ ದಿನ ನಿಶ್ಚಿತವಾಗಿ ತಿಳಿದಮೇಲೆ ನಂಜಮ್ಮನಿಗೆ ಸ್ವಂತ ಮಗಳನ್ನು ಅಗಲಿ ಹೋಗುವಷ್ಟೇ ಮನಸ್ಸು ನೊಂದಿತು ಸಮಯ ಸಿಕ್ಕಿದಾಗಲೆಲ್ಲಾ ಅಳಿಯನಿಗೆ ಉಪದೇಶ ಕೊಡಲಾರಂಭಿಸಿದರು

"ಪಕ್ಕದ ಬಂಗಲೆಯಲ್ಲಿ ಒಬ್ಬ ಕೆಲಸದವಳಿದ್ದಾಳೆ ಅವಳನ್ನು ನಾಳೆಯಿಂದ ಬರಲು ಹೇಳಿದ್ದೇನೆ"

"ಮನೆಯಲ್ಲಿರುವ ಮಹಾಜನಕ್ಕೆ ಕೆಲಸದವಳೇಕಮ್ಮಾ ನಾನೇ ಮಾಡಿಕೊಂಡು ಹೋಗುತ್ತೇನೆ" ಸಾವಿತ್ರಿ ಮೆಲ್ಲಗೆ ಹೇಳುತ್ತಿದ್ದಳು

"ಇಷ್ಟು ದೊಡ್ಡಮನೆಯ ಕೆಲಸ ನಿರ್ವಹಿಸಲು ನಿನ್ನೊಬ್ಬಳಿಂದ ಸಾಧ್ಯವೇ ನಮ್ಮನ ಹೇಳಿದಂತೆ ಕೇಳು ಕಾಲ ಒಂದೇರೀತಿ ಇರುವುದಿಲ್ಲ"

ನಂಜಮ್ಮ ಹಿರಿಯತನ ಸ್ಥಾಪಿಸುತ್ತಿದ್ದರು

ಹೊರಡುವ ದಿನ ನಾಗರಾಜ ಔತಣಮಾಡಿಸಿ, ಅತ್ತೆಮಾವಂದಿರಿಗೆ

ಉಡುಗೆರೆಯಿತ್ತ ತನಗೆ ತಂದಿದ್ದ ದೊಡ್ಡಂಚಿನ ಸೀರೆಯಿಂದ ತೃಪ್ತರಾದ ನಂಜಮ್ಮ "ನನ್ನಪ್ಪಾ, ಹೀಗೇ ನೂರುಕಾಲ ಕೈ ಮೇಲಾಗಿ ಬಾಳು" ಎಂದು ಮನಃಪೂರ್ವಕವಾಗಿ ಹರಸಿದರು

ಪರಮೇಶ್ವರಯ್ಯನವರನ್ನು ಸ್ಟೇಷನ್ನಿಗೆ ಕಳಿಸಿ ನಾಗರಾಜ ನೇರವಾಗಿ ಮನೆಗೆ ಬಂದವನೇ ಹೆಂಡತಿಯನ್ನು ಕೂಗಿದ

ಸುಮಿತ್ರೆ ಕೂಡಲೆ ಬಂದು ಗಂಡನ ಮುಂದೆ ನಿಂತಳು

ಅವಳನ್ನೇ ಉಂಗುಷ್ಟದಿಂದ ನೆತ್ತಿಯವರೆಗೂ ನೋಡುತ್ತಾ ನಾಗರಾಜ ಕೇಳಿದ "ಸರಿಯಾಗಿ ಡ್ರೆಸ್ ಮಾಡಿಕೊಂಡಿರಬೇಕೆಂದು ನಿನಗೆಷ್ಟು ಸಲ ಹೇಳಬೇಕು ?"

ಗಂಡ ಮಾತು ಪ್ರಾರಂಭಿಸಿದ ರೀತಿಯಿಂದಲೇ ಸುಮಿತ್ರೆಗೆ ಬೆವರಿಳಿಯಲಾರಂಭಿಸಿತು ಬೆದರಿದ ಹರಿಣಿಯಂತಿದ್ದ ಹೆಂಡತಿಯನ್ನು ಕಂಡು ನಾಗರಾಜ ಕೇಳಿದ

"ನನ್ನ ಕಂಡರೆ ಹಾಗೆ ಹೆದರುವೆಯಲ್ಲಾ ನಾನೇನು ನಿನ್ನನ್ನು ನುಂಗಿ ಬಿಡುವೆನೇ ?"

" "

"ನಿನಗೆ ಮಾತು ಕಲಿಸಿಲ್ಲವೇ ಸುಮಿತ್ರಾ "

ಸುಮಿತ್ರೆ ಉಗುರಿನಿಂದ ನೆಲಕೆರೆಯಲಾರಂಭಿಸಿದಳು ನಾಗರಾಜ ಸುಮಿತ್ರೆಯ ಸ್ಥಿತಿಗೆ ನಗುತ್ತಾ,

"ನಾನು ನಿನ್ನನ್ನು ಸರಿಯಾಗಿ ಕಾಣುತ್ತಿಲ್ಲವೆಂದೇ ಎಲ್ಲರೂ ಆಕ್ಷೇಪಿಸುವರು ಸುಮಿತ್ರಾ "

"ನನಗೇನು ಕಡಿಮೆ ಮಾಡಿರುವಿರಿ ?" ಸುಮಿತ್ರೆ ಕಂಪಿಸುವ ಧ್ವನಿಯಲ್ಲಿ ಕೇಳಿದಳು

"ನೀನು ನನ್ನ ಮನಸ್ಸಿನಂತೆ ನಡೆದುಕೊಂಡರೆ ನಿಜವಾಗಿ ನಾನು ಸುಖಿಯಾಗುತ್ತೇನೆ "

"ಏನದು ?" ಎನ್ನುವಂತೆ ಸುಮಿತ್ರೆ ಕತ್ತೆತ್ತಿ ನೋಡಿದಳು. ಅವಳ ಕಣ್ಣುಗಳಾಗಲೇ ಹನಿಗೂಡಿದ್ದಿತು

"ಹುಚ್ಚಿ, ಅಳುವುದಕ್ಕೇನಾಯಿತೇ ?" ಎಂದು ನಾಗರಾಜ ಸಮಾಧಾನಪಡಿಸಿದ

ಸುಮಿತ್ರೆಗೆ ಬೆಳಕು ಕಾಣಿಸಿತು ಅವಳ ಮುಖವು ಮಂದಹಾಸದಿಂದ ಅರಳಿತು

"ನಾನು ತಂದುಕೊಟ್ಟ ಸೀರೆಗಳನ್ನು ನೀನು ಉಡುವುದೇ ಇಲ್ಲ"

" "

"ನೀನು ಈ ರೀತಿಯಲ್ಲಿ ಇದ್ದರೆ ನನಗೆ ಅವಮಾನವಾಗುತ್ತದೆ ಸುಮಿತ್ರೆ"

" "

"ಅವತ್ತು ನೋಡಿದೆಯಲ್ಲಾ—ನನ್ನ ಗೆಳತಿಯರು ಹೇಗಿದ್ದರು ? ನೀನು ಅದೇ ರೀತಿ ಇರಬೇಕು"

"ನನಗವೆಲ್ಲ ಒಗ್ಗುವುದಿಲ್ಲ"

"ನೋಡು ನೀನು ನನ್ನ ಮನಸ್ಸಿನಂತಿದ್ದರೆ ನನ್ನ ಜತೆ ಕರೆದುಕೊಂಡು ಹೋಗಲು ನನಗೂ ಸಂತೋಷವಾಗುತ್ತದೆ"

"ನಡತೆ ಮುಖ್ಯ-ಅಲಂಕಾರದಿಂದೇನು ?"

"ತಗೆದೆಯಲ್ಲಾ ನಿಮ್ಮಜ್ಜಿಯ ಪುರಾಣ"

ಸುಮಿತ್ರೆ ಗಂಡನ ಉದಾಸೀನತೆ ಕಂಡು ಸುಮ್ಮನಾದಳು

ನಾಗರಾಜ ಕಷ್ಟಪಟ್ಟು ಸಂಯಮ ತಂದುಕೊಂಡು ಹೇಳಿದ

"ಹೋಗಿ ಉಟ್ಟುಕೊಂಡು, ಲಕ್ಷಣವಾಗಿ ತಲೆಬಾಚಿಕೋ ಹೊರಗೆಲ್ಲಾದರೂ ಹೋಗಿ ಬರೋಣ"

"ನನಗಾಸೀರೆ ಉಟ್ಟುಕೊಂಡರೆ ಹೇಗೋ ಆಗುತ್ತದೆ ನಾನೆಲ್ಲೂ ಬರಲಾರೆ"

"ಬೇಡ ಸುಮಿತ್ರ ಸುಮ್ಮನೆ ಹಠಮಾಡಬೇಡ"

ಸುಮಿತ್ರೆ ಮೊಂಡುಹಿಡಿದು ಕೂಡುತ್ತಿದ್ದಳು ನಾಗರಾಜ ಸಹನೆ ಕಳೆದುಕೊಂಡು,

"ಹಾಳಾಗಿ ಹೋಗು ನಿನ್ನ ಹಣೆಯಬರಹ ತಪ್ಪಿಸಲು ಯಾರಿಂದ ಸಾಧ್ಯ ?" ಎಂದು ಹೇಳಿ ಹೊರಟುಹೋಗುತ್ತಿದ್ದ

ಸುಮಿತ್ರೆಯ ಕಣ್ಣುಗಳಲ್ಲಿ ತಡಸಲಿನಂತೆ ಹನಿಗಳು ಧುಮುಕುತ್ತಿದ್ದವು

ಅವಳ ಕಣ್ಣುಗಳ ಮುಂದೆ ಮೇರಿ ಬಂದು ನಿಲ್ಲುತಿದ್ದಳು

'ನಾನೂ ಅವಳಂತೇ ಅಲಂಕಾರಮಾಡಿಕೊಳ್ಳಬೇಕೇ" ಸುಮಿತ್ರೆ ತನ್ನಲ್ಲೇ ಪ್ರಶ್ನಿಸಿಕೊಳ್ಳುತ್ತಿದ್ದಳು ಆಲೋಚನೆ ಮಾಡಿದುದೇ ತಡ ಮೇರಿಯ ರೂಪದಲ್ಲಿ ತನ್ನ ಪ್ರತಿಬಿಂಬ ಕಾಣಲೆತ್ನಿಸಲು ಬಯಸಿದ ಸುಮಿತ್ರೆಗೆ, ರಾಜಮ್ಮ, ರಂಗಮ್ಮನ ನೆನಪಾಗುತ್ತಿದ್ದಿತು ತನ್ನ ಅವತಾರ ನೋಡಿ ಅವರೆಲ್ಲರೂ ಪರಿಹಾಸ್ಯಮಾಡುವರೆಂದು ಭಾವಿಸಿದ ಸುಮಿತ್ರೆ,

'ಏನೇ ಆದರೂ ನಾನಿವರ ಮಾತಿಗೆ ಮರುಳಾಗಬಾರದು' ಎಂಬ ದೃಢ ನಿರ್ಧಾರ ಮಾಡುತ್ತಿದ್ದಳು

ಸುಮಿತ್ರೆಯ ಆಕೃತಿಯ ಸೌಂದರ್ಯ ನಾಗರಾಜನನ್ನು ಆಕರ್ಷಿಸುತ್ತಿದ್ದರೂ, ವಿಲಾಸಜೀವನದಲ್ಲಿಯೇ ಬೆಳೆದಿದ್ದ ಅವನು ಪ್ರಯತ್ನಪೂರ್ವಕವಾಗಿ ತನ್ನ ಮನದ ಬಾಗಿಲನ್ನು ಮುಚ್ಚುತ್ತಿದ್ದ ತಾತ್ಕಾಲಿಕವಾಗಿಯಾದರೂ ಅವನು ಹೇಳಿದಂತೆ ಕುಣಿದು, ಕ್ರಮೇಣ ಅವನನ್ನು ತನ್ನ ದಾರಿಗೆ ತಂದುಕೊಳ್ಳಬಹುದೆಂಬುದು ಸುಮಿತ್ರೆಗೂ ತಿಳಿಯಲಿಲ್ಲ

ಗಂಡ ಹೆಂಡತಿಯರಲ್ಲಿ ಯಾರೂ ಸೋಲನ್ನೊಪ್ಪಲು ಸಿದ್ಧರಾಗಿರಲಿಲ್ಲ

ನಾಗರಾಜನ ಅಸಮಾಧಾನಕ್ಕೆ ಕೊನೆಯೇ ಇರಲಿಲ್ಲ ಮೊದಲು ಕೆಲವು ದಿನಗಳು ಹೊರಗೇ ತನ್ನ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಬರುತ್ತಿದ್ದ ಅವನು ತನ್ನ ಮನೆಗೇ ಗೆಳತಿಯರನ್ನು ಕರೆದು ತಂದಿರಿಸಿಕೊಳ್ಳಲೂ ತಡಮಾಡಲಿಲ್ಲ ನಾಗರಾಜನ ಉಪಪತ್ನಿಯರಿಗೆ ಸುಮಿತ್ರೆ ವಾರ, ಹದಿನೈದು ದಿನಗಳು ಉಪಚಾರಮಾಡಬೇಕಾದ ಪರಿಸ್ಥಿತಿಯೊದಗುತ್ತಿದ್ದಿತು

'ನಾನು ಮಾಡಿದ ಒಂದು ತಪ್ಪಿಗೆ ಇಷ್ಟು ಉಗ್ರವಾದ ಶಿಕ್ಷೆಯೇ?" ಎಂದು ಸುಮಿತ್ರೆ ಯೋಚಿಸಿ ತನ್ನಲ್ಲೇ ಕೊರಗುತ್ತಿದ್ದಳು

ಪರಿಸ್ಥಿತಿ ಸುಧಾರಿಸುವುದರ ಬದಲು ನಿತ್ಯ ಇಳಿಮುಖವಾಗುತ್ತಿದ್ದುದನ್ನು ಕಂಡು, ಸುಮಿತ್ರೆ ಗಂಡನ ಈಪ್ಸಿತಗಳನ್ನು ಪೂರೈಸಲು ನಿರ್ಧರಿಸಿ

ದಳು ಆದರೆ ನಾಗರಾಜನೇ ಸುಮಿತ್ರೆಯನ್ನಗಲಿ ದೂರ, ಬಹಳ ದೂರ ಹೋಗಿಬಿಟ್ಟಿದ್ದ

ಚಿಂತೆಯ ಚಿತೆ ಸುಮಿತ್ರೆಯ ದೇಹವನ್ನು ಕ್ರಮೇಣ ದಹಿಸಲಾರಂಭಿಸಿತು ಒಡತಿಯ ದುಃಖದಲ್ಲಿ ಪಾಲುಗಾರಳಾಗುತ್ತಿದ್ದವಳೆಂದರೆ ಲಕ್ಕವ್ವ ಕೆಲಸ ಮುಗಿದರೂ ಲಕ್ಕವ್ವ ಹೊರಡುವ ಸೂಚನೆ ತೋರಿಸುತ್ತಿರಲಿಲ್ಲ ಅದನ್ನು ಎಷ್ಟೋ ಹೊತ್ತಿನಮೇಲೆ ಸುಮಿತ್ರೆ ಗಮನಿಸುತ್ತಿದ್ದಳು

"ಇನ್ನೇನೂ ಕೆಲಸವಿಲ್ಲ ಹೋಗು ಲಕ್ಕಿ" ಲಕ್ಕವ್ವ ನಿಂತಲ್ಲಿಯೇ ಕುಳಿತುಕೊಳ್ಳುತ್ತಿದ್ದಳು

"ಯಾಕ ? ಏನು ಬೇಕಾಗಿತ್ತೇ ?"

"ಅಲ್ಲಣವ್ವಾ, ನಿಮ್ಮ ವಯಸ್ಸೇನು ? ನೀವಿರೋದೇನು ?" ಲಕ್ಕವ್ವ ತನ್ನ ಅನುಮಾನದ ಕಂತೆ ಬಿಚ್ಚುತ್ತಿದ್ದಳು

ಸುಮಿತ್ರೆಗೆ ಮುಜುಗರವೆನಿಸುತ್ತಿದ್ದಿತು ಜಾಗ ಬಿಟ್ಟೇಳುವ ಪ್ರಯತ್ನವನ್ನವಳು ಮಾಡಲೆತ್ನಿಸುತ್ತಿದ್ದಳು ತನ್ನ ದುಃಖದಲ್ಲಿ ಭಾಗಿಯಾಗಬಲ್ಲ ಆತ್ಮೀಯ ಜೀವದ ಆವಶ್ಯಕತೆ ಸುಮಿತ್ರೆಗೆ ಕಂಡು ಬರುತ್ತಿದ್ದಿತು ಲಕ್ಕವ್ವನಲ್ಲಿ ತನ್ನ ದುಃಖ ತೋಡಿಕೊಳ್ಳುವ ಪ್ರಯತ್ನಮಾಡಿ ಕಿಂಚಿತ್ ಸಮಾಧಾನ ತಂದುಕೊಳ್ಳಲೆತ್ನಿಸುತ್ತಿದ್ದಳು

"ಮನೆಯಾಗೆ ಲಸ್ಮೀ ಅಂಗೆ ನೀವಿದ್ದರೂ ಅಯ್ನೋರು ಅವರಿವ್ರ ಸಹವಾಸ ಮಾಡ್ತಾರಲ್ಲ ಸರಿಯಾ ?"

"ನಾವು ಕೇಳಿಬಂದದ್ದು ಲಕ್ಕಿ ಯಾರನ್ನು ದೂರಿ ಏನು ಪ್ರಯೋಜನ" ಸುಮಿತ್ರೆ ಕಣ್ಣೀರುಕಾಲುವೆ ಹರಿಸುತ್ತಿದ್ದಳು

"ಅದ್ಯಾವೋಳವ್ವಾ. ಮೊನ್ನಿನ ದಿನ ಬಂದಿದ್ದಳಲ್ಲ"

" . "

"ಬಯಾಸ್ಕೋಪಿನಲ್ಲಿ ಕುಣಿಯೋ ಅಂಗಿದ್ದಳು ಅವಳನ್ನು ಕಂಡ ಮ್ಯಾಕೆ ನಂಗೆ ಮೈ ಉರಿಬಂದ್ಬುಡ್ತು."

" "

"ಅವ್ಳೇನವ್ವಾ ಅವ್ಳು ಬುದ್ಯೋರಕೂಡ 'ಟಸ್ - ಪುಸ್' ಅಂತ ಮಾತಾಡ್ತಿದ್ಳಲ್ಲ"

"ನಂಗೇನು ಗೊತ್ತು ಲಕ್ಕಿ ?"

"ನಿಮಗೆ ಆ ಭಾಸ ಬರೋಕಿಲ್ವಾ"

"ಹಾಗೆಲ್ಲ ಜಾಣೆಯಾಗಿದ್ದರೆ ನನ್ನಸ್ಥಿತಿ ಹೀಗೇಕೆ ಇರುತ್ತಿತ್ತೇ ಲಕ್ಕಿ ? ನಿನ್ನಂತೇ ನಾನೂ ಈ ಮನೆಯ ಚಾಕರಿಯವಳು ಯಜಮಾನಂಗೆ ಬೇಯಿಸಿ ಹಾಕಲು ನಾನಿದ್ದೇನೆ" ಸುಮಿತ್ರೆ ದುಃಖದಿಂದ ಹೇಳುತ್ತಿದ್ದಳು

"ನೀವು ಏಳೋದೂ ಭೋ ಚಂಪಾಕಿವೆ ಕಣ್ರವ್ವಾ ? ಅದ್ಯಾಕಾ ನೀವೇನೂ ಕೈಹಿಡಿದ ಎಡ್ತಿ ಅಲ್ವಾ ? ಆ ತಲೆ ಹಾಸಿದವ್ರೆಲ್ಲಾ ಇಲ್ಲಿ ಬಂದು ಮೆರಿಯೋವಾಗ, ನಿಮಗೇನ್ರವ್ವಾ ?"

"ನಿನಗೊಂದೂ ಅರ್ಥವಾಗುವುದಿಲ್ಲ"

"ನಮ್ಮ ಜನದಲ್ಲಿ ಇಂಗೆಲ್ಲಾ ಮಾಡ್ಬೇಕಿತ್ತು - ಪಂಚಾಯ್ತಿ ಮಾಡಿಸಿ ಬುಡ್ತಿದ್ವಿ - ಏನ್ರವ್ವಾ ? ನೀವಿಲ್ಲಿ ಇಂಗೆ ಪರಾಣ ಬುಡ್ತಿದ್ರೂ ಒಬ್ರೂ ಬಂದು ಇಚಾರಿಸ್ಕೋಬಾರದಾ"

"ತಪ್ಪು ನನ್ನದು ತಿಳಿಯದು ಲಕ್ಕಿ-ಸುಮ್ಮನೆ ಯಾಕೆ ನಿಂದಿಸುತ್ತೀ"

"ನೀವು ತಿಳಸ್ನೇ ಇಲ್ವಾ ?"

"ಏನಂತ ಹೇಳಲಿ ನಿಂಗೆ ? ಮಗಳೇನೋ ಸುಖವಾಗಿರುವಳೆಂದು ಅವರು ಸಂತೋಷವಾಗಿದ್ದರೆ ಅವರಿಗೇಕೆ ಗೋಳುಕರೆ ಅಂಟಿಸಲಿ ?"

"ಭೋ ಚಂಪಾಕೆ ಮಾಡ್ತಿದಿಕಣವ್ವಾ - ಮುಂದೆ ಒಂದು ಕಾಜಗಾ ಆಕಿಸಿ ಕರಿಸಿ - ಅವರಾದ್ರೂ ಒಸಿ ಬುದ್ದಿ ಏಳಿ ದಾರಿಗೆ ತರಲಿ"

ಸುಮಿತ್ರೆಯ ಕೈಲಿ 'ಆಗಲಿ' ಎನಿಸುವ ತನಕಾ ಲಕ್ಕವ್ವ ಕದಲುತ್ತಿರಲಿಲ್ಲ ಅದನ್ನು ಕಂಡ ಸುಮಿತ್ರೆ

"ಆಗಲಿ ಹೋಗೇ ಮನೆಯಲ್ಲಿರುವ ಮಕ್ಕಳನ್ನೂ ಮರೆತು ಕೂತಿರುವೆಯಲ್ಲಾ"

ಲಕ್ಕವ್ವ ಏಳುವ ಸನ್ನಾಹ ಮಾಡಿ

"ನಿನಗೀ ಕಷ್ಟಕೊಟ್ಟ ಶಿವಂಗೆ ಕಣ್ಣಿಲ್ಲ" ಎಂದುಕೊಂಡು ಹೋಗುತ್ತಿದ್ದಳು

## ೩೫

ಸುಮಿತ್ರೆಯು ಕೈಹಿಡಿದಂದಿನಿಂದ ನಾಗರಾಜನಿಗೆ ದೆಸೆ ಖುಲಾಯಿಸಿತು ಅವನು ಮುಟ್ಟಿದುದೆಲ್ಲ ಚಿನ್ನವಾಗುತ್ತಿದ್ದಿತು ಹಿಡಿದ ಕಂಟ್ರಾಕ್ಟುಗಳಲ್ಲಿ ಸಾವಿರಾರು ರೂಪಾಯಿ ಬರಲಾರಂಭವಾಯಿತು – ದಿನದಿನಕ್ಕೂ ಬ್ಯಾಂಕಿನ ಲೆಕ್ಕವೂ ಏರುತ್ತಿದ್ದಿತು ನಾಗರಾಜನ ಉನ್ನತಿ ಕಂಡ ಗೆಳೆಯರು, ಹೆಂಡತಿ ಬಂದ ಹೊತ್ತು ಒಳ್ಳೆಯದು ನಾಗರಾಜನಿಗೆ ಶುಕ್ರದೆಸೆ ಆರಂಭವಾಗಿದೆ' ಎನ್ನುತ್ತಿದ್ದರು ತನ್ನ ಸ್ಥಿತಿಗಾಗಿ ಮನದಲ್ಲೇ ನಾಗರಾಜ ಹಿಗ್ಗುತ್ತಿದ್ದ ಗಂಡ ಲೆಕ್ಕವಿಲ್ಲದಷ್ಟು ಹಣ ಸಂಪಾದಿಸುತ್ತಿದ್ದರೂ ಸುಮಿತ್ರ 'ನಿರಾಭರಣ ಸುಂದರಿ'ಯಂತೇ ಉಳಿದಳು ನಾಗರಾಜ ಸ್ವಂತವಾಗಿ ಕಾರು ಕೊಂಡುಕೊಂಡ. ಕೈಯಲ್ಲಿ ಹಣ – ಮನಸ್ಸು ಬಂದಂತೆ ತಿರುಗಲು ಕಾರು ನಾಗರಾಜ ಹೆಂಡಕುಡಿದ ಕಪಿಯಂತಾದ ಯುಕ್ತಾಯುಕ್ತ ಜ್ಞಾನ ಅವನಲ್ಲಿ ಅಳಿಸಿಹೋಗಿದ್ದಿತು

ಮೇರಿಯೊಡನೆ ಸೋಮುವಿನ ಸ್ನೇಹ ತಿಳಿದ ಮೇಲೆ ನಾಗರಾಜನ ಕಣ್ಣಿಗೆ ಮೇರಿ ಭುವನಮೋಹಿನಿಯಂತೇ ಕಂಡಳು ಹಲವು ಹೆಣ್ಣುಗಳಲ್ಲಿ ಒಬ್ಬಳಾಗಿದ್ದ ಮೇರಿ ಈಗ ನಾಗರಾಜನ ಮೈ ಮನವೆರಡನ್ನೂ ಆಕ್ರಮಿಸಿದ್ದಳು ಮೇರಿಗಾಗಿ ಸೋಮುವಿನೊಡನೆ ಅವನು ಕಾದಾಡಲಾರಂಭಿಸಿದ

ಒಂದು ದಿನ ಸೋಮುಸುಂದರಂ ಇರುವ ವೇಳೆಗೇ ನಾಗರಾಜ ಬಂದ ಮೇರಿಯ ಕಳ್ಳತನ ಹೊರಬಿದ್ದಂತಾಯಿತು ಮೇರಿ ಭಂಡಧೈರ್ಯ ತಂದುಕೊಂಡು ನಾಗರಾಜನನ್ನು ರಮಿಸಲೆತ್ನಿಸಿದಳು

"ಇದೇನು ಡಿಯರ್ – ಅವೇಳೆಯಲ್ಲಿ ಬಂದುಬಿಟ್ಟಿರಿ?"

ನಾಗರಾಜ ಮಾತಾಡಲಿಲ್ಲ

ಸೋಮಸುಂದರಂ ಏನುಮಾಡಬೇಕೆಂಬುದನ್ನೂ ತಿಳಿಯದವನಂತೆ ಒಂದು ಕ್ಷಣ ನಿಂತ ಮರುಕ್ಷಣವೇ ಹೊರಡಲು ಕಾತುರನಾದ

ನಾಗರಾಜನ ಕೋಪ ಮಿತಿಮೀರಿತು ಗೆಳೆಯನನ್ನು ಕೈ ಹಿಡಿದು ನಿಲ್ಲಿಸಿ ಕಪಾಲಕ್ಕೆ ಬಿಗಿದ ಸೋಮಸುಂದರಂಗೆ ಕಣ್ಣು ಕತ್ತಲಿಟ್ಟು ಬಂದಂತಾಯಿತು ಹಾಗೆಯೋ ಸುಧಾರಿಸಿಕೊಂಡು,

"ನಾಳೆ ಬಂದು ನಿನ್ನ ಸಾಲವನ್ನು ಬಗೆಹರಿಸಿಬಿಡುತ್ತೇನೆ ನಿನ್ನ ಸಹವಾಸವೇ ಬೇಡ ಕೈತೊಳೆದುಕೊಂಡುಬಿಡುತ್ತೇನೆ" ಎಂದು ಹೇಳಿದವನೇ ಕಾರಿನಲ್ಲಿ ಹೊರಟುಬಿಟ್ಟ

"ಆಗಲಿ – ಹೊರಡೋ ಇಲ್ಲಿಂದ" ನಾಗರಾಜ ಕೂಗಿ ಹೇಳಿದ

ನಾಗರಾಜನ ಕೋಪ ಸ್ವಲ್ಪ ಶಮನವಾದ ಮೇಲೆ ಮೇರಿ ಬಳುಕುತ್ತಾ ಬಂದು ಅವನ ಭುಜದ ಮೇಲೆ ಕೈಬಳಸಿ,

"ನೀವು ದುಡುಕಿಬಿಟ್ಟಿರಿ ಡಿಯರ್"

"ಅವನು ದಿನವೂ ಬರುತ್ತಿದ್ದನೇ ಮೇರಿ? ನೀನು ನನಗೆ ಮೋಸ ಮಾಡಿದೆ"

"ನಿಮ್ಮ ಸ್ನೇಹಿತನೆಂದು ನಾನೂ ಮರ್ಯಾದೆ ಕೊಟ್ಟು ಮಾತಾಡಿಸಿದರೆ ಅವನು ಮಾಡಿದುದನ್ನು ಕಂಡಿರಾ ಡಿಯರ್? ನೀವಿಂದು ಬರದಿದ್ದರೆ ನನ್ನ ಗತಿ ಏನಾಗುತ್ತಿದ್ದಿತೋ"

"ನಿನಗೂ ಸೋಮುವಿಗೂ ಯಾವ ಸಂಬಂಧವೂ ಇಲ್ಲವೇ?"

"ಇಲ್ಲ ಡಿಯರ್"

"ಖಂಡಿತವಾಗಿಯೂ?"

"ಖಂಡಿತಾ ಡಾರ್ಲಿಂಗ್ ನನ್ನಲ್ಲಿ ಅಷ್ಟೂ ನಂಬಿಕೆ ಇಲ್ಲವೇ?"

"ನನ್ನಲ್ಲಿ ಸುಳ್ಳು ಹೇಳುತ್ತಿರುವೆ ಮೇರಿ"

"ಹೊಟ್ಟೆಯ ಕಿಚ್ಚಿಗೆ ಸೋಮು ನಿಮಗೇನೇನೋ ಹೇಳಿರುವನು"

"ಅದರಿಂದವನಿಗೆ ಏನು ಫಲ?"

"ನಮ್ಮಿಬ್ಬರ ಸ್ನೇಹ ತಪ್ಪಿದರೆ ನಾನು ಅವನವಳಾಗಬಹುದೆಂಬ ಆಸೆ"

ಮೇರಿ ಕೊಟ್ಟ ಕಾರಣ ನಾಗರಾಜನಿಗೆ ಸಮಂಜಸವಾಗಿ ತೋರಿತು

ನಾಗರಾಜನಲ್ಲಿ ಅಲ್ಪ ಸ್ವಲ್ಪ ನಂಬಿಕೆ ಹುಟ್ಟಿಸಿದ್ದರೂ ಅವನಿಗೆ ಅನುಮಾನ ಇದ್ದೇ ಇತ್ತು ಅದನ್ನು ಗ್ರಹಿಸಿದ ಮೇರಿ,

"ನಿಮ್ಮನ್ನು ಹುಡುಕಿಕೊಂಡು ಬಂದವನಂತೆ ಈ ದಿನ ಬಂದ ಡಿಯರ್ 'ಬೆಳಗಿನಿಂದಲೂ ಒಂದು ಸಲವಾದರೂ ಮನೆಯ ಕಡೆ ಬಂದಿಲ್ಲ – ಈಗ ಬರಬಹುದು' ಎಂದು ಹೇಳಿವೆ – ತಾನೂ ಕಾಯುವುದಾಗಿ ಹೇಳಿ ಕುಳಿತ ನನಗೇಕೋ ಭಯವಾಯಿತು – ಮಗೆಯನ್ನಾದರೂ ಎಬ್ಬಿಸಿ ಜೊತೆಗಿರಿಸಿ ಕೊಳ್ಳೋಣವೆಂದು ಯೋಚಿಸಿ ಹೊರಟೆ – ಅವನೇನೇನೋ ಬಾಯಿಗೆ ಬಂದಂತೆ ಮಾತನಾಡಿದ – ನಿಜವಾಗಿ ಈಗ ನೆನೆಸಿಕೊಂಡರೆ ನಡುಕ ಬರುತ್ತದೆ ಡಿಯರ್ ತಂದೆ ಜೀಸಸ್ ನನ್ನ ಪ್ರಾರ್ಥನೆಯಂತೆ ಸರಿಯಾದ ಹೊತ್ತಿಗೆ ನಿಮ್ಮನ್ನು ಕರೆತಂದು ಪಾರುಮಾಡಿದ"

ಮೇರಿ ಒಂದು ಕ್ಷಣ ಕಣ್ಣುಮುಚ್ಚಿ ಶಿಲುಬೆಯ ರಚನೆಮಾಡಿ ದೇವರಿಗೆ ಪ್ರಾರ್ಥನೆಯನ್ನೊಪ್ಪಿಸಿದಳು ನಾಗರಾಜನ ಅನುಮಾನ ಬುಡ ಸಮೇತ ಒಗೆಯಲ್ಪಟ್ಟಿದ್ದಿತು ಮೇರಿ ವಿಜಯೋನ್ಮಾದದ ನಗೆಯನ್ನು ತೇಲಿಸುತ್ತಾ ಕೇಳಿದಳು

"ನಿಮ್ಮ ಪಾರ್ಟನರ್‌ಷಿಪ್ ತೆಗೆದುಕೊಂಡುಬಿಡುವಿರಾ ಡಾರ್ಲಿಂಗ್?"

"ನಾನೂ ಸ್ವಂತವಾಗಿಯೇ ಬಿಸಿನೆಸ್ ಪ್ರಾರಂಭಮಾಡಬೇಕೆಂದಿದ್ದೆ ಈಗಾದುದೂ ಒಳ್ಳೆಯದಕ್ಕೇ ಆಯಿತು"

"ಹಾಗೇ ಮಾಡಿ ಡಾರ್ಲಿಂಗ್ – ಅಪ್ಪ ಆಸ್ತಿ ಮಾಡಿದ್ದಾನೆಂಬ ಅಹಂಕಾರ ನೋಮುವಿಗೆ"

"ನಾನು ಕೈ ಬಿಟ್ಟರೆ ಅವನಿಗೆ ಇನ್ಯಾರು ಸಿಕ್ಕುತ್ತಾರೆ?" ನಾಗರಾಜ ಜಂಭ ಕೊಚ್ಚಿಕೊಂಡ

"ನಿಜ ಡಾರ್ಲಿಂಗ್ ಅವನಿಗಾಗ ಸರಿಯಾದ ಶಾಸ್ತಿಯಾಗುತ್ತದೆ"

ಮೇರಿ ನಾಗರಾಜನ ಕೈ ಹಿಡಿದು ಕೋಣೆಗೆ ಕರೆದೊಯ್ದಳು

ಸೋಗಿಗೆ ನಾಗರಾಜ ಸಂತೋಷ ನಟಿಸಿದ್ದರೂ ಅಂತರಾಳದಲ್ಲಿ ಅವನಿಗೆ ದುಃಖವಾಗಿದ್ದಿತು ತನ್ನ – ಸೋಮುವಿನ ಅನೇಕ ವರ್ಷಗಳ ಸ್ನೇಹ ಈ ರೀತಿ ಕೊನೆಗೊಂಡಿತಲ್ಲಾ ಎಂದು ವ್ಯಸನಗೊಂಡ ಕಾರ್ಯ ಮಿಂಚಿ ಹೋಗಿದ್ದಿತು. ಈಗಲೂ ಸೋಮುವಿನಲ್ಲಿ ನಾನೇ ಕ್ಷಮೆ ಕೋರಲೇ? ಛೀ –

ಹಾಗೆ ಮಾಡುವುದು ಮೂರ್ಖತನ – ನಾನೇಕೆ ಅವನಲ್ಲಿ ಯಾಚಿಸಬೇಕು,

ರಾತ್ರಿಯಲ್ಲಿ ಯೋಚಿಸಿ ನಾಗರಾಜ ಕಂಗೆಟ್ಟ ಬೆಳಗಾವೊಡನೇ ಮೇರಿ ತಂದಿತ್ತ 'ಬ್ರೆಕ್ ಫಾಸ್ಟ್'ನ್ನು ಮುಗಿಸಿ ನೇರವಾಗಿ ಲಾಯರೊಬ್ಬರನ್ನು ಕರೆತಂದು ತನ್ನ ಮತ್ತು ಸೋಮು ವಿನ ವ್ಯವಹಾರವನ್ನು ಬಗೆಹರಿಸಿದ

ನಾಗರಾಜನಿಗೆ ತಲೆಯ ಮೇಲಿದ್ದ ಒಂದು ದೊಡ್ಡ ಹೊರೆ ಇಳಿಸಿದಂತಾಯಿತು.

ಕೈಗೆ ಹಣ ನೀಡುವುದೇ ತಡ ನಾಗರಾಜ ಮೇರಿಯ ಸಾನಿಧ್ಯ ಸೇರಿದ ಶಾನು ಒಳ್ಳೆಯ ಪಾಠ ಕಲಿಸಿದೆನೆಂದು ಮೇರಿ ತೃಪ್ತಿಪಟ್ಟಳು ತನ್ನ ಉದ್ವೇಗ ಕೊಂಚ ಹತೋಟಿಗೆ ಬಂದ ಮೇಲೆ ನಾಗರಾಜ ಹೇಳಿದ.

"ಸ್ವೀಟ್, ಸಂಜೆಗೆಲ್ಲಾದರೂ ಹೊರಗೆ ಹೋಗೋಣ"

"ಎಲ್ಲಿಗೆ?"

"ಎಲ್ಲಿಗಾದರೂ ಸರಿ ಈ ವಾತಾವರಣದಿಂದ ನಾಲ್ಕು ದಿನ ಹೊರಗಿರಬೇಕೆಂದು ನನ್ನ ಮನ ಬಯಸುತ್ತದೆ"

"ನನಗೆ ಕಾಲೇಜಿದೆಯಲ್ಲಾ"

"ಇರಲಿ ಬಾ ಡಾರ್ಲಿಂಗ್" ನಾಗರಾಜ ಪೀಡಿಸಿ ಒಪ್ಪಿಸಿದ

ಸ್ವಲ್ಪಹೊತ್ತು ಚರ್ಚೆಯಾದ ಮೇಲೆ ಶ್ರೀರಂಗಪಟ್ಟಣಕ್ಕೆ ಹೋಗುವುದೆಂದು ನಿರ್ಧಾರವಾಯಿತು

"ಮಣಿಯೂ ಬರುವಳೇ ಕೇಳು" ನಾಗರಾಜ ಮೇರಿಗೆ ಹೇಳಿದ

"ಅದೇನು ಡಿಯರ್? ಮಣಿಯನ್ನು ಕಂಡರೆ ನಿಮಗಿಷ್ಟು ಅಭಿಮಾನ?" ಮೇರಿ ಕೆಣಕಿದಳು

"ಪಾಪ ಬಂದರೆ ಬರಲಿ ಕೇಳಿನೋಡು"

"ನಾನು ಬರುವುದಿಲ್ಲ ಓದುವುದಿದೆ" ಮಣಿ ಖಂಡಿತವಾಗಿ ಅಸಮ್ಮತಿ ಸೂಚಿಸಿದಳು

"ನಾನು ಮೊದಲೇ ಹೇಳಲಿಲ್ಲವೇ? – ನಮ್ಮ ಮಣಿ ಕಾನ್ವೆಂಟಿಗೆ ಸೇರುತ್ತಾಳಂತೆ ಡಿಯರ್" ಮೇರಿ ತಂಗಿಯನ್ನು ಹಾಸ್ಯಮಾಡಿದಳು.

"ನಿನ್ನಿಷ್ಟ ಬಂದಂತೆ ನೀನಿರು ಅಕ್ಕ ಎಲ್ಲರ ವಿಷಯಕ್ಕೂ ಬಾಯಿ ಹಾಕಬೇಡ" ಮಣಿ ಕೋಪದಿಂದ ಹೇಳಿದಳು

ತಾನುಡಬೇಕಾದ ಸೀರೆ – ಕುಪ್ಪಸದ ಆಯ್ಕೆಯಲ್ಲಿ ಮೇರಿ ಮೈ ಮರೆತಳು ನಾಗರಾಜ ಅಂದು ಮೇರಿಯ ಮನೆಯಲ್ಲೇ ಉಳಿದ

ಸಂಜೆ ನಾಲ್ಕುಗಂಟೆಯ ವೇಳೆಗೆ ಹೊರಡಲು ನಾಗರಾಜ ಮೇರಿಯು ನ್ನೆಬ್ಬಿಸಿದ

"ಏಳು ಮೇರಿ, ಈಗಲೇ ಹೊರಟರೆ ನಾಲ್ಕು ಘಳಿಗೆಯಾದರೂ ಇದ್ದಂತಾಗುತ್ತದೆ"

"ಊಂ" ಎಂದು ಮೇರಿ ಮೈಮುರಿದು ಬಲಮಗ್ಗುಲಾದಳು

ನಾಗರಾಜ ಬಲವಂತವಾಡಿ ಮೇರಿಯನ್ನೆಬ್ಬಿಸಿದ ಮಬ್ಬು ಹರಿದ ಮೇಲೆ ಮೇರಿ ಜ್ಞಾಪಿಸಿಕೊಂಡು,

"ಓ! ಇವತ್ತು ಪದ್ಮುಗೆ ಕಾಯಲು ಹೇಳಿದ್ದೆ"

"ಏನಾದರೂ ಬೇರೆ ಪ್ರೋಗ್ರಾಂ ಇತ್ತೆ?" ನಾಗರಾಜ ಕೇಳಿದ

"ಊಂ ಗಾಯಿತ್ರೀಗೆ ಹೋಗಬೇಕಂದಿದ್ದೆವು – ಬಯ್ಕೋತಿರುತ್ತಾಳೆ" ಮೇರಿ ನಕ್ಕಳು

ನಾಗರಾಜ ಹೊರಡಲು ಸಿದ್ಧನಾದ ಮೇರಿ ಅಲಂಕರಿಸಿಕೊಳ್ಳಲಾರಂಭಿಸಿದಳು

"ಈ ದಿನ ಕೊಂಡೆ ಕಟ್ಟುತ್ತೇನೆ ಡಿಯರ್" ಎಂದು ನಾಗರಾಜನಿಗೆ ಹೇಳಿ ತನ್ನ ಬಾಬ್ ಮಾಡಿದ ಕೂದಲನ್ನು ಗಂಟನಂತೆ ಕಟ್ಟಿ, ಮೇಲೆ ಗುಲಾಬಿ ಹೂ ಮುಡಿದಳು

"ಹೇಗಿದೆ ರಾಜ್"

"ಕೇಳಬೇಕೇ" ಆನಂದಿತನಾಗಿ ನಾಗರಾಜ ನುಡಿದ

ಮಣಿ ಇಬ್ಬರಿಗೂ ಕಾಫಿ ತಂದಿತ್ತಳು ತಂಗಿಗೆ ಸೂಚನೆ ಕೊಟ್ಟು ಮೇರಿ ಕಾರುಹತ್ತಿದಳು

ಮೇರಿಯ ಪಕ್ಕದಲ್ಲಿದ್ದ ನಾಗರಾಜನಿಗೆ ಸ್ವರ್ಗವೇ ಕರಗತವಾದಂತೆ ಭಾಸವಾಯಿತು

ಶ್ರೀರಂಗಪಟ್ಟಣದ ಸುಂದರ ವಾತಾವರಣದಲ್ಲಿ ಇಬ್ಬರೂ ತಮ್ಮನ್ನು ಬಿಟ್ಟು ಬೇರೊಂದು ಪ್ರಪಂಚವಿದೆಯೆಂಬುದನ್ನೇ ಮರೆತರು

ಗಂಟೆ ಒಂಬತ್ತು ಸಮೀಪಿಸಿದಾಗ ಮೇರಿ ಹೊರಡಲು ಆತುರ ತೋರಿಸ ಲಾರಂಭಿಸಿದಳು ಬಲವಂತ ಮಿತಿಮೀರಿದಾಗ ನಾಗರಾಜ ಮೈಸೂರಿನತ್ತ ಮನಸ್ಸು ತಿರುಗಿಸಿದ

ಕಾರನ್ನು ಸ್ವಲ್ಪದೂರ ಮೈಸೂರು ರೋಡಿನಲ್ಲಿ ಬಿಟ್ಟು ನಿಲ್ಲಿಸಿದ ಮೇರಿಗೆ ಭಯವಾಯಿತು

"ಕೆಟ್ಟುಹೋಯಿತೇ ರಾಜ್"

ನಾಗರಾಜ ಉತ್ತರ ಕೊಡಲಿಲ್ಲ ನಗುತ್ತಾ ಕಾರನ್ನು ಹಿಂದಕ್ಕೆ ತಿರುಗಿಸಿಕೊಂಡು ಓಡಿಸಲಾರಂಭಿಸಿದ

"ಪುನಃ ಶ್ರೀರಂಗಪಟ್ಟಣಕ್ಕೆ ಹೋಗುತ್ತಿರುವಿರಾ ರಾಜ್?"

ನಾಗರಾಜ ಮೌನದಿಂದಲೇ ಕಾರನ್ನು ವೇಗವಾಗಿ ಓಡಿಸಿದ ಮೇರಿಗೆ ತಡೆಯಲಾಗಲಿಲ್ಲ ಅವನ ಕೈ ಜಗ್ಗಿಸುತ್ತಾ, ಕೇಳಿದಳು

"ನಿಮಗೇನಾಗಿದೆ ರಾಜ್?"

ನಾಗರಾಜ ಕೂಡಲೆ ಬ್ರೇಕ್ ಹಾಕಿ, ಹೇಳಿದ

"ಇಬ್ಬರೂ ಹರೋಹರ ಅನ್ನುತ್ತಿದ್ದೆವಲ್ಲಾ"

"ನೀವು ಹೀಗೆ ಓಡಿಸಿದರೆ ನನಗೆ ಭಯವಾಗುತ್ತದೆ ಯಾಕೆ ಈ ದಾರಿ ಹಿಡಿದಿರಿ?"

"ಈಗ ನಾವು ಮೈಸೂರಿಗೆ ಹೋಗುತ್ತಿಲ್ಲ-"

"ಮತ್ತೆಲ್ಲಿಗೆ?"

"ಬೆಂಗಳೂರು"

"ಹಾಂ – ನನ್ನ ಕಾಲೇಜು"

"ಎಲ್ಲೂ ಹೋಗುವುದಿಲ್ಲ ಸುಮ್ಮನಿರು"

"ಮೊದಲೇ ತಿಳಿಸಿದ್ದರೆ ಬಟ್ಟೆ ಬರೆ ತರಬಹುದಾಗಿತ್ತು"

"ಬೆಂಗಳೂರಿನಲ್ಲಿ ಅಂಗಡಿಗಳಿಗೆ ಕೊರತೆಯೇ?" ನಾಗರಾಜ ಸಮಾಧಾನ ಹೇಳಿದ

ಮೇರಿಗೆ ಅತ್ಯಾನಂದವಾಗಿದ್ದಿತು

ನಾಗರಾಜನನ್ನಪ್ಪುತ್ತಾ, "ನೀವೆಷ್ಟು ಒಳ್ಳೆಯವರು ರಾಜ್" ಎಂದು ಹೇಳಿದಳು.

೩೬

ಸುಮಿತ್ರೆ ದಿನವೂ ಗಂಡನಿಗಾಗಿ ನಿರೀಕ್ಷಿಸುತ್ತಿದ್ದಳು. ಮಾಡಿದ ಅಡಿಗೆ ಹಾಗೇ ಉಳಿಯುತ್ತಿದ್ದಿತು. ಮರುದಿನ ಅದನ್ನೊಯ್ಯುವಾಗ ಲಕ್ಕವ್ವ ಕಣ್ಣೀರು ಹಾಕಿ,

"ಅವ್ವಾ ಯಾರು ನೋಡ್ಬಹುದು ನಿಮ್ಮ ದುಃಖಾನ. ಇಂಗೆ ಉಪ್ವಾಸಮಾಡಿ ಕಷ್ಟ ಅಗ್ತಾದೀರಲ್ಲ – ಆಯಪ್ಪಾ ಮಹಾಪಾಪ್ತಿರ್ತಾನೆ'

ಸುಮಿತ್ರೆ ಮಾತನ್ನೇ ಆಡುತ್ತಿರಲಿಲ್ಲ. ಒಳ್ಳೆಯ ಮಾತಿಗೆ ಒಗ್ಗುವುದಿಲ್ಲವೆಂದು ತಿಳಿದ ಲಕ್ಕವ್ವ ಜೋರು ಮಾಡುತ್ತಿದ್ದಳು,

"ನಿಮ್ಮ ಪಾಡು ನೀ' ನೋಡ್ಕೋಳ್ರವ್ವ. ಇಂಗಿದ್ರೆ ಯಾವ ದೇವ್ರಿಗೆ ಪ್ರೀತಿ?"

ಸುಮಿತ್ರೆ ಅಚಲಳಾಗುತ್ತಿದ್ದಳು.

"ಒಗ್ಲಿ ಬೇಯ್ಸಿಬೇಯ್ಸಿ ನನಗ್ಯಾಕಾ ಸುರೀತಿರಿ? ಒಲೆ ಅಚ್ಚೋದನ್ನೆ ಬುಟ್ಬಿಡಿ."

"ನಿನ್ನ ಮಕ್ಕಳಿಗೆ ಸಂತೋಷವಾಗಿ ಬಡಿಸು ಲಕ್ಕಿ."

"ಏಯ್ – ಭೋ ಚಂದಾಕೆ ಏಳ್ತಿದೀರಿ ಕಣ್ರವ್ವಾ – ನೀವಿಲ್ಲಿ ಉಪಾಸ ಸಾಯ್ತಿದ್ರೆ ನಾವಲ್ಲಿ ನಿಮ್ಮನ್ನ ಉಣ್ಣೋದಾ?"

ಲಕ್ಕವ್ವ ಅಂದಿನಿಂದ ಅನ್ನ ತೆಗೆದುಕೊಂಡು ಹೋಗುವುದನ್ನು ಬಿಟ್ಟು ಬಿಟ್ಟಳು.

ಅದನ್ನು ಕಂಡು ಸುಮಿತ್ರೆ ಒಲೆಯನ್ನೇ ಹಚ್ಚುತ್ತಿರಲಿಲ್ಲ.

ಒಡತಿಯನ್ನು ನೋಡಿದ ಲಕ್ಕವ್ವನಿಗೆ ಕರುಳು ಬಾಯಿಗೆ ಬರುತ್ತಿದ್ದಿತು.

ಮಗಳನ್ನು ನೋಡಿ ಹೋಗಲು ಒಂದು ದಿನ ಬೆಳಗ್ಗೆ ನರಸಿಂಹಯ್ಯ ಬಂದ ಬಹಳ ಕಾಲದ ಮೇಲೆ ತಂದೆಯನ್ನು ನೋಡಿದ ಸುಮಿತ್ರೆಗೆ ಯಾವ ರೀತಿ ಸ್ವಾಗತಿಸಬೇಕೆಂಬುದೂ ತಿಳಿಯಲಿಲ್ಲ

ಭ್ರಾಂತಳಾಗಿ ನಿಂತಿದ್ದ ಮಗಳನ್ನು ನರಸಿಂಹಯ್ಯ ಕೇಳಿದ,

"ಹುಷಾರಾಗಿರುವೆಯಾ ಸುಮಿತ್ರಾ ?"

ಕಣ್ಣಿನ ಹನಿಗಳನ್ನೊರೆಸಿಕೊಳ್ಳುತ್ತಾ ಸುಮಿತ್ರೆ ಹೇಳಲು ಪ್ರಯತ್ನಿಸಿದಳು ಆದರೆ ಗಂಟಲು ಗದ್ಗದವಾಗಿದ್ದಿತು

"ಅಳುವೆಯಾ ಸುಮಿತ್ರಾ"

"ಇಲ್ಲ ಅಣ್ಣಾ"

'ನಾನು ಬಂದರೆ ಅಳುತ್ತಾರೆಯೇನೇ ?"

"ಅಳುತ್ತಿಲ್ಲಣ್ಣಾ ಸಂತೋಷದಿಂದ ಹಾಗಾಯಿತು"

"ಹುಚ್ಚು ಹುಡುಗಿ" ನರಸಿಂಹಯ್ಯ ಪ್ರೀತಿಯಿಂದ ಮಗಳನ್ನು ಬಯ್ದ

ಸ್ವಲ್ಪ ಸಮಾಧಾನವಾದ ಮೇಲೆ ಸುಮಿತ್ರೆ ತೌರುಮನೆಯ ಸಂಗತಿಗಳನ್ನು ವಿಚಾರಿಸಿಕೊಂಡಳು

"ಸ್ವರ್ಣ ಹುಷಾರಾಗಿರುವಳೇ ಅಣ್ಣಾ ?"

"ಅವಳಿಗೆ ದಿನವೂ ನಿನ್ನದೇ ಧ್ಯಾನ ತಾನೂ ಮೈಸೂರಿಗೆ ಬಂದು ಓದುವೆನೆಂದು ಹಟ ಹಿಡಿದಿದ್ದಳು"

"ಚಿಕ್ಕಮ್ಮ ಚೆನ್ನಾಗಿರುವಳೇ ?"

"ಎಲ್ಲಮ್ಮ ಮೂರು ದಿನಕ್ಕೂ ಅವಳಿಗೆ ಆರೋಗ್ಯ ಕೆಡುತ್ತದೆ ಪುನಃ ನಾಲ್ಕು ತಿಂಗಳಾಗಿದೆ ಈ ಬಾರಿ ನೋಡಬೇಕು ದೇವರಿಚ್ಛೆ ಹೇಗಿದೆಯೋ"

"ಅಜ್ಜಿ ಅಲ್ಲೇ ಇರುವರೇ ?"

"ಹೂಂ ಒಂದು ತಿಂಗಳಾಯಿತು ನಿನ್ನನ್ನು ನೋಡಬೇಕೆಂದರು ನನ್ನ ಜೊತೆ ಬರುವೆಯಾ ಸುಮಿತ್ರಾ?" ನರಸಿಂಹಯ್ಯ ಮಗಳನ್ನು ಕೇಳಿದ

"ಇವರೂ ಊರಲ್ಲಿಲ್ಲ"

"ಎಲ್ಲಿಗೆ ಹೋಗಿರುವರಮ್ಮಾ? ಎಂದು ಬರುತ್ತಾರೆ ?"

ತಂದೆಯ ಪ್ರಶ್ನೆಗೆ ಏನುತ್ತರ ಕೊಡಬೇಕೆಂದು ಸುಮಿತ್ರೆಗೆ ಕೂಡಲೇ

ಹೊಳೆಯಲಿಲ್ಲ ನಿಜ ಸಂಗತಿ ತಿಳಿಸಿದರೆ ತಂದೆಗೆ ವ್ಯಸನವಾಗುವುದು – ಈ ಸಮಯದಲ್ಲಿ ಸುಳ್ಳೇ ಸರಿಯೆಂದು ಸುಮಿತ್ರೆ ನಿರ್ಧರಿಸಿದಳು

"ಯಾವುದೋ ಕೆಲಸದ ಮೇಲೆ ಬೆಂಗಳೂರಿಗೆ ಹೋದರಣ್ಣಾ ಬರುವುದು ಇನ್ನೂ ಒಂದು ವಾರವಾಗಬಹುದು"

ಸುಮಿತ್ರೆಯ ಸುಳ್ಳು ಅವಳನ್ನೇ ಸೆರೆ ಹಿಡಿದಿತ್ತು

"ಬೆಂಗಳೂರಿಗೆ ಬಂದಿದ್ದರೆ ನಿನ್ನನ್ನೂ ಕರೆತರಬಹುದಿತ್ತಲ್ಲಾ ನಮ್ಮ ಮನೆಗೂ ಬಂದಿಲ್ಲ"

"ಅವರು ಹೊಟೆಲಿನಲ್ಲಿಳಿದುಕೊಂಡಿರಬಹುದು"

"ಮನೆಯಿದ್ದರೂ ಹೋಟಲಿಗೆ ಹೋಗಬೇಕೆ? ನಿನ್ನ ಗಂಡನ ಸ್ವಭಾವ ನನಗರ್ಥವೇ ಆಗುವುದಿಲ್ಲಮ್ಮಾ"

ಸುಮಿತ್ರೆ ಉತ್ತರಕೊಡಲಿಲ್ಲ

"ನೀನಿಲ್ಲಿ ಸುಖವಾಗಿರುವೆಯಾ ಸುಮಿತ್ರಾ"

ಸುಮಿತ್ರೆ ನಕ್ಕು ಉತ್ತರ ಸೂಚಿಸಿದಳು ನರಸಿಂಹಯ್ಯ ತೃಪ್ತನಾದ

"ಬಹಳ ಬಡವಾಗಿರುವೆ ಸುಮಿತ್ರ – ಹುಷಾರಿಲ್ಲವೇ?"

"ಹೂಂ. ಚಳಿಜ್ವರ ಬರುತ್ತಿದ್ದಿತ ಈಗ ವಾಸಿ" ಸುಮಿತ್ರೆ ಮತ್ತೊಂದು ಸುಳ್ಳು ಪೋಣಿಸಿದಳು

"ಸರಿಯಾಗಿ ಔಷಧ ತೆಗೆದುಕೊಳ್ಳಮ್ಮಾ"

"ಇವರಿಗೆ ಬೇಕಾದ ಡಾಕ್ಟರೊಬ್ಬರಿದ್ದಾರಣ್ಣಾ ಬಹಳ ಚೆನ್ನಾಗಿ ಔಷಧ ಕೊಡುತ್ತಾರೆ ನಾನೂ ಅಲ್ಲಿಯೇ ತೆಗೆದುಕೊಳ್ಳುತ್ತಿದ್ದೇನೆ"

ಸುಮಿತ್ರೆಯ ಮಾತನ್ನು ನರಸಿಂಹಯ್ಯ ನಂಬಿದ

ನರಸಿಂಹಯ್ಯ ಕೈಚೀಲವನ್ನು ಮಗಳಿಗೆ ಕೊಡುತ್ತಾ ಹೇಳಿದ

"ನಿಮ್ಮಜ್ಜಿ ಸ್ವಲ್ಪ ತಿಂಡಿಮಾಡಿ ಕೊಟ್ಟಿರುವರು ತೆಗೆದುಕೊಳ್ಳಮ್ಮಾ"

ಸುಮಿತ್ರ ಚೀಲ ತೆಗೆದುಕೊಂಡು, "ಬಂದೆ ಅಣ್ಣಾ ಕುಳಿತಿರಿ" ಎಂದು ಒಳಗೆ ಹೋದಳು

ಸುಮಿತ್ರೆಗೆ ಯಾವ ರೀತಿ ತಂದೆಯನ್ನು ಪಚರಿಸಬೇಕೆಂಬುದೂ ತಿಳಿಯಲಿಲ್ಲ ಒಂದೇ ಉಸಿರಿನಲ್ಲಿ ಒಲೆ ಹಚ್ಚಿ ಕಾಫಿಗೆ ನೀರಿಟ್ಟಳು

ಡಬ್ಬಗಳನ್ನು ತೆರೆದು ನೋಡಿದರೆ ದಿನವೂ ಖಾಲಿಯಾಗಿದ್ದಾಗ ಸಾಮಾನೇ ತರಿಸಿಲ್ಲವೆಂಬುದು ನೆನಪಾಯಿತು

ಸುಮಿತ್ರೆ ಅಡಿಗೆ ಮನೆಯ ಕಿಟಕಿಯಿಂದಲೇ ಕೂಗಿದಳು,

"ಲಕ್ಕೀ ಲಕ್ಕೀ "

ಬಟ್ಟೆ ಹಿಂಡುತ್ತಿದ್ದ ಲಕ್ಕವ್ವ ಓಡಿಬಂದು, ಸಂತೋಷದಿಂದ ಹೇಳಿದಳು.

'ಬುದ್ಯೋರು ಬಂದ್ರುಲ್ವಾ ನಾಕುಜಿನ ಉಳಿಸಿಕ್ಕೊಂಡು ಅಳಿಯಂದಿರಿಗೆ ಒಸಿ ಬುದ್ಧಿ ಏಳ್ಸ್ರವ್ವಾ "

"ಲಕ್ಕಿ – ನಿನ್ನ ಹತ್ರಾ ದುಡ್ಡಿದಯೇನೇ ?"

"ಏಸು ಬೇಕಾಗಿತ್ರವ್ವಾ ?" ಎನ್ನುತ್ತಾ ಲಕ್ಕವ್ವ ಸೊಂಟಕ್ಕೆ ಸಿಕ್ಕಿಸಿದ್ದ ಎಲಡಿಕೆ ಚೀಲ ಹೊರತೆಗೆದು ಅಡಿಕೆಯ ಜೊತೆಯಿಟ್ಟಿದ್ದ ದುಡ್ಡು ಎಣಿಸಿದಳು

"ಎಂಟಾಣೆ ಐತ್ರವ್ವಾ ಬೇಕಾ ?"

"ಬೇಗ ಸ್ವಲ್ಪ ಕಾಫಿ ಪುಡಿ ತಂದುಕೊಡೇ – ಯಜಮಾನರು ಬಂದ ಮೇಲೆ ಕೊಡಿಸುತ್ತೇನೆ "

"ಏಯ್ – ಇರಲಿ ಸುಮ್ಕಿರವ್ವಾ "

ಲಕ್ಕವ್ವ ಗಡಿಬಿಡಿಯಿಂದ ಓಡಿಹೋಗಿ ಕಾಫಿಪುಡಿ ತಂದಿತ್ತು, ಉಳಿದ ಚಿಲ್ಲರೆಯನ್ನು ಸುಮಿತ್ರೆಯ ಕೈಗೇ ಹಾಕಿದಳು ಸುಮಿತ್ರೆ ಹಿಂತಿರುಗಿಸ ಹೋದಾಗ,

"ಮಡಿಕ್ಕೊಂಡಿರವ್ವಾ – ಸಮಯಾಂವ್ರೆ ಇರಲಿ " ಎಂದು ಹೇಳಿ ಲಕ್ಕವ್ವ ತನ್ನ ಕೆಲಸಕ್ಕೆ ಹೋದಳು

ರಂಗಮ್ಮ ಕಳುಹಿಸಿದ ತಿಂಡಿಯನ್ನೇ ತಟ್ಟೆಯಲ್ಲಿರಿಸಿ, ಕಾಫಿ ಕೊಟ್ಟು ಸುಮಿತ್ರೆ ತಂದೆಯನ್ನು ಪಚರಿಸಿದಳು

ಮನೆಯ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ ನರಸಿಂಹಯ್ಯ ಹೇಳಿದ

"ನಾನು ಮಧ್ಯಾಹ್ನ ಹೊರಟುಬಿಡುತ್ತೇನೆ ಸುಮಿತ್ರಾ ನಿನ್ನ ಗಂಡ ಬಂದರೆ ತಿಳಿಸಿಬಿಡು "

"ಯಾಕಣ್ಣ – ಇವರೂ ಬರಬಹುದು – ನೋಡಿಕೊಂಡೇ ಹೋಗುವೆಯಂತೆ"

"ರಜವೇ ಇಲ್ಲ ಸುಮಿತ್ರ – ಮತ್ತೊಮ್ಮೆ ಬರುತ್ತೇನೆ"

ಸುಮಿತ್ರೆ ಹೆಚ್ಚು ಬಲವಂತ ಮಾಡಲಿಲ್ಲ ಇದ್ದುದನ್ನೇ ಹವಣಿಸಿ ಅಡಿಗೆ ಮಾಡಿ ತಂದೆಗೆ ಬಡಿಸಿದಳು

ತಂದೆಯ ಬಲವಂತಕ್ಕೆ ಸುಮಿತ್ರೆ ಊಟದ ಶಾಸ್ತ್ರ ಮಾಡಿದಳು

ನರಸಿಂಹಯ್ಯ ಮಧ್ಯಾಹ್ನದ ರೈಲಿಗೆ ಹೊರಟ ತಂದೆಯನ್ನು ನಾಲ್ಕು ದಿನ ಉಳಿಸಿಕೊಳ್ಳುವ ಯೋಗ್ಯತೆಯೂ ತನಗಿಲ್ಲವಲ್ಲಾ ಎಂದು ಸುಮಿತ್ರ ದುಃಖಿಸಿದಳು ತಾನು ಹೊಲಿಸಿಕೊಳ್ಳದೇ ಇಟ್ಟಿದ್ದ ರವಿಕೆಯ ಒಟ್ಟೆಯನ್ನು ತಂದೆಯ ಕೈಗಿತ್ತು,

"ಸ್ವರ್ಣಾಸಿಗೆ ಕೊಡಿ ಅಣ್ಣಾ ನಾನು ಬಹಳ ಕೇಳಿದೆನೆಂದು ಹೇಳಿ. ರಜೆಯಲ್ಲಿ ಒಮ್ಮೆ ಬಂದು ನಾಲ್ಕುದಿನ ಇರಲಿ" ಎಂದಳು

"ಆಗಲಮ್ಮಾ ಕಾಗದ ಬರೆಯುತ್ತಿರು. ಈಗ ಮಾಡಿದಂತೇ ಪುನಃ ಮಾಡಬೇಡ ನಿನ್ನ ಯೋಗಕ್ಷೇಮ ತಿಳಿಯದೇ ನಮಗೆ ಯೋಚನೆಯಾಗುತ್ತದೆ"

ಹೊರಗೇ ವಿಷಣ್ಣವದನಳಾಗಿ ನಿಂತಿದ್ದ ಸುಮಿತ್ರೆಯನ್ನು ಕಂಡು ಲಕ್ಕವ್ವ ಕೇಳಿದಳು

"ಅದ್ಯಾಕ್ರವ್ವ ಬುದ್ಯೋರು ಒಂಟಬಿಟ್ರು?"

ಸುಮಿತ್ರೆಗೆ ದುಃಖ ಉಕ್ಕಿಬಂತು

"ಬುದ್ಯೋರ ಕೂಡ ಎಳ್ಬೇಕಾಗಿತ್ರವ್ವ ಇಸ್ಯಾನ"

ಸುಮಿತ್ರೆ ಸ್ವಲ್ಪ ಸಮಾಧಾನ ತಂದುಕೊಂಡು ಹೇಳಿದಳು

"ಮಗಳೇನೋ ಗಂಡನ ಮನೆಯಲ್ಲಿ ಸುಖವಾಗಿರುವಳೆಂದು ಅವರು ಬಂದರೆ ನಾನ್ಯಾಕೆ ಕಾಷ್ಟಾವ್ಯಸನ ಹಚ್ಚಲಿ?"

"ನಿಮ್ಮಾತು ನಾನೊಪ್ಪಾಕ್ಕಿಲ್ರವ್ವಾ" ಲಕ್ಕವ್ವ ಅಸಮಾಧಾನದಿಂದ ಸುಮ್ಮನಾದಳು

## ೪೨

ನಾಗರಾಜ ಮೇರಿಯ ಸಹವಾಸದಲ್ಲಿ ಹತ್ತು ದಿನಗಳನ್ನು ಬೆಂಗಳೂರಿನಲ್ಲಿ ಸಂತೋಷವಾಗಿ ಕಳೆದು ಬಂದ

ನಾಗರಾಜ ಮನೆ ಸೇರಿದವನೇ ನೇರವಾಗಿ ರೂಮಿಗೆ ಹೋದ ಅಲ್ಲೇ ಸ್ವಲ್ಪಹೊತ್ತು ಕುಳಿತು ಸುಮಿತ್ರೆಗಾಗಿ ನಿರೀಕ್ಷಿಸಿದ ಎಷ್ಟು ಹೊತ್ತಾದರೂ ಬಾರದಿದ್ದುದನ್ನು ಕಂಡಮೇಲೆ ಟವಲನ್ನು ಹೆಗಲಮೇಲೆ ಹಾಕಿಕೊಂಡು ಸ್ನಾನಗೃಹದತ್ತ ಹೊರಟ ಅಲ್ಲಿ ಒಲೆಯನ್ನೂ ಹಚ್ಚದಿದ್ದುದನ್ನು ಕಂಡಮೇಲೆ ಕೋಪದಿಂದ ಕೂಗಾಡಿದ

"ನೀನೇನು ಹೆಂಗಸೇನೇ ?"

ಸುಮಿತ್ರೆ ಕಿವುಡಳಂತೆ ಕುಳಿತಿದ್ದಳು

"ದಿನವೂ ಮನೆಯಲ್ಲಿ ಕುಳಿತೇನು ಮಾಡುತ್ತೀ ? ಕೆಲಸವನ್ನೂ ಮಾಡಬಾರದೇನೇ ?"

"ಮನೆಯಲ್ಲಿ ಸೌದೆಯಿಲ್ಲ" ಸುಮಿತ್ರೆ ಮೆಲ್ಲನೆ ಹೇಳಿದಳು

"ದಿನವೂ 'ಇಲ್ಲ – ಇಲ್ಲ' ಇದೇ ರಾಮಾಯಣ" ಎಂದು ತನ್ನಷ್ಟಕ್ಕೆ ಗೊಣಗಿಕೊಂಡು ರೂಮಿಗೆ ಹೋದ.

ಸುಮಿತ್ರೆ ಲಕ್ಕವ್ವನ ಕೈಲಿ ಅರ್ಧಪಾವು ಹಾಲು ತರಿಸಿ ಗಂಡನಿಗೆ ಕೊಡಲು ಹೋದಳು ನಾಗರಾಜ ಅವಳನ್ನೇ ದುರದುರ ನೋಡುತ್ತಾ ಕೂಗಿದ. "ಅಲ್ಲಿ ಬಡಿದು ಹೋಗಾಚೆ."

ಪತಿಯ ಆಜ್ಞೆಯನ್ನು ಈ ಬಾರಿ ಸುಮಿತ್ರೆ ಪಾಲಿಸಲಿಲ್ಲ. ನಿಂತೇ ಇದ್ದಳು. ನಾಗರಾಜನ ಕೋಪವೂ ಮಿತಿಮೀರಿತು.

"ಏನದು ಬೊಗಳೀ ?"

"ಬೆಂಗಳೂರಿನಿಂದ ತಂದೆ ಬಂದಿದ್ದರು" ಸುಮಿತ್ರೆ ಹೆದರಿಯೇ ಪ್ರಾರಂಭಿಸಿದಳು

"ನೀನೂ ಅವರ ಜತೆ ತೊಲಗಬೇಕಾಗಿತ್ತು"

ಸುಮಿತ್ರೆ ಗಂಡನ ಮಾತಿಗೆ ಉತ್ತರವೀಯಲಿಲ್ಲ

"ಇನ್ನೂ ಏಕೆ ನಿಂತಿರುವೆ – ಮುಗಿಯಿತೋ ಇಲ್ಲವೋ ನಿನ್ನ ಕರಟ ಪುರಾಣ"

ಹಾಲು ಹಾಗೆಯೇ ಉಳಿದಿತ್ತು ಸುಮಿತ್ರೆ ಇದನ್ನು ಗಮನಿಸಿ ಹೇಳಿದಳು

"ಹಾಲು ಕುಡಿಯಲೇ ಇಲ್ಲ"

"ನಿನ್ನ ತಲೆಯಮೇಲೇ ಸುರಿದುಕೋ" ನಾಗರಾಜ ಕಾರು ಸ್ಟಾರ್ಟ್ ಮಾಡಿದ

ಸುಮಿತ್ರೆ ನಿರುಪಾಯಳಾಗಿ ಹಿಂತಿರುಗಿದಳು. ಮೌನ ಮನೆಯನ್ನು ಶಾಂತವಾಗಿ ಆಳುತ್ತಿದ್ದಿತು

ಸೋಮಸುಂದರಂ ಹತ್ತಿರ ವ್ಯವಹಾರ ಇತ್ಯರ್ಥವಾದಮೇಲೆ ನಾಗರಾಜನ ಕಾರ್ಯಕ್ರಮಕ್ಕೆ ಯಾವ ನಿಯಮ ನಿಬಂಧನೆಯೂ ಇರಲಿಲ್ಲ ಹಿಡಿದ ಕೆಲಸಗಳನ್ನು ಅರ್ಧಕ್ಕೆ ಬಿಟ್ಟು ತನ್ನಿಷ್ಟಬಂದ ರೀತಿ ತಿರುಗುತ್ತಿದ್ದ ಬರಬೇಕಾದ ಎಷ್ಟೋ ಕಂಟ್ರಾಕ್ಟುಗಳೂ ತಪ್ಪಿಹೋಗುತ್ತಿದ್ದವು ಕೂಡಿಟ್ಟ ಹಣ ಅವನ ದುಂದುಗಾರಿಕೆಯಿಂದ ಕ್ಷಯಿಸಲಾರಂಭಿಸಿತು ತೋರಿಕೆಗೆ ಸುಮಿತ್ರೆಯ ಕೈಗೆ ಹತ್ತೋ ಇಪ್ಪತ್ತೋ ಹಾಕಿ ಹೊರಟುಬಿಡುತ್ತಿದ್ದ ಇಲ್ಲವಾದರೆ ತಿಂಗಳುಗಟ್ಟಳೆಯಾದರೂ ತಿರುಗಿಯೂ ನೋಡುತ್ತಿರಲಿಲ್ಲ

ನಾಗರಾಜನಿಗೆ ಮೇರಿಯನ್ನು ಕಾಯುವುದೇ ಒಂದು ದೊಡ್ಡ ಕೆಲಸ ವಾಯಿತು ಒಂದು ಕ್ಷಣ ಅಗಲಿದರೆ ಮೇರಿ ಮತ್ತೆಲ್ಲಿ ಪರರ ಪಾಲಾಗು ವಳೋ ಎಂದು ಯೋಚಿಸಿ ಒಂದರೆಘಳಿಗೆಯೂ ಅಗಲಲಾರದಾದ ಅವಳ ಕೋರಿಕೆಗಳನ್ನು ಪೂರಯಿಸುವುದರಲ್ಲೇ ನಾಗರಾಜನ ಹೊತ್ತೆಲ್ಲವೂ ವಿನಿಯೋಗವಾಗುತ್ತಿದ್ದಿತು

## ೩೮

ಒಂದು ದಿನ ಇದ್ದಕ್ಕಿದ್ದಂತೆ ಮನೆಗೆ ಬಂದ ಮಂಜುಳೆಯನ್ನು ನೋಡಿ ಸುಮಿತ್ರೆ ಆಶ್ಚರ್ಯಪಟ್ಟಳು. ಮಂಜುಳಾ ತಾನು ಎಂ.ಎ.ಗೆ ಓದಲು ಮೈಸೂರಿಗೆ ಬಂದಿರುವ ವಿಷಯ ತಿಳಿಸಿದ ಮೇಲಂತೂ ಸುಮಿತ್ರೆಯ ಆನಂದಕ್ಕೆ ಪಾರವೇ ಇರಲಿಲ್ಲ.

ಅದೇ ದಿನ ಅವಳಿಗೆ ಇನ್ನೂ ಒಂದು ಸಂತೋಷ ಕಾದಿತ್ತು.

ಸುಮಿತ್ರೆ ಒಡೆದ ಕಾಗದವನ್ನೇ ಪುನಃ ಪುನಃ ಓದಿದಳು. ಅವಳ ಮೈ ಮನಸ್ಸೆರಡೂ ಆನಂದದಿಂದ ಉಬ್ಬಿತ್ತು. ಆನಂದಬಾಷ್ಪಗಳನ್ನೊರಸಿಕೊಂಡು ಮತ್ತೆ ಮತ್ತೆ ಓದುವ ಪ್ರಯತ್ನ ಮಾಡುತ್ತಿದ್ದಳು. ಸುಮಿತ್ರೆಯ ಸ್ಥಿತಿಯನ್ನು ದಂಗುಬಡಿದವಳಂತೆ ನಿಂತು ಲಕ್ಕವ್ವ ನೋಡುತ್ತಿದ್ದಳು.

"ಕಾಗದ ಭೋ ಸೀಯಾಗೈತೆ. ಅಲ್ಲವೇನ್ರವ್ವಾ?"

ಲಕ್ಕವ್ವನ ಮಾತಿಗೆ ಸುಮಿತ್ರೆ ನಗಹತ್ತಿದಳು.

"ನನಗೊಬ್ಬ ತಮ್ಮ ಹುಟ್ಟಿರುವನು ಲಕ್ಕೀ."

"ಅಂಗಂತ ಬರೆದವ್ರಾ? ನಾಮಕರಣಕ್ಕೆ ಓಯ್ತೀರಾ?"

"ಇವರನ್ನ ಕೇಳಬೇಕಲ್ಲಾ ಲಕ್ಕಿ. ಒಪ್ಪಿದರೆ ತಾನೇ ಹೋಗುವುದು."

ಅವಳ ಅಸಹಾಯಕ ಸ್ಥಿತಿಯನ್ನರಿತಿದ್ದ ಲಕ್ಕಿ ತಲೆಯಲ್ಲಾಡಿಸಿದಳು.

ಸುಮಿತ್ರೆಯ ಆಸೆಗಳು ತಣ್ಣಗಾಗುವ ಸ್ಥಿತಿಯಲ್ಲಿದ್ದಾಗ ನಾಗರಾಜ ಬಂದ. ಗಂಡ ಮನೆಗೆ ಬಂದುದನ್ನು ಕಂಡು ಸುಮಿತ್ರೆ ಹಕ್ಕಿಯಂತೆ ಹಾರಾಡಿದಳು. ತನ್ನ ಭಾಗದಲ್ಲಿ ದೇವರಿದ್ದಾನೆ – ಎಂದು ಯೋಚಿಸಿಕೊಂಡು ತೃಪ್ತಿಪಟ್ಟಳು.

ಬಟ್ಟೆ ಬದಲಾಯಿಸುತ್ತಿದ್ದ ನಾಗರಾಜ ರೂಮಿನ ಬಾಗಿಲ ಬಳಿ ಬಂದು ಸುಮಿತ್ರೆ ನಿಂತಳು.

ಎಷ್ಟೋ ಹೊತ್ತಿನ ಬಳಿಕ ನಾಗರಾಜ ಸುಮಿತ್ರೆಯ ಕಡೆ ತಿರುಗಿ ಪ್ರಶ್ನಾರ್ಥಕ ಚಿಹ್ನೆಯಿಂದ ನೋಡಿದ

ಸುಮಿತ್ರೆ ಮೆಲ್ಲನೆ ಬಳಿಯಲ್ಲಿದ್ದ ಕಾಗದ ನೀಡಿದಳು

ನಾಗರಾಜ ಕಾಗದವನ್ನು ಸ್ಥೂಲವಾಗಿ ಓದಿ ನೋಡಿದ

"ನಾನೇನು ಮಾಡಬೇಕು ?"

" "

"ಸರಿ ಕಾಗದ ತೋರಿಸಿಯಾಯಿತಲ್ಲಾ "

ಸುಮಿತ್ರೆ ಚೇತರಿಸಿಕೊಂಡು ಕೇಳಿದಳು

"ನಾವಿಬ್ಬರೂ ಹೊರಡಲೇಬೇಕೂಂತ್ರೆ ಇಲ್ಲದಿದ್ದರೆ ತಂದೆಯ ಮನಸ್ಸಿಗೆ ಖೇದವೆನಿಸುತ್ತದ "

" "

"ಮದುವೆಯಾದಮೇಲೆ ನೀವೊಂದು ಬಾರಿಯೂ ಹೋಗಿಲ್ಲ ಈಗಲೂ ಹೋಗದಿದ್ದರೆ ಸುಮ್ಮನೆ ನಿಷ್ಠುರ ಕಟ್ಟಿಕೊಳ್ಳುವುದಾಗುತ್ತದೆ "

"ಸರಿ ನೀನು ಬೇಕಾದರ ಹೂರಡು "

"ನೀವು ?"

"ನಾನು ಬರಲಾರೆ ನನಗೆ ಕೈತುಂಬಾ ಕೆಲಸಗಳಿದೆ "

ಗಂಡನಿಗೆ ಇಷ್ಟಾದರೂ ಒಳ್ಳೆಯ ಬುದ್ಧಿ ಬಂದಿದೆಯಲ್ಲಾ ಎಂದು ಸುಮಿತ್ರೆ ಸಂತೋಷಪಟ್ಟುಕೊಂಡು

"ಮಗುವಿಗೇನಾದರೂ ಓದಿಸಬೇಕು ಅಪರೂಪದ ಮಗು "

"ನಿನ್ನಿಷ್ಟ ಬಂದಂತೆ ಮಾಡಿಕೋ ಹೋಗು "

ನಾಗರಾಜ ಹತ್ತರ ಐದು ನೋಟುಗಳನ್ನೆಣಿಸಿ ಸುಮಿತ್ರೆಗಿತ್ತ

ಇನ್ನು ಮಾತನಾಡಿ ಪ್ರಯೋಜನವಿಲ್ಲವೆಂದು ಸುಮಿತ್ರ ಸುಮ್ಮನಾದಳು ನಾಗರಾಜ ಹೊರಡಲು ಸಿದ್ಧನಾದ

ಸುಮಾರು ಹತ್ತುಗಂಟೆಯ ವೇಳೆಗೆ ಸುಮಿತ್ರೆ ಲಕ್ಕವ್ವನ ಜೊತೆ ಪೇಟೆಗೆ ಹೋಗಿ ಮಗುವಿಗೆ ಕೊಡಬೇಕಾದ ಉಂಗುರ, ಚಿಕ್ಕಮ್ಮ ಮತ್ತು ಸ್ವರ್ಣನಿಗೆ ಕಣ ಕೊಂಡುಕೊಂಡಳು. ತಂದೆಗೆ ಏನು ಕೊಟ್ಟರೆ ಪ್ರಯೋಜನವಾಗುತ್ತದೆಂದು ಆಲೋಚಿಸಿ ಸೋತಳು. ಕೈಲಿದ್ದ ಹಣ ಕರಗುತ್ತಲಿತ್ತು.

ನಿರಾತೆಯಿಂದ ಸುಮ್ಮನಾದಳು ಮಾರ್ಕೆಟ್ಟಿನಲ್ಲಿ ಒಂದು ಬುಟ್ಟಿ ತರಕಾರಿ ಹಣ್ಣು, ಹೂವು, ವೀಳಯದೆಲೆ ಕೊಂಡಳು

ರೈಲು ಹೊತ್ತಿಗೆ ಸರಿಯಾಗಿ ಬಂದ ನಾಗರಾಜ, ಸುಮಿತ್ರೆಯನ್ನು ರೈಲಲ್ಲಿ ಕೂರಿಸಿ ಹೊರಗೆ ನಿಂತ

"ಬರುವಾಗ ಕಾಗದ ಹಾಕಿಸುತ್ತೀನೆ "

" "

ಜೇಸರ ಕಳೆಯುಲು ನಾಗರಾಜ ಸಿಗರೇಟ್ ಹತ್ತಿಸಿದ ಏನೂ ತೋರದೆ ಸುಮಿತ್ರೆ ಸುಮ್ಮನೆ ಕುಳಿತಳು

ರೈಲು ಕದಲಿದಾಗ ಸುಮಿತ್ರೆ ಮತ್ತೊಮ್ಮೆ 'ಬರುತ್ತೀನೆ' ಎಂದು ಗಂಡನಿಗೆ ಹೇಳಿದಳು ನಾಗರಾಜ ತಲೆಯಲ್ಲಾಡಿಸಿದ

ಅಳಿಯನ ತಂತಿಯಂತೆ ನರಸಿಂಹಯ್ಯ ತಾನೇ ಸ್ಟೇಷನ್‌ಗೆ ಬಂದು ಮಗಳನ್ನು ಎದುರುಗೊಂಡು, ಬಸ್ ಸ್ಟ್ಯಾಂಡ್ ಕಡೆ ಕರದುಕೊಂಡು ಹೋಗುತ್ತಾ,

"ನಿಮ್ಮ ಯಜಮಾನರೂ ಬಂದಿದ್ದರೆ ಚೆನ್ನಾಗಿತ್ತು ಸುಮಿತ್ರ ನೀನು ಹೇಳಲಿಲ್ಲವೆಂದು ತೋರುತ್ತದೆ" ಎಂದ

• ತಂದೆ ಮಗಳಿಬ್ಬರೂ ಬಸ್‌ನಲ್ಲಿ ಕುಳಿತರು

ಮನೆಗೆ ಸುಮಿತ್ರ ಕಾಲಿಟ್ಟೊಡನೆ ಸ್ವರ್ಣ ಹೌಹಾರಿ ಅಕ್ಕನನ್ನಪ್ಪಿದಳು ಸುಮಿತ್ರೆ ಸ್ವರ್ಣನ ಕೈಹಿಡಿದು ಒಳಗೆ ಕರತಂದಳು ಶಬ್ದ ಕೇಳಿ ರಂಗಮ್ಮ ಹೊರಬಂದು, "ಬಾ ಸುಮಿತ್ರಾ" ಎಂದು ಹೃತ್ಪೂರ್ವಕವಾಗಿ ಸ್ವಾಗತಿಸಿದರು.

ಸುಮಿತ್ರೆ ಮನೆಯನ್ನು ಸ್ಥೂಲವಾಗಿ ಪರೀಕ್ಷಿಸಿ,

"ಹಾಸನದಿಂದ ಯಾರೂ ಬಂದಿಲ್ಲವೇ ?" ಎಂದು ಕೇಳಿದಳು

"ಕಾಗದ ಹಾಕಿಸಿದ್ದೀನೆ – ನಾಳೆ ಬರಬಹುದು – ಕೈಕಾಲು ತೊಳೆದು ಕೊಂಡು ಇಲ್ಲೀ ಬಾ ಸುಮಿತ್ರ" ರಂಗಮ್ಮ ಅಡಿಗೆಯಮನೆ ಹೊಕ್ಕರು

ಸುಮಿತ್ರ ಕಾಲೊರಸಿಕೊಳ್ಳುತ್ತಾ ಸ್ವರ್ಣನನ್ನು ವಿಚಾರಿಸಿದಳು

"ಬಾಣಂತಿ ರೂಮು ಯಾವುದೇ ?"

ಸ್ವರ್ಣ ರಾಜಮ್ಮನಿದ್ದ ಕೊಠಡಿಗೆ ಕರೆದೊಯ್ದಳು ರಾಜಮ್ಮ ಮಲಗಿದ್ದವಳು ಎದ್ದು ಕುಳಿತು, ಮಗಳನ್ನು ವಿಚಾರಿಸಿದಳು

"ಈಗ ಬಂದೆಯಾ" ನಿನ್ನ ಗಂಡ ಆರೋಗ್ಯವಾಗಿರುವರೇ? ಅವರೇಕೆ ಬರಲಿಲ್ಲ"

ಸುಮಿತ್ರೆ ಸದುತ್ತರದಿಂದ ಚಿಕ್ಕಮ್ಮನನ್ನು ಸಂತೈಸಿದಳು

"ಮಗು ತೋರಿಸುವುದಿಲ್ಲವೇ ಚಿಕ್ಕಮ್ಮ?"

"ಮಲಗಿದೆ ಬೆಳಗ್ಗೆ ನೀರು ಹಾಕಿಕೊಂಡ ಮೇಲೆ ನಿನ್ನ ಕೈಲೇ ಕೊಡುತ್ತೇನೆ ಸುಮ್ಮನಿರು" ಎಂದು ಸಮಾಧಾನ ಹೇಳಿದಳು

ಸುಮಿತ್ರೆ ದೂರದಿಂದಲೇ ತಮ್ಮನನ್ನು ನೋಡಿ ತೃಪ್ತಿಪಟ್ಟಳು

"ಏನು ಒಡವೆ ಮಾಡಿಸಿಕೊಂಡಿರುವ ಸುಮಿತ್ರಾ"

ಸ್ವರ್ಣ ಕೈಲಿದ್ದ ಒಳೆಗಳನ್ನು ತೋರಿಸುತ್ತಾ "ಚೆನ್ನಾಗಿಲ್ಲವೇ?" ಎಂದಳು

"ಹೊಸದೇ?"

"ಹೌದು ಚಿಕ್ಕಮ್ಮಾ"

ರಾಜಮ್ಮ ಮುಂದೆ ಮಾತಾಡಲಿಲ್ಲ

"ನೀನು ಮಲಗಿಕೋ ಚಿಕ್ಕಮ್ಮ ನಾನು ಅಜ್ಜಿಯ ಕೈಲಿ ಸ್ವಲ್ಪ ಹರಟೆ ಹೊಡೆಯಬೇಕು"

"ಹೋಗು ಸದ್ಯ ಅವಳಿಗಂತೂ ದಿನಬೆಳಗಾದರೆ ನಿನ್ನ ಮಾತೇ— ಎಂದಿಗೆ ನೋಡುವೆನೋ ಅಂತ ಜಪ ಮಾಡುತ್ತಿದ್ದಳು"

ಸುಮಿತ್ರೆ ನಗುತ್ತಾ ಸ್ವರ್ಣನ ಕೈಹಿಡಿದು ಹೋಗಿ ರಂಗಮ್ಮನ ಮುಂದೆ ಕುಳಿತಳು ಆದ್ಯಂತವಿಲ್ಲದೆ ಅಜ್ಜಿ ಮೊಮ್ಮಗಳ ಮಾತು ಸಾಗಿತು

ಸ್ವರ್ಣ ತಮ್ಮನನ್ನು ರವಿಯೆಂದು ಕರೆದಳು ಸ್ವರ್ಣನ ಆಯ್ಕೆ ಎಲ್ಲರಿಗೂ ಒಪ್ಪಿತು

ನಂಜೆ ಆರತಕ್ಷತೆಯೂ ಸಾಕಷ್ಟು ವಿಜೃಂಭಣೆಯಿಂದಲೇ ನಡೆಯಿತು ತನ್ನ ನಿತ್ಯದ ಜಂಜಡವನ್ನು ಮರೆತು ಸುಮಿತ್ರ ಸಡಗರದಿಂದ ಓಡಾಡಿದಳು

"ನಮ್ಮ ಸುಮಿತ್ರೆಯೊಬ್ಬಳಿದ್ದರೆ ನೋಡಿ ಹತ್ತು ಜನದ ಬಲ ಬಂದತಾಗುತ್ತದೆ" ಎಂದು ಹೇಳಿ ರಂಗಮ್ಮ ಸಂತೋಷಪಟ್ಟರು

ಸ್ವರ್ಣ ಮತ್ತು ರವಿಯ ಸಹವಾಸದಲ್ಲಿ ಸುಮಿತ್ರೆಗೆ ದಿನಗಳು ಕ್ಷಣದಂತೆ

ಉರುಳುತ್ತಿದ್ದವು ತೌರುಮನೆಯ ಹಿತವಾದ ವಾತಾವರಣದಲ್ಲಿ ಸುಮಿತ್ರೆ ಕೊಂಚ ಪ್ಯತುಂಜಿಸಿದಂತೆ ಕಂಡಳು

ಇದೇ ಮನಸ್ಸಿನ ಶಾಂತಿ ಸುಮಿತ್ರೆಗೆ ಬಹುದಿನಗಳು ಉಳಿಯಲಿಲ್ಲ ಒಂದು ವಾರದ ಮೇಲೆ ತಾನಾಗಿಯೇ ಹೊರಡುವ ಮಾತೆತ್ತಿದಳು

ವಾಸ್ತವವಾಗಿ ಸುಮಿತ್ರೆಯನ್ನು ಆವರಿಸಿದ್ದ ಭಯವೇ ಪರಿಹಾರವಾಗಿತ್ತು ಸುಮಿತ್ರೆಯ ವರಿಸಿದ್ದ ನಾಗರಾಜನಿಗೆ ಯಾವ ಪ್ರಯೋಜನವೂ ಇರಲಿಲ್ಲ ಕೇವಲ ಕಾಡಲೇ ಗಂಡ ಒಪ್ಪಿ ಕಳುಹಿಸಿಕೊಟ್ಟುದು ಸುಮಿತ್ರೆಯಲ್ಲಿ ಅನುಮಾನದ ಬೀಜವನ್ನು ನೆಟ್ಟಿದ್ದಿತು ಕಣ್ಮರೆಯಾಗಿದ್ದು ಕಾಣುವುದಕ್ಕಿಂತ ಅಲ್ಲಿಯೇ ಇದ್ದು ಕಷ್ಟವೋ ಸುಖವೋ ಹೊಡೆದಾಡುವುದು ಒಳಿತೆಂದು ಅವಳು ನಿರ್ಧರಿಸಿದಳು

ರಂಗಪ್ಪನವರನ್ನು ಒಪ್ಪಿಸಬೇಕಾದರೆ ಸುಮಿತ್ರೆಗೆ ಸಾಕುಸಾಕಾಗಿ ಹೋಯಿತು

ಗುರುವಾರದ ದಿನವೇ ವಿಶಾಲಾಕ್ಷಮ್ಮ ಊಟಕ್ಕೆ ಕರೆಕೊಟ್ಟು ಹೋದಳು ಸುಮಿತ್ರೆ, ಸ್ವರ್ಣ ಹೋಗುವುದೆಂದು ನಿರ್ಧಾರವಾಯಿತು

ಸಾಯಂಕಾಲ ಬರುವಾಗ ನಾಲ್ಕೈದು ಸೀರೆಗಳನ್ನು ತಂದು ನರಸಿಂಹಯ್ಯ ಮಗಳ ಕೈಗಿತ್ತ

"ನೋಡಮ್ಮ, ಇದರಲ್ಲಿ ನಿನಗೆ ಯಾವುದು ಬೇಕೋ ಅದನ್ನ ಆರಿಸು"

ಸುಮಿತ್ರೆ ಬಟ್ಟೆಯ ಗಂಟನ್ನು ಚಿಕ್ಕಮ್ಮನ ಮುಂದೆ ಬಿಚ್ಚಿ, ಅಜ್ಜಿಯನ್ನೂ ಕೂಗಿದಳು

"ಸೀರೆ ಉಡುವವಳು ನೀನು ನೀನೇ ಆರಿಸು" ರಾಜಮ್ಮ ಮಗಳ ಮೇಲೆ ಜವಾಬ್ದಾರಿ ಹೊರೆಸಿದಳು

ಸ್ವರ್ಣ ಭಾರಿಯ ಸೀರೆಯೊಂದನ್ನು ಹಿಡಿದು,

"ಇದು ಇರಲಿ ಸುಮಿತ್ರಾ"

ಬಹಳ ಬೆಲೆಯದಿರಬಹುದೆಂದೂಹಿಸಿ ರಾಜಮ್ಮ ಕೈಲಿ ಹಿಡಿದು ನೋಡಿದಳು

"ಇದು ಏನೂ ಚೆನ್ನಿಲ್ಲ ಹೊಸದರಲ್ಲಿ ಹೀಗಿರುತ್ತೆ ಅಷ್ಟೆ" ಎಂದು ಹೇಳಿ ಒಂದು ಪಕ್ಕಕ್ಕೆ ಸರಿಸಿದಳು.

ಬಹಳ ಹೊತ್ತು ಚರ್ಚೆಯಾದ ಮೇಲೆ ರಾಜಮ್ಮ ಒಂದು ಸೀರೆ ಹಿಡಿದು ಹೇಳಿದಳು "ನನಗೇನೋ ಇದು ಒಪ್ಪಿಗೆಯಾಯಿತು"

ಚಿಕ್ಕಮ್ಮನಿಗೆ ಅಸಮಾಧಾನವಾಗದಿರಲೆಂದು ಸುಮಿತ್ರೆ ಅದನ್ನೇ ಮೆಚ್ಚಿದವಳಂತೆ ನಟಿಸಿ, ತಂದೆಗೆ ತೋರಿಸಿದಳು

ನರಸಿಂಹಯ್ಯ ಸೀರೆಯನ್ನು ಬಹಳಹೊತ್ತು ಪರೀಕ್ಷಿಸಿ ಹೇಳಿದ

"ಇದು ಅಗ್ಗದ ರೇಷ್ಮೆ ಬೇರೆ ನೋಡಮ್ಮಾ"

"ಇದೇ ಸಾಕಣ್ಣಾ ಚೆನ್ನಾಗಿದೆ"

ತಂದೆ ಎಷ್ಟು ಹೇಳಿದರೂ ಸುಮಿತ್ರೆ ಅದೇ ಸೀರೆ ಇರಬೇಕೆಂದು ಪಟ್ಟು ಹಿಡಿದಳು ನಿರುಪಾಯನಾಗಿ ನರಸಿಂಹಯ್ಯ ಸುಮ್ಮನಾದ

ಹೊರಡುವ ದಿನ ರಂಗಮ್ಮ ಔತಣದಡಿಗೆ ಮಾಡಿದರು ರಾಜಮ್ಮ ಮಗಳಿಗೆ ಹೊಸ ಸೀರೆ ಉಡಿಸಿ ಆಶೀರ್ವದಿಸಿದಳು

ಸ್ವರ್ಣ ಕಂಗೆಟ್ಟ ಮುಖ ಹಾಕಿಕೊಂಡು ನಿಂತಿದ್ದುದನ್ನು ಗಮನಿಸಿ,

"ಇನ್ನೊಂದು ಸಲ ಬಂದು ದಸರಾಕ್ಕೆ ಕರೆದುಕೊಂಡು ಹೋಗುತ್ತೇನೆ ಚಿನ್ನಾ – ಅಳಬೇಡ" ಎಂದು ಗಲ್ಲ ಸವರಿಸಿದಳು

ಸುಮಿತ್ರೆ ರಂಗಮ್ಮನವರಿಗೆ ನಮಸ್ಕರಿಸಲು,

"ಮುತ್ತೈದೆಯಾಗಿ ನೂರುಕಾಲ ಚೆನ್ನಾಗಿ ಬಾಳು" ಎಂದು ಆಶೀರ್ವದಿಸಿದರು ರಂಗಮ್ಮನ ಕಳಕಳಿಯನ್ನು ಕಂಡ ಸುಮಿತ್ರೆ ಸಂತೋಷದಿಂದ,

"ಅಜ್ಜಿ, ನಿಮ್ಮಗಳೆಲ್ಲರ ಪ್ರೀತಿಯೇ ನನಗೀ ಜೀವಿತದ ಆಸರೆ–ನಾನೇ ಪುಣ್ಯವಂತೆ" ಎಂದು ಹಿಗ್ಗಿದಳು.

ರವಿಯ ಕೆನ್ನೆ ಹಿಂಡಿ ಅಳಿಸಿ, ಸುಮಿತ್ರೆ ಗಾಡಿ ಹತ್ತಿದಳು ನರಸಿಂಹಯ್ಯನೂ 'ಸೋಮವಾರ ಬಂದು ಬಿಡುತ್ತೇನೆ' ಎಂದು ಹೆಂಡತಿಗೆ ಹೇಳಿ ಮಗಳ ಜತೆ ಕುಳಿತ

ರಂಗಮ್ಮ ಕಣ್ಣೊರೆಸಿಕೊಳ್ಳುತ್ತಾ "ಇದು ಯಾವ ಜನ್ಮದ ಋಣಾನುಬಂಧವೋ" ಎಂದು ತಮ್ಮಲ್ಲೇ ಅಚ್ಚರಿಪಟ್ಟರು

ಹೊರಡುವಾಗಿದ್ದ ಮನಶ್ಶಾಂತಿ ರೈಲಿನಲ್ಲಿ ಕುಳಿತ ಮೇಲೆ ಚದುರಿತು ಮನೆಯಲ್ಲಿ ನಾವು ಹೋಗುವ ವೇಳೆಗೆ ಇರಬಹುದೇ ? ಇರದಿದ್ದಲ್ಲಿ ತಂದೆಗೆ

ಬರುವ ಸಂಶಯವನ್ನು ನಿವಾರಿಸುವ ಬಗೆ ಹೇಗೆ? ಸುಮಿತ್ರೆ ಯೋಚಿಸಿದಷ್ಟೂ ಅವಳ ಸಮಸ್ಯೆ ಜಟಿಲವಾಗಹತ್ತಿತು

ತಂದೆ ಮಗಳು ಇಬ್ಬರೂ ಮನೆತಲುಪುವ ಹೊತ್ತಿಗೆ ಸುಮಾರು ಕತ್ತಲಾಗಿದ್ದಿತು ಹೊರಗಿನಿಂದಲೇ ಸುಮಿತ್ರೆ ಒಂದುಬಾರಿ ತನ್ನ ಮನೆಯನ್ನು ವೀಕ್ಷಿಸಿದಳು ಒಳಗೆ ದೀಪವಿದ್ದಂತೆ ಕಾಣಲಿಲ್ಲ ಆಗಲೇ ಸುಮಿತ್ರೆಯ ಎದೆ ವೇಗವಾಗಿ ಹೊಡೆಯಲುಪಕ್ರಮಿಸಿತು ತನ್ನ ಕೈಚೀಲ ಹಿಡಿದು ಸುಮಿತ್ರೆ ಮೊದಲು ಪ್ರವೇಶಿಸಿ ನೋಡಿದಳು ಬೀಗಹಾಕಿದ್ದಿತು ತಮ್ಮ ಮನೆಯ ಬೀಗವೇ ಎಂದು ಅನುಮಾನಿಸಿದ ಸುಮಿತ್ರೆ ಮತ್ತೆಮತ್ತೆ ಪರೀಕ್ಷಿಸಿದಾಗ ತುಸು ಧೈರ್ಯವಾಯಿತು ಚಿಲ್ಲರ ಹಣವನ್ನು ಒಳಜೇಬಿಗೆ ಹಾಕುತ್ತಾ ನರಸಿಂಹಯ್ಯ ಬಂದ ಹೊರಗೇ ನಿಂತಿದ್ದ ಮಗಳನ್ನು ಕಂಡು ಆಶ್ಚರ್ಯವಾಯಿತು

"ನೀವೊಂದು ಕಾಗದ ಹಾಕಲಿಲ್ಲವೇ ಅಣ್ಣಾ"

'ಹಾಕಿದ್ದೆನಲ್ಲಾ ನಿನ್ನೆಯೇ ನಿಮ್ಮ ಯಜಮಾನರಿಗೆ ತಲುಪಿರಬೇಕು"

"ತಲುಪಿಲ್ಲವೆಂದು ತೋರುತ್ತದೆ"

"ಊರಲ್ಲಿಲ್ಲವೇ?"

"ಹಾಗೆಯೇ ಆಗಿರಬಹುದಣ್ಣಾ"

"ಈಗೇನಮ್ಮ ಮಾಡುವುದು? ನಿನ್ನ ಹತ್ತಿರ ಬೀಗದಕೈ ಇಲ್ಲವೇ?"

"ತೆಗೆದುಕೊಳ್ಳುವುದನ್ನು ಮರೆತುಬಿಟ್ಟೆ"

"ಸ್ವಲ್ಪವೂ ಮುಂದಾಲೋಚನೆಯೆಂಬುದೇ ಇಲ್ಲ" ನರಸಿಂಹಯ್ಯ ಬೇಸರದಿಂದ ಹೇಳಿದ ಸುಮಿತ್ರೆ ಪೆಚ್ಚಾಗಿ ಒಂದುಕಡೆ ನಿಂತಳು

ತನ್ನಲ್ಲೇ ಸಮಾಧಾನ ತಂದುಕೊಂಡು ನರಸಿಂಹಯ್ಯ ಮನೆಯ ಮುಂದಿನ ಅಂಗಳದಲ್ಲಿ ಕುಳಿತು, ಮಗಳಿಗೆ ಹೇಳಿದ

"ಸ್ವಲ್ಪಹೊತ್ತು ನೋಡೋಣ – ಕುಳಿತುಕೋ ಸುಮಿತ್ರ – ಬರಬಹುದು ಮುಂದೆ ಏನಾದರೂ ಆಲೋಚಿಸಿದರಾಯಿತು"

ಹೊತ್ತು ಬಹಳವಾಗುತ್ತಿದ್ದುದನ್ನು ಗಮನಿಸಿ ನರಸಿಂಹಯ್ಯ ಎದ್ದ,

"ಹೀಗೆಯೇ ಎಷ್ಟುಹೊತ್ತು ಜಪ ಮಾಡುತ್ತಿರುವುದು ಸುಮಿತ್ರಾ"

ಸುಮಿತ್ರೆ ತಂದೆಗೆ ಉತ್ತರವನ್ನೇ ಕೊಡಲಿಲ್ಲ

"ಮತ್ತೆ ಯಾರದಾದರೂ ಮನೆಯಿದ್ದಲ್ಲಿ ಹೋಗಿ ಬೆಳಗ್ಗೆ ಬರೋಣವೇ ?"

"ನನಗೇನೂ ತೋರುತ್ತಿಲ್ಲ ಅಣ್ಣ ಹೋಗುವುದಾದರೂ ಎಲ್ಲಿಗೆ ?" ನರಸಿಂಹಯ್ಯ ಕ್ಷಣಕಾಲ ಯೋಚಿಸಿದ

"ಬೀಗ ಒಡೆದುಬಿಡೋಣ "

ಸುಮಿತ್ರೆಗೆ ಜೀವ ಬಂದಂತಾಯಿತು

"ಹಾಗೆಯೇ ಮಾಡಿ ಅಣ್ಣ "

"ನಿಮ್ಮ ಯಜಮಾನರ ಆಕ್ಷೇಪ ಇಲ್ಲವಷ್ಟೆ "

"ನನ್ನ ಹತ್ತಿರ ಒಂದು ಕೈ ಇದೆ ಎಂದುಕೊಂಡಿದ್ದಾರೆ – ಒಡೆಯಿರಿ – ಚಿಂತೆಯಿಲ್ಲ "

ಸುಮಿತ್ರೆ ತಂದೆಗೆ ಧೈರ್ಯಕೊಟ್ಟಳು ನರಸಿಂಹಯ್ಯ ದಪ್ಪದೊಂದು ಕಲ್ಲುತಂದು ಬೀಗ ಚಚ್ಚಲಾರಂಭಿಸಿದ ಸುಮಾರು ಕಾಲುಗಂಟೆ ಹೊಡೆದಾಡಿದಮೇಲೆ ಬೀಗ ತೆರೆಯಿತು

ಮುಂದೆ ಬಂದು ಸುಮಿತ್ರೆ ಸ್ವಿಚ್ ಒತ್ತಿದಳು ದೀಪವೂ ಹತ್ತಲಿಲ್ಲ ಸುಮಿತ್ರೆಗೆ ಉತ್ಸಾಹ ಭಂಗವಾದಂತಾಯಿತು

"ನಾವು ಹೊರಟ ಘಳಿಗೆ ಚೆನ್ನಾಗಿಲ್ಲ ಅಣ್ಣ ಎಲ್ಲವೂ ಹೀಗೆಯೇ ಆಗುತ್ತಿದೆ " ಎಂದು ಕುಳಿತುಬಿಟ್ಟಳು

ಇನ್ನೇನು ಮಾತಾಡಿದರೂ ಪ್ರಯೋಜನವಿಲ್ಲನೆಂದುಕೊಂಡು ನರಸಿಂಹಯ್ಯ ಹತ್ತಿರದ ಅಂಗಡಿಯಲ್ಲಿ ಮೋಂಬತ್ತಿ ಕೊಂಡುತಂದು ಹತ್ತಿಸಿದ

ಸುಮಿತ್ರೆ ತಂದೆಯನ್ನು ಕುಳ್ಳಿರಿಸಿ ತಾನು ಒಳಗೆ ಹೋಗಿ ಎಲ್ಲವನ್ನು ಪರೀಕ್ಷಿಸಲಾರಂಭಿಸಿದಳು ಅಡಿಗೆಗೆ ಬೇಕಾಗುವ ಯಾವ ಸಾಮಾನೂ ಇಲ್ಲದುದನ್ನು ಕಂಡು ಪೆಚ್ಚುಮೋರೆ ಹಾಕಿಕೊಂಡು ಹೊರಬಂದಳು ಪರಿಸ್ಥಿತಿ ನರಸಿಂಹಯ್ಯನಿಗೆ ಅರಿವಾಯಿತು

ತಂದಿದ್ದ ತಿಂಡಿಯನ್ನು ಒಂದು ತಟ್ಟೆಗೆ ಹಾಕಿ ಸುಮಿತ್ರೆ ತಂದೆಗಿತ್ತು ತಾನೂ ಅಲ್ಲಿಯೇ ಕುಳಿತು ತಿಂದಳು. ಅಲ್ಪಾಹಾರವಾದಮೇಲೆ ಇಬ್ಬರೂ ಮಲಗಿದರು ಇರುಳು ಹರಿಯುವ ಸೂಚನೆಗಳು ಕಂಡುಬರುತ್ತಿದ್ದರೂ

ಸುಮಿತ್ರೆಗೆ ನಿದ್ರೆ ಬರಲಿಲ್ಲ ನಸುಬೆಳಕಾದ ಕೂಡಲೇ ಎದ್ದು ಮನೆ ಕೆಲಸದಲ್ಲಿ ತೊಡಗಿದಳು ಎಂದಿನಂತೆ ಲಕ್ಕವ್ವ ಬಂದು ಇಣಕು ಹಾಕಿದಳು ಅವಳ ಕರ್ತವ್ಯ ನಿಷ್ಠೆ ಕಂಡು ಸುಮಿತ್ರೆಗೆ ಸಂತೋಷವಾಯಿತು ತನ್ನಲ್ಲಿ ಉಳಿದಿದ್ದ ಹಣವನ್ನು ಲಕ್ಕವ್ವನ ಕೈಗೆ ಹಾಕಿ,

"ಮೊದಲು ಕಾಫಿಪುಡಿ ಸಕ್ಕರೆ ತಂದು ಆಮೇಲೆ ಮಿಕ್ಕ ನಾಮಾನು ತಾ – ಬೇಗ ಬಾ ಲಕ್ಕಿ – ತಂದೆ ಎದ್ದು ಬಿಡುತ್ತಾರೆ"

ತನ್ನ ವಯಸ್ಸನ್ನೂ ಮರೆತು ಲಕ್ಕವ್ವ ಓಡಿಹೋಗಿ ಒಡತಿಯ ಆಜ್ಞೆ ಪಾಲಿಸಿದಳು ಸುಮಿತ್ರೆ ಕಾಫಿಯನ್ನು ಸಿದ್ಧಪಡಿಸಿ ತಂದೆಯನ್ನೆಬ್ಬಿಸಿದಳು

"ಸ್ನಾನ ಮುಗಿಸಿ ಅಣ್ಣಾ – ನಾನೂ ಈಗಲೇ ಅಡುಗೆಗಿಡುತ್ತೇನೆ ರಾತ್ರಿಯೂ ಉಪವಾಸ ಮಲಗಿದಿರಿ" ಎಂದು ಮತ್ತಷ್ಟು ಉಪಚಾರ ಮಾಡಿದಳು

ತಂದೆಯಲ್ಲಿ ಉಳಿದಿರಬಹುದಾದ ಅಲ್ಪಸ್ವಲ್ಪ ಅನುಮಾನವನ್ನು ಕಿತ್ತೊಗೆಯಬೇಕೆಂದಿತ್ತು ಆವಳ ಪ್ರಯತ್ನ !

"ನಿನ್ನ ಗಂಡ ಈ ದಿನ ಬರಬಹುದೇ ಸುಮಿತ್ರಾ ?"

"ಅವರದು ಯಾವ ನೆಚ್ಚಿಗೆ ಹೇಳು – ಯಾವತ್ತೂ ಇದೇ ರೀತಿ ತಿಂಗಳಿಗೆ ಹದಿನೈದು ದಿನಗಳು 'ಟೂರ್ – ಟೂರ್' ಅಂತ ಸುತ್ತುತ್ತಿರುತ್ತಾರೆ ನೀನು ಏಳಣ್ಣಾ"

"ಇವತ್ತಾದರೂ ಬಂದರೆ ನಾನು ನಾಳೆ ಹೊರಡಬಹುದು"

ನರಸಿಂಹಯ್ಯ ಸ್ನಾನಮುಗಿಸಿ ಹೊರಹೊರಡಲು ಸಿದ್ಧನಾಗಿಬಂದು,

"ನಾನು ಇಲ್ಲೇ ಹೋಗಿಬರುತ್ತೇನೆ ಸುಮಿತ್ರಾ ಹಾಗೆಯೇ ಲೈಟಿನ ಬಿಲ್ ಕೊಡು – ಕಟ್ಟಿಬರುತ್ತೇನೆ"

"ಇರಲಿ ಸುಮ್ಮನಿರಿ ಅಣ್ಣಾ – ಇವರು ಬಂದು ಕಟ್ಟುತ್ತಾರೆ – ನಾನಿರಲಿಲ್ಲ ಇವರೂ ಮರೆತುಬಿಟ್ಟಿರಬಹುದು"

"ಸುಮ್ಮನೆ ಕೊಡು ಸುಮಿತ್ರಾ, ನಿನ್ನೆಯಂತೆ ಆಗಬಾರದು"

ಸುಮಿತ್ರೆ ಈ ಬಾರಿ ತಂದೆಗೆ ಎದುರುತ್ತರ ನುಡಿಯಲಿಲ್ಲ

## ೩೯

ನರಸಿಂಹಯ್ಯ ನೇರವಾಗಿ ಹಾಸ್ಟಲಿಗೆ ಬಂದು ಮಂಜುಳೆಯ ಹೆಸರಿಗೆ ಚೀಟಿಬರೆದು ಆಳಿನ ಕೈಲಿ ಕಳುಹಿಸಿ ಆಗಂತುಕರ ಕೊಠಡಿಯಲ್ಲಿ ಸ್ವಲ್ಪ ಹೊತ್ತು ಕುಳಿತ ಮಂಜುಳೆ ಬರಲು ತಡಮಾಡಲಿಲ್ಲ

ಮಂಜುಳೆ ನಸುನಗುತ್ತಾ ಕುಳಿತಳು

"ಎಂದುಬಂದಿರಿ? ಆರೋಗ್ಯವೇ?"

"ನಿನ್ನೆ ಸುಮಿತ್ರೆಯನ್ನು ಕರೆದುಕೊಂಡುಬಂದೆ ನೀನು ಚೆನ್ನಾಗಿರುವೆಯಾ?"

"ಬೆಂಗಳೂರಿಗೆ ಯಾವಾಗ ಬರುತ್ತೀ?"

"ಏಕೆ ಬರಬೇಕು? ನನ್ನಿಂದ ನಿಮ್ಮ ಸಂಸಾರಕ್ಕೆ ತೊಂದರೆಯಾಗುತ್ತಿದೆ

"ಅವರಿಗೆ ನಾನೇನು ಅನ್ಯಾಯ ಮಾಡಿದ್ದೇನೆ?"

"ನಿಮಗೆ ತಿಳಿದಿದೆ – ನಿಮ್ಮಿಂದಲೇ ಅಲ್ಲವೇ ಸುಮಿತ್ರೆಯ ಬಾಳು ಮೂರಾ ಬಟ್ಟೆಯಾದುದು?"

"                    "

"ನೀವೆಂದು ಸರಿಯಾಗಿದ್ದಲ್ಲಿ ನಿಮ್ಮ ಹೆಂಡತಿ ಸುಮಿತ್ರೆಯನ್ನು ಪ್ರೀತಿಯಿಂದಲೇ ಕಾಣುತ್ತಿದ್ದರು ತನಗಾಗಿದ್ದ ಅನ್ಯಾಯವನ್ನು ಸಹಿಸಲಾರದೆ ನಿಮ್ಮ ಹೆಂಡತಿ ಸುಮಿತ್ರೆಯನ್ನು ಹಾಳುಮಾಡಿದರು"

"ಸುಮಿತ್ರೆ ಸುಖವಾಗಿಯೇ ಇರುವಳಲ್ಲ"

"ನಿಮ್ಮ ಮಾತು ಕೇಳಿ ನಾನೂ ಹಾಗೆಯೇ ನಂಬಿದ್ದೆ. ಅವಳನ್ನು

ನೋಡಿ ಬಂದಮೇಲೆ ನಿಮ್ಮ ಮೇಲಿನ ನಂಬಿಕೆಯಲ್ಲಿ ಲೇಶಮಾತ್ರವೂ ಉಳಿದಿಲ್ಲ ನನ್ನ ಮಾತುನಂಬಿ ಸುಮಿತ್ರೆಗೆ ಎಳ್ಳಷ್ಟೂ ಸುಖವಿಲ್ಲ ”

' ನಾನು ಪಾಪಿ – ನನ್ನ ಮಗಳಿಗೆ ನಾನೇ ಅನ್ಯಾಯಮಾಡಿದೆ ”

“ಆದುದು ಕಟ್ಟಿಕೊಂಡೇನು ? ಇನ್ನಾದರೂ ಸುಮಿತ್ರೆಯ ಯೋಗಕ್ಷೇಮ ಸ್ವಲ್ಪ ವಿಚಾರಿಸಿ ”

ನರಸಿಂಹಯ್ಯನ ಮನದಲ್ಲಿ ಅಶಾಂತಿಯ ಬಿರುಗಾಳಿ ಎದ್ದಿತ್ತು

' ತಾಯಿಸತ್ತ ಹುಡುಗಿಯನ್ನು ನಾನು ಯಾವರೀತಿ ನೋಡಿಕೊಂಡೆ ?”

ಎಂದು ಹಲವುಬಾರಿ ಪ್ರಶ್ನಿಸಿಕೊಂಡ

“ನಾನು ಯಾರ ವಿಶ್ವಾಸಕ್ಕೂ ಯೋಗ್ಯನಲ್ಲ ಕ್ಷಮಿಸು ನಂಜು ”

ಎಂದು ಹೊರಡಲು ಯತ್ನಿಸಿದ

“ನೀನಾದರೂ ಅವಳ ಯೋಗಕ್ಷೇಮ ಆಗಾಗ್ಗೆ ವಿಚಾರಿಸುತ್ತಿರು ನಂಜುಂ '

ನರಸಿಂಹಯ್ಯ ಮನೆಗೆ ಬರುವಷ್ಟರಲ್ಲಿ ಸುಮಿತ್ರೆ ಅಡಿಗೆ ಮಾಡಿಟ್ಟು ಕಾಯುತ್ತಿದ್ದಳು ಎಲೆ ಹಾಕಿ ತಂದೆಗೆ ಬಡಿಸಿದಳು

' ನಾನು ರಾತ್ರಿ ಹೊರಟುಬಿಡಬೇಕಾಗಿದೆ ಸುಮಿತ್ರಾ ರಜಾ ಇಲ್ಲ ”

ಸುಮಿತ್ರೆ ಉತ್ತರಿಸಲಿಲ್ಲ

ನರಸಿಂಹಯ್ಯ ಕೈ ತೊಳೆದುಬಂದು, 'ನೀನು ಊಟಕ್ಕೆ ಕುಳಿತುಕೋ ಸುಮಿ' ಎಂದು ಮಗಳನ್ನು ಉಪಚರಿಸಿದ

ಅದೇರಾತ್ರಿ ನರಸಿಂಹಯ್ಯ ಹೊರಟ ಸುಮಿತ್ರೆ ತಂದೆಗೆರಗಿ ಆಶೀರ್ವಾದ ಪಡೆದಳು ನರಸಿಂಹಯ್ಯ ಮಗಳ ಕೈಗೊಂದು ಕವರನ್ನಿತ್ತು,

“ಇದನ್ನು ನಿನ್ನ ಖರ್ಚಿಗೆ ಉಪಯೋಗಿಸಿಕೋ ಸುಮಿತ್ರಾ ಊರಿಗೆಹೋಗಿ ಮತ್ತೆ ಕಳುಹಿಸುತ್ತೇನೆ – ನಿನಗೆ ಏನು ಸಮಯಬಂದರೂ ಕೂಡಲೇ ನನಗೆ ಕಾಗದಬರೆ – ನನ್ನಲ್ಲೂ ಸಂಕೋಚಪಡಬೇಡ ”

ಸುಮಿತ್ರೆಯಿಂದ ಮಾತುಗಳು ದೂರ ಸರಿದವು ಮೌನವಾಗಿಯೇ ತಂದೆಯಿತ್ತ ಹಣವನ್ನು ಸ್ವೀಕರಿಸಿದಳು ನರಸಿಂಹಯ್ಯ ಸುಮಿತ್ರೆಯನ್ನು ಅಗಲಲಾರದೇ ಅಗಲಿದ ತಂದೆಯನ್ನೇ ನೋಡುತ್ತಾ ಹೊತ್ತಿನ ಪರಿವೆಯೂ ಇಲ್ಲದೆ ಸುಮಿತ್ರೆ ನಿಂತೇ ಇದ್ದಳು

೪೦

ಸುಮಿತ್ರ ಬಂದ ಒಂದು ವಾರದನಂತರ ನಾಗರಾಜ ಮನೆ ಸೇರಿದ ಹೆಂಡತಿಯನ್ನು ನೋಡಿ ಆಶ್ಚರ್ಯವಾಯಿತು

"ಇದೇನೆ ?–ಇಷ್ಟುಬೇಗನೆ ಬಂದುಬಿಟ್ಟೆ ?" ಎಂದು ಹೇಳಿ ಆಶ್ಚರ್ಯ ಸೂಚಿಸಿದ

"ನನಗೆ ಅಲ್ಲಿರಲು ಮನಸ್ಸಾಗಲಿಲ್ಲ "

"ಇನ್ನೂ ನಾಲ್ಕುದಿನ ಇದ್ದು ಬರಬೇಕಾಗಿತ್ತು ಇಲ್ಲೇನು ಕೊಳ್ಳೆ ಹೋಗುತ್ತಿದೆಯೆಂದು ಓಡಿಬಂದೆ"

ಗಂಡನ ಪ್ರಶ್ನೆಗೆ ಸುಮಿತ್ರ ಉತ್ತರ ಹೇಳುವ ಗೋಜಿಗೇ ಹೋಗಲಿಲ್ಲ ನಾಗರಾಜ ಹೊರಡುವ ಸನ್ನಾಹ ಮಾಡತೊಡಗಿದ.

ಸುಮಿತ್ರೆಗೆ ದುಃಖ ಕಟ್ಟೆಯೊಡೆದು ಬಂತು – ಅಳುತ್ತಾ ನಿಂತಳು ಅಸಮಾಧಾನದಿಂದ ನಾಗರಾಜ ಒಂದುಸಲ ಅವಳಕಡೆ ತಿರುಗಿನೋಡಿ ಸುಮ್ಮನಾದ

ಸುಮಿತ್ರ ಧೈರ್ಯಮಾಡಿ ಕೇಳಿದಳು,

"ನಾನೇನು ತಪ್ಪು ಮಾಡಿದುದಕ್ಕೆ ನನಗೀಶಿಕ್ಷೆ ?"

ಎಂದು ಅಳುತ್ತಾ ಬಂದು ಗಂಡನ ಪಾದಗಳಮೇಲೆ ಬಿದ್ದಳು. "ಎಲ್ಲರೂ ನನ್ನ ಬಾಳುಕಂಡು ನಗುವಂತೆ ಮಾಡಬೇಡಿ – ನನ್ನ ತಪ್ಪುತಿದ್ದಿಕೊಂಡು ನಿಮಗೆ ಸಂತೋಷವಾಗುವ ರೀತಿಯಲ್ಲಿರುತ್ತೇನೆ ದಯವಿಟ್ಟು ನನ್ನ ಕೈಬಿಡಬೇಡೀಂದ್ರೆ."

ಹೆಮ್ಮೆಯ ನಗೆಯೊಂದು ನಾಗರಾಜನ ಮುಖದಮೇಲೆ ತೇಲಿತು.

ಸುಮಿತ್ರೆಯ ಅಸಹಾಯಕ ಸ್ಥಿತಿಯನ್ನು ನೆನೆದು ಅವನಿಗೆ ತಿರಸ್ಕಾರ ಮೂಡಿತು,

"ಛೀ—ನಡೆಯಾಚೆ" ಎಂದು ಒತ್ತಟ್ಟಿಗೆ ಸುಮಿತ್ರೆಯನ್ನು ಝಾಡಿಸಿ ಹೊರಟೇ ಹೋದ

ಸುಮಿತ್ರೆ ಹತಾಶಳಾಗಿ ಉರುಳಿದಳು

ಸುಮಿತ್ರೆಯ ಧೈರ್ಯಸ್ಥೈರ್ಯ ಒಂದೇಸಮನಾಗಿರುತ್ತಿರಲಿಲ್ಲ ತೀರದ ಆಸೆಯನ್ನಿಟ್ಟುಕೊಂಡು ಕಲವು ದಿನಗಳನ್ನು ಕಳೆಯುತ್ತಿದ್ದಳು ಆ ಕಾಲದಲ್ಲಿ ಮನೆ ಓರಣವಾಗಿ ಕಂಗೊಳಿಸುತ್ತಾ, ಸುಮಿತ್ರೆಯ ಉತ್ಸಾಹದ ಪ್ರತಿರೂಪದಂತಿರುತ್ತಿದ್ದಿತು ಇದೇಸ್ಥಿತಿ ಬಹುದಿನಗಳವರೆಗೆ ನಿಲ್ಲುತ್ತಿರಲಿಲ್ಲ ಉದಾಸೀನಳಾದ ಸುಮಿತ್ರೆ ಯಾವ ಕೆಲಸಕ್ಕೂ ಕೈಹಾಕುತ್ತಿರಲಿಲ್ಲ

ನಾಗರಾಜನಿಗೆ ಸುಮಿತ್ರೆಯ ನಡವಳಿಕೆ ಕಂಡು ಮತ್ತೇರಿದಂತಾಗುತ್ತಿದ್ದಿತು ಹೆಂಡತಿಯನ್ನು ದಂಡಿಸಿ ಕೆಲಸಮಾಡುವಂತೆ ಪ್ರೇರೇಪಿಸಲು ಯತ್ನಿಸುತ್ತಿದ್ದ ಮಂಕು ಬಡಿದವಳಂತೆ ಸುಮಿತ್ರೆ ಕುಳಿತೇ ಇರುತ್ತಿದ್ದಳು ನಾಗರಾಜನಿಗೆ ಕೈ ಸೋತು ಬರುತ್ತಿದ್ದಿತು ಬೇಸರದಿಂದ

"ಈ ಪ್ರಾರಬ್ಧ ನನಗೆಲ್ಲಿ ಗಂಟುಬಿತ್ತು" ಎಂದುಕೊಂಡು ಸುಮ್ಮನಾಗುತ್ತಿದ್ದ

ಒಂದುದಿನ ನಾಗರಾಜ ಸ್ವತಃ ನಿಂತು ಮನೆಯನ್ನು ಶುಭ್ರಗೊಳಿಸಿದ ಅವನ ಆಸಕ್ತಿಯನ್ನು ಗಮನಿಸಿದ ಲಕ್ಕಮ್ಮನಿಗೆ ಒಳಗೇ ಅನುಮಾನ

ಸುಮಾರು ಹತ್ತುಗಂಟೆಯ ವೇಳೆಗೆ ನಾಗರಾಜ ಕಾರಿನಲ್ಲಿ ತರಕಾರಿ, ಹಣ್ಣು, ಮನೆಯ ಸಾಮಾನುಗಳೆಲ್ಲವನ್ನೂ ತಂದು ಸುರಿದ ಯಾವೊಂದು ಆಸಕ್ತಿಯನ್ನೂ ತೋರಗೊಡದೆ ಸುಮಿತ್ರೆ ಮೌನವಾಗಿ ಕುಳಿತಿದ್ದಳು ನಾಗರಾಜ ತಾನೇ ಬಂದು

"ಸಂಜೆಗೆ ನನ್ನ ಸ್ನೇಹಿತರು ಕೆಲವರು ಬರುವರು ಕಾಫಿ-ತಿಂಡಿ, ಅಡಿಗೆ ಎಲ್ಲವನ್ನೂ ಚೆನ್ನಾಗಿ ಮಾಡು ಹೀಗೆ ಕುಳಿತಿರಬೇಡ-ನಿನ್ನ ಅವಸ್ಥೆಯನ್ನು ನೋಡಿದರೆ ವಾಂತಿಬರುತ್ತದೆ ತಲೆಬಾಚಿಕೊಂಡು ಲಕ್ಷಣವಾಗಿರು-ಏಳು" ಎಂದು ಆಜ್ಞೆವಿಧಿಸಿ ಹೋದ

ಸಾಕಿದ ನಾಯಿಯಂತೆ ಸುಮಿತ್ರೆ ಯಜಮಾನನ ಆಜ್ಞೆಯನ್ನು ಪರಿಪಾಲಿಸತೊಡಗಿದಳು

ಸಂಜೆ ನಾಗರಾಜ ತನ್ನ ಗೆಳತಿಯನ್ನು ಕಾರಿನಲ್ಲೇ ಮನೆಗೆ ಕರೆತಂದ ಮನೆಯ ಅಂದ ಚಂದವನ್ನು ಭಾರತಿ ಮೆಚ್ಚಿದಳು

ಸುಮಿತ್ರ ಕಾಫಿ ತಿಂಡಿಯೊಡನೆ ಪ್ರವೇಶಿಸಿದಳು ಭಾರತಿ ಕಾಫಿ ಕುಡಿದು,

"ಈಕೆ ಯಾರು ರಾಜ್" ಎಂದು ಕುತೂಹಲದಿಂದ ಕೇಳಿದಳು

"ಅಡಿಗೆಯ ಕೆಲಸಕ್ಕೆ ನೇಮಿಸಿದ್ದೇನೆ" ನಾಗರಾಜ ಯಾವೊಂದು ವಿಕಾರವನ್ನು ತೋರಿಸದೆ ನುಡಿದ

"ನಿಮ್ಮ ಮಿಸೆಸ್ ಇಲ್ಲವೇ ?"

ನಾಗರಾಜ ನಕ್ಕು, "ನನಗಿನ್ನೂ ಮದುವೆಯೇ ಆಗಿಲ್ಲ ಭಾರತಿ" ಎಂದು ಹೇಳಿದ ಸುಮಿತ್ರೆಯ ಕಣ್ಣುಗಳು ಹನಿಗೂಡಿದವು

ಇನ್ನೂ ನಿಂತಿದ್ದ ಸುಮಿತ್ರೆಯನ್ನು ಕಂಡು ನಾಗರಾಜನಿಗೆ ಕೋಪ ಉಕ್ಕೇರಿತು

"ಸ್ಟುಪಿಡ್ ರ್‍ಯಾಸ್ಕಲ್–ಸ್ವಲ್ಪವೂ ಮ್ಯಾನರ್ಸ್ ಇಲ್ಲ–ತಟ್ಟೆ ತೆಗೆದುಕೊಂಡು ತೊಲಗು – ಇದೇನಂತ ಚೇಯಿಸಿದ್ದೀಯಾ ?" ಎಂದು ಗುಡುಗಿ,

"ಭಾರತಿ–ನಿಮಗೆ ಹಸಿವೇ ತೀರಿಲ್ಲನೆಂದು ತೋರುತ್ತದೆ ಬನ್ನಿ–ಹೊರಗೆಲ್ಲಾದರೂ ಹೋಗಿ ತಿಂದುಬರೋಣ–ಇವಳಿಗೆಷ್ಟು ಹೇಳಿದರೂ ದಿನವೂ ಇದೇಗೋಳು ಸಂಬಳ ದಂಡ"

ಸುಮಿತ್ರ ನಡಗುತ್ತಲೇ ಎಂಜಲು ತಟ್ಟೆಗಳನ್ನೆತ್ತಿ ಕೊಂಡು ಹೋದಳು ಅವಳ ನಡಗುವ ಕೈಗಳನ್ನು ಕಂಡ ಭಾರತಿ,

"ನೀವಾರೀತಿ ರೇಗಬಾರದು ರಾಜ್, ಪಾಪ–ಆಕೆ ಬಹಳ ಹೆದರಿಬಿಟ್ಟಳು ತಿಂಡಿ ಚೆನ್ನಾಗಿಯೆ ಇತ್ತಲ್ಲ"

"ನಿಮಗೆ ತಿಳಿಯದು ಭಾರತಿ ಇವರುಗಳನ್ನು ಹಾಗೆಯೇ ಇಡಬೇಕು ಹೊಗಳಿದರೆ ಅಟ್ಟಕ್ಕೇರಿಬಿಡುತ್ತಾರೆ" ಎಂದು ಸಮಾಧಾನ ಹೇಳಿದ

ಸುಮಿತ್ರೆ ಭಾರತಿಗೆ ಸ್ನಾನಗೃಹ ತೋರಿಸಿದಳು ಭಾರತಿ ಮುಖ

ತೊಳೆದುಬಂದು ಸುಮಿತ್ರೆಯನ್ನು ಮಾತನಾಡಿಸಲು ಪ್ರಯತ್ನಿಸಿ ಸೋತಳು ಸುಮಿತ್ರೆಯ ನಡತೆಯಿಂದ ಬೇಸರಗೊಂಡ ಭಾರತಿ,

"ಅಡಿಗೆಯವಳಿಗೆಷ್ಟು ಅಹಂಕಾರ ?" ಎಂದುಕೊಂಡಳು

ಭಾರತಿ ಇದ್ದಷ್ಟು ದಿನಗಳೂ ನಾಗರಾಜನಿಗೆ ಬಿಡುವೇ ಇರಲಿಲ್ಲ ದಿನವೂ ಒಂದೊಂದು ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿ ಅವಳನ್ನು ಸಂತೋಷಪಡಿಸುತ್ತಿದ್ದ

ಇಪ್ಪತ್ತು ದಿನಗಳು ಕಳೆದಮೇಲೆ ಭಾರತಿ ಚಡಪಡಿಸಲಾರಂಭಿಸಿದಳು

"ಬೆಂಗಳೂರಲ್ಲಿ ಸ್ವಲ್ಪ ಕೆಲಸವಿದೆ ರಾಜ್ ನಾನು ಹೊರಡಬೇಕು"

"ಬನ್ನಿ ಇಬ್ಬರೂ ಕೂಡಿಯೇ ಹೋಗೋಣ"

"ಅಲ್ಲಿ ನಿಮ್ಮ ಜತೆ ಇರಲು ಸಾಧ್ಯವಿಲ್ಲ ರಾಜ್ ನನಗೆ ಬೇರೆಯ ಎಂಗೇಜ್‌ಮೆಂಟ್ ಇದೆ"

ನಾಗರಾಜ ನಿರುಪಾಯನಾದ

"ಮೊದಲನೆಯ ತಾರೀಖು ನಾನು ಮದ್ರಾಸಿಗೆ ಹೋಗಬೇಕು ಷೂಟಿಂಗ್‌ಕಾರ್ಯಕ್ರಮವಿದೆ ಆಗ ಬಂದು ನನ್ನ ಅತಿಥಿಯಾಗಿರಿ"

ಭಾರತಿಯ ಆಹ್ವಾನವನ್ನು ನಾಗರಾಜ ತಿರಸ್ಕರಿಸಲಿಲ್ಲ ಅವಳ ಮನ ಗೆಲ್ಲಲು ನಾಗರಾಜ ನಾನಾ ಪ್ರಯತ್ನಗಳನ್ನು ಮಾಡಿದ ಭಾರತಿ ಮೆಚ್ಚಿದ ಮೈಸೂರು ಸಿಲ್ಕಿನ ಸೀರೆ, ಜೋಳಿ ಒಟ್ಟಿಗಳನ್ನು ತಂದು ಅವಳ ಪೆಟ್ಟಿಗೆ ಭರ್ತಿಮಾಡಿದ ಭಾರತಿಯ ಬೆರಳಿಗೆ ವಜ್ರದುಂಗುರವಿಟ್ಟು,

"ಭಾರತಿ ನಿಮ್ಮೊಡನಾಟದಲ್ಲಿ ನಾನೆಷ್ಟು ಸುಖಿಯಾಗಿರುವನೆಂದು ವರ್ಣಿಸಲು ಮಾತುಗಳೇ ಸಾಲದು ನೀವು ದೊಡ್ಡಮನಸ್ಸುಮಾಡಿ ನನ್ನ ಕೈ ಹಿಡಿದರೆ ನಾನು ಅತ್ಯಂತ ಸುಖಿಯಾಗಿರುತ್ತೇನೆ" ಎಂದ

ನಾಗರಾಜನ ನಡವಳಿಕೆಯಿಂದ ಭಾರತಿಗೆ ಆಶ್ಚರ್ಯವೇ ಆಯಿತು

"ಚೆನ್ನಾಗಿ ಯೋಚಿಸಿ ಮಾತನಾಡುತ್ತಿರುವಿರಾ ರಾಜ್"

"ನನ್ನ ಮಾತಿನಲ್ಲಿ ನಂಬಿಕೆ ಇಲ್ಲವೇ ?"

"ನಿಮ್ಮಂತೆ ದುಡುಕುವ ಸ್ವಭಾವ ನನಗಿಲ್ಲ ರಾಜ್ ಮದರಾಸಿಗೆ ಬರುವಿರಲ್ಲಾ—ಆಗ ಆಲೋಚನೆಮಾಡಿ ತಿಳಿಸುತ್ತೇನೆ"

ಭಾರತಿ ಹೊರಡುವದಿನ ಬಂದಾಗ ನಾಗರಾಜ ದುಃಖತಪ್ತನಾದ

ಹೊರಡಲು ಸಿದ್ಧಳಾದ ಭಾರತಿ ತನ್ನ ಹಳೆಯ ಸೀರೆಗಳೆರಡನ್ನು ತಂದು ಸುಮಿತ್ರೆಗೆ, ಲಕ್ಕವ್ವನಿಗೆ ಕೊಟ್ಟಳು

ಏನು ಹೇಳಬೇಕೆಂಬುದೂ ಸುಮಿತ್ರೆಗೆ ತಿಳಿಯಲಿಲ್ಲ ಸೀರೆ ಹಿಡಿದು ನಿಂತೇ ಇದ್ದಳು

ನಾಗರಾಜ, ಭಾರತಿ ಕಾರಿನಲ್ಲಿ ಹೊರಟುಹೋದರು

ಅವರನ್ನೇ ನೋಡುತ್ತಾ ನಿಂತ ಸುಮಿತ್ರೆ ಸ್ವಲ್ಪಹೊತ್ತಿನಮೇಲೆ ನಗಲಾರಂಭಿಸಿದಳು ಮೆಲ್ಲನೆ ಪ್ರಾರಂಭವಾದ ನಗ ಕ್ಷಣಕ್ಷಣಕ್ಕೂ ಹೆಚ್ಚಿ, ನಗುವಿನ ಶಬ್ದ ಮನೆಯೆಲ್ಲವನ್ನೂ ತುಂಬಿತು ಹೊಟ್ಟೆ ಹುಣ್ಣಾಗುವಂತೆ ನಕ್ಕು ಸುಮಿತ್ರೆ ಸುಮ್ಮನಾಗಿ,

"ಲಕ್ಕೀ ಈ ಸೀರೆ ಜೋಪಾನವಾಗಿರಿಸೇ" ಎಂದು ಕೂಗಿದಳು

ಸುಮಿತ್ರೆಯ ಸ್ಥಿತಿಕಂಡು ಭಯಭ್ರಾಂತಳಾದ ಲಕ್ಕವ್ವ, "ಏನಾಯ್ತವ್ವಾ?"

"ನೋಡಿದೆಯಾ? ಆವಳನ್ನ. ನನ್ನ ಮನೆಗೆ ಬಂದು ನನಗೇ ಹಳೆಯ ಸೀರೆ ಕೊಟ್ಟು ಹೋದಳಲ್ಲಾ" ಎಂದು ಮತ್ತೆ ನಗಲಾರಂಭಿಸಿದಳು

ಸುಮಿತ್ರೆಯನ್ನು ಯಾವ ರೀತಿ ಸಮಾಧಾನ ಮಾಡಬೇಕೆಂಬುದು ಲಕ್ಕವ್ವನಿಗೆ ತಿಳಿಯದಾಯಿತು

ನಕ್ಕು ಸುಸ್ತಾದ ಸುಮಿತ್ರೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು 'ಮಿಂಚಿ ಹೋದುದಕ್ಕೆ ಚಿಂತಿಸಿ ಫಲವೇನು' ಸುಮಿತ್ರೆ ತನ್ನಲ್ಲೇ ನೂರು ಬಾರಿ ಹೇಳಿಕೊಂಡು ನಿದ್ರಾಪರವಶಳಾದಳು ಅವಳನ್ನೇ ಹಂಗಿಸುವಂತೆ ಹರಕು ಸೀರೆ ಅಲ್ಲಿಯೇ ಬಿದ್ದಿತ್ತು ತನ್ನೆಲ್ಲಾ ಕೋಪವನ್ನು ಸುಮಿತ್ರೆ ಸೀರೆಯ ಮೇಲೆ ತೋರಿಸಿದ್ದಳು ಒಡತಿಯ ಸ್ಥಿತಿ ಕಂಡು ಲಕ್ಕವ್ವ ದಿಙ್ಮೂಢಳಾದಳು

ಸ್ಟೇಷನವರೆಗೆ ಬಿಡಲು ಹೋದ ನಾಗರಾಜ ಭಾರತಿಯನ್ನು ಬೆಂಗಳೂರಿಗೇ ತಲುಪಿಸಿ ಬರುವುದಾಗಿ ನಿರ್ಧರಿಸಿದ

ನಾಗರಾಜನ ಮನಸ್ಸು ತಿಳಿದ ಭಾರತಿಗೆ ಆಶ್ಚರ್ಯವಾಯಿತು.

"ನಿಮಗೆ ತೊಂದರೆಯಾಗುವುದಿಲ್ಲವೇ?"

"ತೊಂದರೆಯೇ, ಇದಕ್ಕೂ ಮೀರಿದ ಸಂತೋಷದ ಕಾರ್ಯವೇನಿದೆ?"

ತನ್ನ ದಾಸಾನುದಾಸನಾಗಿರುವ ನಾಗರಾಜನನ್ನು ಕಂಡು ಭಾರತಿಗೆ ಸಂತೋಷವಾಯಿತು. ಕುಟಿಲ ಪ್ರೇಮದಿಂದ ಅವನನ್ನು ಮಂತ್ರಮುಗ್ಧ

ನನ್ನಾಗಿ ಮಾಡಿದಳು ಬೆಂಗಳೂರು ತಲಪುವ ವೇಳೆಗೆ ನಾಗರಾಜನ ಮನಸ್ಸು ಡೋಲಾಯಮಾನವಾಗಿದ್ದಿತು ಅವನ ಸ್ಥಿತಿಯನ್ನೂಹಿಸಿದ ಭಾರತಿ ನಾಗರಾಜನ ಸ್ಥಿತಿಯ ಪ್ರಯೋಜನವನ್ನು ಸರಿಯಾಗಿ ಪಡೆದಳು

ಭಾರತಿಯ ಆಕಾಂಕ್ಷೆಯಂತೇ ನಾಗರಾಜ ಚರ್ಚ್ ಗೇಟಿನ ಬಳಿಯೇ ಕಾರು ನಿಲ್ಲಿಸಿದ ಭಾರತಿ ಇಳಿದುಬಂದು,

"ರಾಜ್ ನಾನು ಹೀಗೆ ಮಾಡಿದೆನೆಂದು ಬೇಸರವೇ ?"

ನಾಗರಾಜನಿಗೆ ಮಾತೇ ಹೊರಡಲಿಲ್ಲ ಬಹು ಪ್ರಯಾಸದಿಂದ,

"ಕುಳಿತುಕೋ ಭಾರತಿ ನಂತರ ಹೋಗುವಿಯಂತೆ"

"ನಿಮ್ಮ ಸ್ಥಿತಿ ನನಗೇಕೋ ಭಯ ಹುಟ್ಟಿಸಿದೆ ಏನಾಯಿತು ರಾಜ್?" ಭಯಗೊಂಡು ಭಾರತಿ ಒಳಗೆ ಕುಳಿತಳು

ನಾಗರಾಜ ಚೇತರಿಸಿಕೊಂಡು, "ಇನ್ನು ಸ್ವಲ್ಪ ಹೊತ್ತಿದ್ದು ಹೋಗುವಿಯಂತೆ"

ನಾಗರಾಜನ ಹುಚ್ಚಿಗೆ ಭಾರತಿ ಸಮ್ಮತಿಸಬೇಕಾಯಿತು

ಇಬ್ಬರೂ ಹೋಟೆಲೊಂದರಲ್ಲಿ ಇಳಿದುಕೊಂಡು ಮತ್ತಷ್ಟು ಹೊತ್ತನ್ನು ಕಳೆದರು

ಭಾರತಿ ನಾಗರಾಜನ ಹುಚ್ಚು ಎಷ್ಟು ಹೊತ್ತಿಗೂ ಆರುವುದಿಲ್ಲವೆಂದು ಮನಗಂಡು, ಹೊರಟುನಿಂತಳು

ಭಾರತಿಯ ಕೈಗೆ ಒಂದು ನೋಟಿನ ಕಟ್ಟನ್ನು ತುರುಕಿದ ಸ್ಥೂಲವಾಗಿಯೇ ಎಷ್ಟಿರಬಹುದೆಂದು ಗ್ರಹಿಸಿದ ಭಾರತಿ ಸಂತೋಷಗೊಂಡಳು

"ಮದ್ರಾಸಿಗೆ ಖಂಡಿತವಾಗಿ ಬರುವಿರಾ ರಾಜ್"

"ನೀನು ಹೋದ ಕೂಡಲೇ ವೈರ್ ಮಾಡು – ಮರು ರೈಲಿಗೇ ಅಥವಾ ಕಾರಿನಲ್ಲೇ ಬಂದು ಬಿಡುತ್ತೇನೆ"

"ನಾನಿನ್ನು ಬರಲೇ ರಾಜ್"

"ಮನೆಯವರೆಗೆ ಬಿಡಲೇ?"

"ಬೇಡಿ ಅನುಮಾನಕ್ಕೆ ನಾವೀಗ ಆಸ್ಪದ ಕೊಡಬಾರದು ಟ್ಯಾಕ್ಸಿ ತೆಗೆದುಕೊಂಡು ನಾನೇ ಹೋಗುತ್ತೇನೆ"

ನಿರ್ವಾಹವಿಲ್ಲದೆ ನಾಗರಾಜ ಸುಮ್ಮನಾಗಬೇಕಾಯಿತು

ಭಾರತಿಯ ಅಗಲಿಕೆಯಿಂದಾದ ನಿರಾಶೆಯನ್ನು ನಿವಾರಿಸಿಕೊಳ್ಳಲು ನಾಗರಾಜ ಮತ್ತೆರಡು ದಿನಗಳನ್ನು ಬೆಂಗಳೂರಿನಲ್ಲೇ ಕಳೆದು ಬಂದ

ನಾಗರಾಜನ ವಿಷಯಾಸಕ್ತಿಯಂತೇ ಖರ್ಚೂ ಏರತೊಡಗಿತು ಬರುವ ಆದಾಯಕ್ಕಿಂತ ಖರ್ಚೇ ಅಧಿಕವಾದಾಗ ಅಲ್ಲಲ್ಲಿ ಸಾಲಗಳೂ ಹುಟ್ಟಿಕೊಂಡವು ಸಾಲ ತೀರಿಸುವ ಅಗತ್ಯವೂ ನಾಗರಾಜನಿಗೆ ಕಾಣಲಿಲ್ಲ ಸಿಗುವ ಜಾಗಗಳಲ್ಲೆಲ್ಲಾ ಪ್ರಯತ್ನಿಸಿ, ತನ್ನಲ್ಲಿ ನಂಬಿಕೆ ಇಟ್ಟವ್ವ ಬಳಗದ ಸಂಪೂರ್ಣ ಪ್ರಯೋಜನ ಪಡೆದ

ಸುಮಿತ್ರ ಅನಾಸಕ್ತಳಾಗಿರುತ್ತಿದ್ದಳು ಭಾರತಿಯನ್ನು ಕಾಣಲು ಹೋಗಬೇಕಾದರೆ ಕೈತುಂಬಾ ಹಣ ಬೇಕಾಗುತ್ತಿದ್ದಿತು ಆ ಹಣ ಹವಣಿಸಲು ನಾಗರಾಜ ಭೂಮಿ ಆಕಾಶ ಒಂದು ಮಾಡುತ್ತಿದ್ದ

ಒಂದು ಸಂಜೆ ಸುಮಿತ್ರ, ಲಕ್ಕವ್ವ ಮಾತನಾಡುತ್ತಾ ಕುಳಿತಿದ್ದರು ಮನೆ ಎದುರಿಗೆ ಒಂದು ಲಾರಿ ಬಂದು ನಿಂತಿತು ಆಳೊಬ್ಬ ಬಂದು ಸುಮಿತ್ರೆಯ ಕೈಗೊಂದು ಚೀಟಿ ಇತ್ತ ಅದನ್ನೋದಿಕೊಂಡ ಸುಮಿತ್ರೆ ಕೇಳಿದಳು, "ಯಜಮಾನರೆಲ್ಲಿದ್ದಾರೆ ?"

"ನಮ್ಮ ಅಂಗಡಿ ತಾವಿದ್ದಾರು ತಾಯಿ ತಮಗೆ ತೋರಿಸಿ ಸಾಮಾನು ತರಹೇಳಿದರು"

"ಸರಿ ತೆಗೆದುಕೊಂಡು ಹೋಗಪ್ಪಾ"

ಸುಮಿತ್ರೆಯ ಅಪ್ಪಣೆ ಪಡೆದು, ಆಳು ಮರದ ಸಾಮಾನುಗಳನ್ನೆಲ್ಲಾ ಸಾಗಿಸಿದ ಈ ದೃಶ್ಯ ಕಂಡು ಸಂತಪ್ತಳಾದ ಲಕ್ಕವ್ವ

"ಯಾನ್ರವ್ವ ? ಮನೆ ಬುಟ್ಟೋಗ್ತಾರಂತ ?" ಎಂದು ಕೇಳಿದಳು

"ನಿನಗೆಷ್ಟು ತಿಳಿದಿದೆಯೋ ಅಷ್ಟೇ ನನಗೂ ಗೊತ್ತು ಲಕ್ಕಿ"

"ಭೋ ಸಂದಾಕಿವೆ ತಾಯಿ ನೀವೊಂದ್ಮಾತು ಏಳ್ಬಾರ್ದಾ ?"

"ಹೇಳಿದರೇನು ಪ್ರಯೋಜನ ಲಕ್ಕಿ, ಹೋಗಲಿ ಬಿಡು ಹೇಗೆ ಬಂತೋ ಹಾಗೇ ಹೋಯಿತು"

ಲಕ್ಕವ್ವನೂ ಸುಮ್ಮನಾಗಬೇಕಾಯಿತು

ತನ್ನ ಮನೆ ಬರಿದಾದುದನ್ನು ಕಂಡ ಸುಮಿತ್ರೆಗೆ ಸಂಕಟವಾಯಿತು ಆತ್ತು ಸಮಾಧಾನ ತಂದುಕೊಂಡಳು

# ೪೧

ನಾಗರಾಜನ ಸ್ಥಿತಿ ದಿನದಿನಕ್ಕೆ ಕ್ಷಯಿಸುತ್ತಾ ಬಂದಿತು  ಸಿಕ್ಕಬಹುದಾದ ಕಂಟ್ರಾಕ್ಟುಗಳೂ ಇವನ ದುರದೃಷ್ಟದಿಂದ ತಪ್ಪಿಹೋಗುತ್ತಿದ್ದುವು  ಶೇಖರಿಸಿಟ್ಟಿದ್ದ ಕಬ್ಬಿಣ, ಸಿಮೆಂಟ್ ಎಲ್ಲವೂ ಅರ್ಧ ಬೆಲೆಗೇ ಮಾರಾಟವಾದುವು  ಕೈಗೆ ಬಂದ ಹಣವು ಒಂದೆರಡು ದಿನಗಳಲ್ಲಿಯೇ ನಾಲ್ಕಾರು ದಾರಿಗಳನ್ನು ಹಿಡಿಯುತ್ತಿದ್ದವು  ಹಣವಿರುವವರೆಗೆ ನಾಗರಾಜನಿಗೆ ಮುಂದಿನ ಆಲೋಚನೆ ಬರುತ್ತಿರಲಿಲ್ಲ  ಕೈಲಿದ್ದುದು ಕರಗಿದ ಮೇಲೆ ಅವನು ಹಸಿದ ಹುಲಿಯಂತಾಗುತ್ತಿದ್ದ  ಸುಮಿತ್ರೆಯ ಮೇಲೆ ಕೈಮಾಡುವುದಕ್ಕೂ ಮಿತಿ ಇರುತ್ತಿರಲಿಲ್ಲ  ಶಿಕ್ಷೆ ಸಹಿಸಲಾರದೆ ಸುಮಿತ್ರೆ ತಾನು ಕೂಡಿಟ್ಟಿದ್ದ ಪುಟ್ಟಗಂಟನ್ನು ಗಂಡನ ಕೈಗೆ ಹಾಕಿದಳು  ಹಣವನ್ನು ನಿಸ್ಸಂಕೋಚವಾಗಿ ಸ್ವೀಕರಿಸಿ ಸುಮಿತ್ರೆಯನ್ನು ಅವಾಚ್ಯ ಶಬ್ದಗಳಿಂದ ಬಯ್ದು ತೃಪ್ತಿಗೊಂಡ

ತಾನು ಮೆರೆದ ಊರಿನಲ್ಲೇ ಬರಿಗೈಯಲ್ಲಿ ಭಿಕಾರಿಯಂತೆ ತಿರುಗುವುದು ನಾಗರಾಜನಿಗೆ ಅವಮಾನಕರವೆನಿಸಿತು  ಎಣಿಸಲಸಾಧ್ಯವಾಗುವಷ್ಟು ಸಾಲಗಾರರಿದ್ದರು  ತನ್ನ ನಿಜಸ್ಥಿತಿ ಅರಿತರೆ ಎಲ್ಲಿ ಎಲ್ಲರೂ ತಿರುಗಿಬೀಳುವರೋ ಎಂದು ಹೆದರಿ ಬಹಳ ಎಚ್ಚರಿಕೆಯಿಂದ ವರ್ತಿಸತೊಡಗಿದ

ನಾಗರಾಜನ ನಿಜವಾದ ಬಣ್ಣ ಹೊರಬೀಳಲು ತಡವಾಗಲಿಲ್ಲ  ಸಾಲ ಕೊಟ್ಟವರು ಒಬ್ಬೊಬ್ಬರಾಗಿ ಕೇಳಲಾರಂಭಿಸಿದರು  ನಾಲ್ಕು ದಿನ ಸಬೂಬು ಹೇಳಿಕೊಂಡು ತಿರುಗಲು ಪ್ರಯತ್ನಿಸಿದ  ಕೊಟ್ಟವರು ಅಲ್ಲಿಗೂ ಬಿಡಲಿಲ್ಲ  ತನ್ನ ಬಳಗದ ಜತೆ ಇದ್ದಾಗ ನಾಗರಾಜನನ್ನು ಪ್ರಯತ್ನಪೂರ್ವಕವಾಗಿ

ಹಿಡಿದು, ತನ್ನ ಹಣಕ್ಕಾಗಿ ಪೀಡಿಸುತ್ತಿದ್ದರು ತನ್ನ ನಿಜಸ್ಥಿತಿಯನ್ನೊಪ್ಪಿಕೊಳ್ಳಲು ಸಿದ್ಧನಾಗದೆ, ತೋರಿಕೆಗೆ ಜಂಭದಿಂದ ತಾರೀಖು ಮುಂದೆ ಹಾಕಿದ ಚೆಕ್ ಬರೆದು ರುಜು ಹಾಕಿ ಕೊಟ್ಟುಬಿಡುತ್ತಿದ್ದ ಚೆಕ್ಕುಗಳು ಒಂದೊಂದೂ ವಾಪಸಾಗಲು ಪ್ರಾರಂಭವಾದಾಗ ನಾಗರಾಜ ಇದ್ದ ಒಂದು ಕಾರನ್ನೂ ಗುಟ್ಟಾಗಿ ಮಾರಿ ಬಂದ ಹಣ ಜೇಬಿಗೆ ಹಾಕಿಕೊಂಡು ಹೊರಡಲು ಸಿದ್ಧನಾದ

ತನ್ನ ಸಾಮಾನುಗಳನ್ನೆಲ್ಲಾ ಕಟ್ಟುತ್ತಿದ್ದ ಗಂಡನನ್ನು ಕಂಡು ಸುಮಿತ್ರೆಗೆ ಕುತೂಹಲವಾಯಿತು ಸ್ವಲ್ಪಹೊತ್ತು ನೋಡಿದ ಮೇಲೆ ತಡೆಯಲಾರದೆ ತನ್ನ ಅನುಮಾನ ಪರಿಹರಿಸಿಕೊಳ್ಳಲು ಯತ್ನಿಸಿದಳು

"ಹೊರಟಿರುವುದು ಎಲ್ಲಿಗೇಂದ್ರೆ ?"

ನಾಗರಾಜ ಒನ್ಮೆ ದುರದುರನೆ ನೋಡಿ ತನ್ನ ಕೆಲಸದಲ್ಲಿ ಮಗ್ನನಾದ

ಸುಮಿತ್ರೆ ಧೈರ್ಯಮಾಡಿ ಅವನ ಮುಂದೆ ನಿಂತಳು

"ಎಲ್ಲಿಗೆ ಹೊರಟಿರುವಿರಿ ನನ್ನನ್ನು ಕರೆದುಕೊಂಡು ಹೋಗಿ "

"ಎಷ್ಟೇ ಧೈರ್ಯ ನಿನಗೆ ?" ನಾಗರಾಜ ತನ್ನೆಲ್ಲಾ ಕೋಪವನ್ನೂ ಸುಮಿತ್ರೆಯ ಕಪೋಲಗಳ ಮೇಲೆ ಒತ್ತಿದ

ಕೆನ್ನೆ ಹಿಡಿದುಕೊಂಡು, ಕಂಪಿಸುವ ಧ್ವನಿಯಲ್ಲಿ ಸುಮಿತ್ರೆ ಕೇಳಿದಳು

"ನೀವೇ ಬಿಟ್ಟರೆ ನಾನೆಲ್ಲಿ ಹೋಗಲಿ ?"

"ಸುಡುಗಾಡಿಗೆ ಹೋಗು ನನ್ನನ್ನೇನು ಕೇಳುತ್ತೀ ?"

"ಕೇಳುವ ಅಧಿಕಾರವೂ ನನಗಿಲ್ಲವೇ ?"

"ಇಲ್ಲ "

"ನನ್ನ ಕೈಹಿಡಿದವರು ನೀವಲ್ಲವೇ ?"

"ನಾನು ಯಾರ ಕೈಯನ್ನೂ ಹಿಡಿಯಲಿಲ್ಲ "

"ನಮ್ಮಿಬ್ಬರಿಗೂ ಯಾವ ಸಂಬಂಧವೂ ಇಲ್ಲವೇ ?"

"ಇಲ್ಲ – ಹೊರಟುಹೋಗು "

"ನಾನು ಯಾರ ಹತ್ತಿರ ಹೇಳಿಕೊಳ್ಳಬೇಕು ? ಈ ಸುಖಕ್ಕೇ ನನ್ನನ್ನ ಮದುವೆಯಾದುದು ?"

"ನಿನ್ನ ಪುರಾಣ ಸಾಕು ನಡಿಯಾಚೆ "

"ನಾನು ಹೋಗುವುದಿಲ್ಲ ಈ ದಿನ ನಿಮ್ಮಿಂದ ನನ್ನ ಪ್ರಾಣ ಹೋದರೂ

ಚಿಂತೆಯಿಲ್ಲ ಏನು ಬೇಕಾದರೂ ಮಾಡಿ – ನನ್ನನ್ನು ಸಾಯಿಸಿ ಅನಂತರ ನೀವೆಲ್ಲಿಗೆ ಬೇಕಾದರೂ ಹೊರಡಬಹುದು "

"ನಾನೆಲ್ಲಿಗೆ ಹೊರಟಿರುವೆನೆಂದು ಹೀಗೆ ಹಾರಾಡುತ್ತಿರುವೆ ಸುಮಿತ್ರಾ?"

ಸುಮಿತ್ರ ಒಂದೇ ಕ್ಷಣದಲ್ಲಿ ಭೂಮಿಗಿಳಿದುಹೋದಳು ತಾನು ಭಾವಿಸಿದುದು ಸುಳ್ಳೇ ಎಂದು ವಿಶ್ರಾಂತಿಗೊಳಗಾದಳು ಸುಮಿತ್ರೆಯ ಆಕ್ರೋಶ ದಾರಿಹೋಯಿತು

ಸುಮಿತ್ರೆ ಸುಮ್ಮನೆನಿಂತಳು ನಾಗರಾಜ ನಕ್ಕು ಮುಂದುವರಿಸಿದ

"ನಾನೆಲ್ಲೂ ಹೋಗುವುದಿಲ್ಲ ಸುಮಿತ್ರ ಒಂದು ಹದಿನೈದು ದಿನಗಳು ಮದ್ರಾಸಿಗೆ ಹೋಗಿ ಬರುತ್ತೇನೆ ಸ್ವಲ್ಪ ಕೆಲಸವಿದೆ"

ನಾಗರಾಜ ಮೆಲ್ಲನೆ ಸುಮಿತ್ರೆಯ ಬಳಿ ಸಾರಿ ಅವಳನ್ನು ತನ್ನ ಆಲಿಂಗನದಲ್ಲಿ ಬಂಧಿಸಿದ ಸುಮಿತ್ರೆಗೆ ಸ್ವರ್ಗವೇ ಧರೆಗಿಳಿದು ಬಂದಿದ್ದಿತು

ಹೊಂಬೆಳಕನ್ನು ನೋಡಲಾರದೆ ಸುಮಿತ್ರೆ ಕಣ್ಣುಮುಚ್ಚಿದಳು ಒಂದೇ ಕ್ಷಣದಲ್ಲಿ ನಾಗರಾಜ ಸುಮಿತ್ರೆಯನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿದ್ದ

ತಾನು ಪಡೆದ ಸುಖದಿಂದ ಸುಮಿತ್ರೆಗೆ ಮಹದಾನಂದವಾಯಿತು ಹಿಂದೆ ನಡೆದುದೆಲ್ಲವೂ ಮಿಥ್ಯ – ತನ್ನ ಕಣ್ಣುಮುಂದಿರುವುದೇ ಸತ್ಯವೆಂದು ಸುಮಿತ್ರೆ ನಂಬಿ ತನ್ನನ್ನೇ ವಂಚಿಸಿಕೊಂಡಳು

"ಸುಮಿತ್ರ ನಾನು ನಿನಗೆ ಅನ್ಯಾಯ ಮಾಡಿದ್ದೇನೆ – ಕ್ಷಮಿಸು ನಿನ್ನ ಶೀಲವೇ ನನ್ನನ್ನು ಕಾಪಾಡಬೇಕು ಈ ಬಾರಿ ಒಂದು ದೊಡ್ಡ ಕೆಲಸಕ್ಕಾಗಿ ಹೋಗುತ್ತಿರುವೆನು ಅದರಲ್ಲಿ ಜಯ ಸಿಕ್ಕಿದರೆ ಮರು ರೈಲಿಗೇ ನಾವಿಬ್ಬರೂ ಮದ್ರಾಸಿಗೇ ಹೊರಟುಬಿಡೋಣ ಇಲ್ಲಿ ನಡೆದುದೆಲ್ಲವೂ ಒಂದು ಕೆಟ್ಟ ಸ್ವಪ್ನವೆಂದು ಮರೆತು ಅಲ್ಲಿ ಸುಖಜೀವನ ನಡೆಸೋಣ"

ಸುಮಿತ್ರೆ ನಕ್ಕಳು

ಜೇಬಿನಿಂದ ಹತ್ತರ ಐದು ನೋಟನ್ನೆಳೆದು ನಾಗರಾಜ ಸುಮಿತ್ರೆಯ ಕೈಗಿತ್ತ

"ಸದ್ಯದ ಖರ್ಚಿಗಿಟ್ಟುಕೋ ಸುಮಿತ್ರಾ ಪುನಃ ಕಳಿಸುವ ಏರ್ಪಾಡು ಮಾಡುತ್ತೇನೆ"

*

"ಹಾಲು – ಮೊಸರಿನವರಿಗೂ ಮೂರು ತಿಂಗಳಿಂದ ಕೊಟ್ಟಿಲ್ಲ ಅವರಿಗೇನು ಉತ್ತರ ಹೇಳಲಿ ?"

ನಾಗರಾಜ ಪುನಃ ಐವತ್ತು ರೂಪಾಯಿ ತೆಗೆದಿತ್ತು,

"ಸದ್ಯಕ್ಕೆ ಅಲ್ಪಸ್ವಲ್ಪ ತೀರಿಸಿರು–ನಾನು ಬಂದನಂತರ ನೋಡೋಣ"

"ನೀವು ಬರುವುದು ಯಾವಾಗ ?"

"ಒಂದೆರಡು ವಾರದಲ್ಲೇ ಬರುತ್ತೇನೆ ಬರುವುದಾದರೆ ನನ್ನ ಜತೆ ಬಾ ನಿಮ್ಮಪ್ಪನ ಮನೆಯಲ್ಲಿ ಬಿಟ್ಟು ಹೋಗುತ್ತೇನೆ"

"ಬೇಡಿ ನಾನಿಲ್ಲೇ ಇರುತ್ತೇನೆ"

"ನಿನ್ನಿಷ್ಟ"

"ನಾನಿನ್ನು ಹೊರಡಲೇ ? ರೈಲಿಗೆ ಹೊತ್ತಾಯ್ತು"

ಸುಮಿತ್ರೆ ಗಂಡನಿಗೆ ನಮಸ್ಕರಿಸಿದಳು ನಾಗರಾಜ ನಗುತ್ತಾ ಕೇಳಿದ

"ಏನು ಮಾಡಿದೆ ಸುಮಿತ್ರಾ ?"

"ಇದೇ ಸೌಭಾಗ್ಯ ಉಳಿಯಲೆಂದು ಹರಸಿ"

ಸುಮಿತ್ರೆಯ ತೊಳಲಿಕೆ ಕಂಡು ನಾಗರಾಜ ಮನದಲ್ಲೇ ನಕ್ಕು, ಹೊರಟ

ಗಂಡ ಕಣ್ಮರೆಯಾಗುವವರೆಗೂ ನೋಡುತ್ತಿದ್ದು, ಸುಮಿತ್ರೆ ಕಣ್ಣೊರೆಸಿ ಕೊಂಡು ಒಳಗೆ ಬಂದಳು

ಸುಮಿತ್ರೆಗೆ ನವಚೇತನ ಬಂದಂತಾಗಿದ್ದಿತು ನಾಗರಾಜನ ಒಂದೊಂದು ಮಾತುಗಳೂ ಅವಳ ಕಿವಿಯಲ್ಲಿ ಝೇಂಕರಿಸುತ್ತಿದ್ದುವು ಹೃದಯ ತುಂಬಿ ಬಂದ ಸಂತಸದಿಂದ ಅವಳು ಹಿಗ್ಗಿದಳು

ಕೆಲಸಕ್ಕೆ ಬಂದ ಲಕ್ಕವ್ವ ಸುಮಿತ್ರೆಯಲ್ಲಾಗಿದ್ದ ಮಾರ್ಪಾಟು ಕಂಡು ದಿಗ್ಭ್ರಾಂತಳಾದಳು

ಸುಮಿತ್ರೆ ಕಾತರದಿಂದ ದಿನಗಳನ್ನೆಣಿಸುತ್ತಿದ್ದಳು ಅವಳಿಗೀಗ ಕ್ಷಣವೂ ಯುಗವಾಗಿ ತೋರಿತು ದಿನವೂ ಬೆಳಗ್ಗೆ – ಸಾಯಂಕಾಲ ಕಾಗದ ಕ್ಕಾಗಿ ನಿರೀಕ್ಷಿಸಿ ನೋತು ಹಣ್ಣಾಗುತ್ತಿದ್ದಳೇ ವಿನಃ ಯಾವ ಕಾಗದವೂ ಬರಲಿಲ್ಲ. ನಿರಾಶೆಯಿಂದ ಕ್ಷಣಕಾಲ ಕುಗ್ಗಿದ ಮನಸ್ಸು ದೂರದ ಬೆಳಕನ್ನರ ಸುತ್ತಿದ್ದಿತು

'ಕೆಲಸದ ಅವಾಂತರದಲ್ಲಿ ಬರೆದಿರಲಾರರು ನಾಳೆ ಬಂದೀತು' ಎಂದು ತನಗೇ ಸಮಾಧಾನಹೇಳಿಕೊಳ್ಳಲೆತ್ನಿಸುತ್ತಿದ್ದಳು

ಮಾತುಮಾತಿಗೂ ಸುಮಿತ್ರೆ ತನ್ನ ಗಂಡನ ಸುದ್ದಿ ಸೇರಿಸದಿರುತ್ತಿರಲಿಲ್ಲ ಲಕ್ಕವ್ವ ಸುಮಿತ್ರೆಯ ಮಾತುಗಳನ್ನು ಅತ್ಯುತ್ಸಾಹದಿಂದ ಕೇಳುವವಳಂತೇ ನಟಿಸುತ್ತಿದ್ದಳು

ಸುಮಿತ್ರೆಯ ವಾಗ್ಝರಿಗೆ ಅಂತ್ಯವೇ ಇರುತ್ತಿರಲಿಲ್ಲ

ಲಕ್ಕವ್ವನಿಗೆ ಸ್ವಲ್ಪಹೊತ್ತಿನ ತರುವಾಯ ಭಯವಾಗುತ್ತಿದ್ದಿತು. ಸುಮಿತ್ರೆಯ ಮೇರೆವರಿಯದ ಉತ್ಸಾಹ ಕಂಡ ಲಕ್ಕವ್ವ ತಲ್ಲಣಿಸಹತ್ತಿದಳು ಸುಮಿತ್ರೆಯ ಅಭಿಮಾನ – ನಾಗರಾಜನ ನಿರುತ್ಸಾಹ, ನಿಜವಾಗಿ ಈ ಹೆಣ್ಣು ಯೋಚಿಸುವಷ್ಟು ಒಳ್ಳೆಯತನ ಆ ರಾಕ್ಷಸನಲ್ಲಿದೆಯೇ? ನಾಳೆ ನಿರಾಶೆಯ ಹೆಬ್ಬಾಗಿಲೇ ಸುಮಿತ್ರೆಯ ಪಾಲಿಗೆ ತೆರೆದರೆ ಈ ಅನುಭವ ತಡೆದುಕೊಳ್ಳುವ ಶಕ್ತಿ ಅವಳಿಗಿದೆಯೇ? ಲಕ್ಕವ್ವ ಯೋಚಿಸಿ ಕಂಗೆಡುತ್ತಿದ್ದಳು ಸುಮಿತ್ರೆಯ ಆಶಾತಂತುವನ್ನು ಕಡಿಯಲು ಅವಳಿಗೆ ಮನಸ್ಸು ಬರುತ್ತಿರಲಿಲ್ಲ

ಸುಮಿತ್ರೆ ಹೇಳುವುದನ್ನು ಸಹನೆಯಿಂದ ಕೇಳಿ ನಾಗರಾಜನ ಗುಣಕ್ಕೆ ತಲೆದೂಗುತ್ತಿದ್ದಳು

"ಬುಮ್ಯೋರ್ನ್ನ ಕಂಡ್ರೆ ನಿಮಗೆ ಏಸು ಪಿರೀತಿ ಕಣ್ರವ್ವಾ"

ಸುಮಿತ್ರೆ ನಾಚಿ ಕುಗ್ಗುತ್ತಿದ್ದಳು

ತನ್ನ ಗಂಡನ ಬಗ್ಗೆ ಬರಬಹುದಾದ ಒಂದು ಅಪಶಬ್ದವನ್ನೂ ಸುಮಿತ್ರೆ ಕೇಳಲಾರದವಳಾಗಿದ್ದಳು

ಸದಾಕಾಲ ಗಂಡನ ಧ್ಯಾನಮಾಡುತ್ತಿದ್ದ ಸುಮಿತ್ರೆಯನ್ನು ನೋಡಿ ಲಕ್ಕವ್ವ

"ನಾಳೆ ಖಂಡಿತಾ ಬತ್ತಾರೆ ಕಣ್ರವ್ವಾ – ಯೋಸ್ನೆ ಮಾಡಬ್ಯಾಡಿ" ಎಂದು ಧೈರ್ಯ ಹೇಳುತ್ತಿದ್ದಳು

ತಾನು ಕಂಡ ಸುಖಸ್ವಪ್ನವನ್ನು ಪುನಃ ಪುನಃ ಸ್ಮರಿಸಿಕೊಳ್ಳುತ್ತಾ ಸುಮಿತ್ರೆ ದಿವಸಗಳನ್ನು ಕಳೆಯುತ್ತಿದ್ದಳು

ಸುಮಿತ್ರೆ ಕಟ್ಟಿದ ಆಶಾಗೋಪುರ ಕಡಿದು ಬೀಳುವ ದಿವಸಗಳೂ ಸಮಾಪಿಸುತ್ತಿದ್ದವು ಸಾಲಗಾರರು ಒಬ್ಬೊಬ್ಬರಾಗಿ ಮನೆಯನ್ನು ಮುತ್ತ

ಲಾರಂಭಿಸಿದರು ಸಮುತ್ತರ ಕೊಟ್ಟು ಅವರುಗಳನ್ನು ಸಾಗಹಾಕುವುದರಲ್ಲಿ ಲಕ್ಕವ್ವನಿಗೆ ಸಾಕುಸಾಕಾಗುತ್ತಿದ್ದಿತು ತನ್ನ ಗಂಡ ಸಾಲಗಾರನಾಗಿ ಊರು ಬಿಟ್ಟು ಹೊರಟಿರುವ ಸ್ಥಿತಿ ತಿಳಿಯಲು ಸುಮಿತ್ರೆಗೂ ತಡವಾಗಲಿಲ್ಲ ಮೊದಲು ಗಲಾಟೆ ಮಾಡದೇ ಹಿಂತಿರುಗುತ್ತಿದ್ದವರು, ಈಗ ತಮ್ಮ ಶಕ್ತಿ ಪ್ರದರ್ಶಿಸತೊಡಗಿದರು

ಸುಮಿತ್ರೆಗೆ ಬದುಕಿಯೂ ಸತ್ತಂತಾಯಿತು ಅನ್ನಾಹಾರಗಳನ್ನೂ ಬಿಟ್ಟು ಕುಳಿತರೆ ದಿನಗಟ್ಟಳೆ ಕೂಡುತ್ತಿದ್ದಳು ಯಾರೊಡನೆಯೂ ಮಾತಿಲ್ಲ-ಕಥೆಯಿಲ್ಲ

ಮನೆಯ ಸನ್ನಿವೇಶ ಕಂಡು ಲಕ್ಕವ್ವ ಕೈ ಕೈ ಹಿಸುಕಿಕೊಂಡಳು ತಾನು ಯಾವ ರೀತಿಯಲ್ಲಿ ಸಹಾಯಮಾಡಬಹುದೆಂದು ಯೋಚಿಸಿ ಕೊರಗಿದಳು ಸುಮಿತ್ರೆಯ ಮುಂದೆ ಕುಳಿತು ಲಕ್ಕವ್ವ ಗಂಟೆಗಟ್ಟಲೆ ಒದರುತ್ತಿದ್ದಳು

"ನಿಮ್ಮ ಮೇಡಂ ಬಂದರೆ ಕರೆತರಲೇನ್ರವ್ವಾ ?"

"ಬೇಡ ಲಕ್ಕಿ ನೀನು ಸುಮ್ಮನಿರು "

"ನೀವು ಒಂಟಿಯಾಗಿ ಇಂಗೆ ಕೊರಗಿದರೆ ಏನ್ರವ್ವಾ ಗತಿ ? ಓಗ್ಲಿ ತಂದೆಯವರಿಗೆ ಕಾಗಜಾನಾದ್ರೂ ಆಕಿಸಿ "

"  "

"ನಾನೇ ಏಳಿ ಬರೆಸಾಕ್ಲೇನ್ರವ್ವಾ ?"

"ನಿನಗ್ಯಾಕೆ ನನ್ನ ಸಂಸಾರದ ವಿಷಯ ? ಬಾಯಿಮುಚ್ಚಿಕೊಂಡಿರು "

ಲಕ್ಕವ್ವ ನಿರುಪಾಯಳಾಗಿ ಸುಮ್ಮನಾಗಬೇಕಾಗುತ್ತಿದ್ದಿತು

ಸುಮಿತ್ರ ಇದ್ದಕ್ಕಿರುವಂತೆಯೇ ಬಾಯಿಬಿಟ್ಟಳು

"ಲಕ್ಕೀ ಇನ್ನು ಮೇಲೆ ನೀನು ಕೆಲಸಕ್ಕೆ ಬರಬೇಡ "

"ಯಾಕ್ರವ್ವಾ ? – ನಾನೇನ್ಮಾಡ್ದೇ ?"

"ನಿನಗೆ ಹೋದ ತಿಂಗಳಿನ ಸಂಬಳವೂ ಕೊಟ್ಟಿಲ್ಲ ಇರುವಷ್ಟನ್ನು ಈಗ ಕೊಡುತ್ತೇನೆ ಸುಮ್ಮನೆ ನಿನ್ನ ಋಣ ಹೊರೆಸಬೇಡ – ಬೇರೆಲ್ಲಾದರೂ ಕೆಲಸ ಹುಡುಕು "

"ಈ ಸ್ಥಿತೀಲಿ ನಿಮ್ಮನ್ನ ಬಿಟ್ಟು ನಾ ಎಂಗ್ರವ್ವಾ ಓಗ್ಲಿ? ಆಳು ದುಡ್ಡು

ಓದರೆ ಓಗ್ಲಿ ನಾನಂತೂ ನಿಮ್ಮ ಅಟ್ಟಬಿಡಾಕಿಲ್ಲಾ" ಎಂದು ಖಂಡಿತ ವಾಗಿ ಹೇಳಿದಳು

ದಿನದಿನಕ್ಕೆ ಸುಮಿತ್ರೆಯ ಸ್ಥಿತಿ ಚಿಂತಾಜನಕವಾಗುತ್ತಿದ್ದಿತು. ಮಂಜುಳೆ ಹಣ ಕಳುಹಿಸುತ್ತಿದ್ದರೂ ಸುಮಿತ್ರೆ ಅದನ್ನು ಮುಟ್ಟುತ್ತಿರಲಿಲ್ಲ. ಲಕ್ಕವ್ವನಿಗೂ ಹಣ ಎಲ್ಲಿಂದ ಬಂತೆಂಬುದನ್ನು ತಿಳಿಸಲು ಸಮಸ್ಯೆಯಾಗಿ ದ್ದಿತು ಮೊದಲಾದರೆ ಗಂಡನೇ ಕಳುಹಿಸಿರುವನೆಂದು ಸುಮಿತ್ರೆ ನಂಬುವ ಅವಕಾಶವಾದರೂ ಉಳಿದಿದ್ದಿತು ಈಗ ಆ ಮಾರ್ಗವೂ ಉಳಿದಿರಲಿಲ್ಲ

"ಹಣ ಎಲ್ಲಿಂದ ಬಂತೇ ಲಕ್ಕಿ ?"

"ಮೇಡಂ ತಾವ ಒಸಿ ತಗೊಂಡು ಬಂದೆ ಕಣ್ರವ್ವಾ ಸದ್ಯಕ್ಕೆ ಉಪಯೋಗಿಸ್ಕೊಂಡಿರಿ ಮುಂದಕ್ಕೆ ನೋಡೋಣ"

"ಅವರು ಯಾಕೆ ನನಗೆ ಹಣಕೊಡ್ತಾರೆ ?"

"ನಿಮ್ಮ ಕಸ್ಟ ಏಳ್ದೆ ತಾಯಿ ಕೊಟ್ಟರು"

"ನನಗೇ ಇಲ್ಲದ ತಾಪತ್ರಯ ನಿನಗ್ಯಾಕೆ ? ಸುಮ್ಮನೆ ಅವರಿಗೇ ಹಿಂತಿರುಗಿಸಿ ಹಣದ ಅಗತ್ಯ ನನಗಿಲ್ಲ"

"ಚೆನ್ನಾಗಿ ಯೋಸ್ನೆಮಾಡಿ ತಾಯಿ ದುಡುಕಿ ನಿಸ್ಟೂರ ಯಾಕ ಕಟ್ಕೋತಿರಿ ?"

"ಹೇಳಿದಷ್ಟು ಮಾಡೆ ಅಂದ್ರೆ ಏನೋ ಹರಟುತ್ತಾಳೆ"

ಸುಮಿತ್ರೆಯ ಆಜ್ಞೆಯಂತೇ ಲಕ್ಕವ್ವ ಹಣವನ್ನು ಹಿಂತಿರುಗಿಸಿದಳು ಮಂಜುಳೆ ಅದೇ ಸಂಜೆ ಸುಮಿತ್ರೆಯನ್ನು ಬಂದು ಕಂಡಳು

ತನ್ನಮೇಲೆ ಬಿದ್ದ ಭಾರವನ್ನು ತಡೆಯಲಾರದೇ ಸುಮಿತ್ರೆ ಬಾಡಿದ್ದಳು ಕೆಲವೇ ದಿನಗಳಲ್ಲಿ ಅವಳಿಗೆ ಮುಪ್ಪಡರಿ ಬಂದಿದ್ದಿತು ಚಿಂತೆಯ ಫಲವಾಗಿ ಅಲ್ಲಲ್ಲಿ ಒಂದೊಂದು ಬಿಳಿಯ ಕೂದಲುಗಳೂ ಕಂಡುಬಂದಿತ್ತು ಸುಮಿತ್ರೆ ಯೋಚನೆಯಲ್ಲಿ ತಲ್ಲೀನಳಾದಳೆಂದರೆ ಹಗಲು ರಾತ್ರಿಯ ಪರಿವೆಯೂ ಇರುತ್ತಿರಲಿಲ್ಲ ಯೋಚಿಸಿ ಬೆಂಡಾಗುತ್ತಿದ್ದಳೇ ವಿನಾ ಅವಳ ಸಮಸ್ಯೆಗಳು ಬಗೆಹರಿಯುತ್ತಿರಲಿಲ್ಲ

ಸುಮಿತ್ರೆಯ ಸ್ಥಿತಿಕಂಡು ಮಂಜುಳೆ ದುಃಖತಪ್ತಳಾದಳು ಅವಳಿಗೆ ತಾನು ಯಾವವಿಧದಲ್ಲಿ ಸಮಾಧಾನಹೇಳಬೇಕೆಂಬುದೂ ಮಂಜುಳೆಗೆ ತಿಳಿಯ

ಲಿಲ್ಲ ಆತ್ಮೀಯಬಂಧುವನ್ನು ಕಂಡ ಸುಮಿತ್ರೆಗೂ ಹೃದಯ ಬಿರಿಯಿತು ದುಃಖದಕೋಡಿಹರಿಸಿ ಹಾಗೆಯೇ ಸಮಾಧಾನ ತಂದುಕೊಂಡಳು

ಎಷ್ಟೋ ಹೊತ್ತಿನ ತರುವಾಯ ಮಂಜುಳೆ ಮೆಲ್ಲನೆ ಪ್ರಾರಂಭಿಸಿದಳು

"ಸುಮಾ ನೀನೀಗ ಹಟ ಮಾಡಬಾರದು"

" "

"ನೀನು ಹೇಗಾಗುತ್ತಿರುವೆ ಬಲ್ಲೆಯಾ ?"

" "

"ಆತ್ಮಹತ್ಯೆಗೆ ಮನಕೊಟ್ಟಿರುವೆಯಾ ಸುಮಿತ್ರ ?"

" "

"ಹೇಳು ಸುಮಿತ್ರ ನಿನ್ನ ಗಂಡ ಬರುವರೆಂಬ ನಂಬಿಕೆ ನಿನಗುಳಿದಿಲ್ಲವೇ" ಹೌದೆನ್ನುವಂತೆ ಸುಮಿತ್ರೆ ತಲೆಯಲ್ಲಾಡಿಸುತ್ತಿದ್ದಳು

"ನೀನು ಹೀಗೆ ದೇಹ ದಂಡಿಸಿ ಸಾಯಲು ಹವಣಿಸಿದರೆ, ನಿನ್ನ ಗಂಡನಿಗೆ ನಾವೇನು ಉತ್ತರ ಹೇಳಬೇಕು ಸುಮಿತ್ರಾ?"

" "

"ನಮ್ಮನ್ನೆಲ್ಲಾ ಅವರು ದೂರುವುದಿಲ್ಲವೇ ?"

ಸುಮಿತ್ರ ಶೂನ್ಯ ದೃಷ್ಟಿಬೀರಿ ಕುಳಿತಿದ್ದಳು ಮಂಜುಳೆ ಅವಳನ್ನಲ್ಲಾಡಿಸಿ, "ಒಬ್ಬಳೇ ಇದ್ದರ ನಿನಗೂ ಯೋಚನೆಗಳು ಅಧಿಕವಾಗುತ್ತದೆ ಈ ಸಮಯದಲ್ಲಿ ನಾಲ್ಕು ಜನದ ಜತೆ ಇದ್ದರೆ ನಿನ್ನ ದುಃಖ ಸ್ವಲ್ಪವಾದರೂ ಉಪಶಮನವಾದೀತು"

" "

"ಏನಾದರೂ ಹೇಳು ಸುಮಿತ್ರ"

ಸುಮಿತ್ರೆ ಬೇಸರದಿಂದ ಮುಖವನ್ನತ್ತ ತಿರುಗಿಸುತ್ತಿದ್ದಳು

"ನಿನ್ನ ತಂದೆಗಾದರೂ ವಿಷಯ ತಿಳಿಸಲೇ ಸುಮಿತ್ರ ಇಲ್ಲಿ ಒಬ್ಬಳೇ ಕಷ್ಟಪಡುವುದಕ್ಕಿಂತಾ ತೌರುಮನೆಯಲ್ಲಿರುವುದು ಎಷ್ಟೋ ಒಳಿತು"

ಮಂಜುಳೆ ಕಾಗದ ಬರೆಯಲು ಎದ್ದಳು ಸುಮಿತ್ರೆ ಅವಳನ್ನು ಹಿಡಿದು ಎಳೆಯುತ್ತಾ,

“ಬೇಡಿ ಮೇಡಂ ನನ್ನ ಸ್ಥಿತಿ ತಿಳಿಸಿದರೆ ತಂದೆ ತುಂಬಾ ನೊಂದು ಕೊಳ್ಳುತ್ತಾರೆ”

“ನೀನು ಹೇಳುವುದೂ ಚೆನ್ನಾಗಿದೆ”

“ತಂದೆ ಬಂದರೂ ನಾನವರ ಜತೆ ಹೋಗುವುದಿಲ್ಲ—ಅವರು ನನ್ನನ್ನು ಇಲ್ಲಿ ಬಿಟ್ಟು ಹೋದರು ಇಲ್ಲೇ ಬರುವವರೆಗೂ ಕಾಯುತ್ತೇನೆ”

“ಈ ಹಟದಿಂದೇನೂ ಪ್ರಯೋಜನವಿಲ್ಲಾ ಸುಮಿತ್ರಾ”

ಮಂಜುಳೆಯ ಮಾತು ಸುಮಿತ್ರೆಯ ಕಿವಿ ಮುಚ್ಚುತ್ತಿರಲಿಲ್ಲ

ಲಕ್ಕಪ್ಪ ಮನೆಯ ಸ್ಥಿತಿಯನ್ನು ಗುಟ್ಟಾಗಿ ವರ್ಣಿಸಿದಳು

ಸುಮಿತ್ರೆಗೆ ತಿಳಿಯದಂತೆ ಮಂಜುಳ ಅವಳ ಸ್ಥಿತಿಯನ್ನರುಹಿ ನರಸಿಂಹಯ್ಯನಿಗೊಂದು ಕಾಗದ ಬರವು ಹಾಕಿದಳು

## ೪೨

ಮಂಜುಳೆಯ ಕಾಗದ ತಲುಪಿದ ದಿನ ಮನೆಯಲ್ಲಿ ಒಂದು ದೊಡ್ಡ ರಾಮಾಯಣವೇ ನಡೆದುಹೋಯಿತು

ಗಂಡ ಮನೆಯಲ್ಲಿಲ್ಲದಾಗ ಬಂದ ಕಾಗದವನ್ನು ಒಡೆದು ನೋಡಿದ ರಾಜಮ್ಮ ಕೆಣಕಿದ ಫಣಿಯಂತಾದಳು

"ಇನ್ನೂ ಈ ಹಾಳು ಸಂಬಂಧ ತಪ್ಪಿಲ್ಲ. ಯಾವ ಜನ್ಮದ ಕರ್ಮ ನನಗೆ ಗಂಟಾಯಿತು ?" ಎಂದು ಮಂಜುಳೆ, ಸುಮಿತ್ರ ಇಬ್ಬರಿಗೂ ಹಿಡಿ ಶಾಪ ಹಾಕಿದಳು

ಮನೆಗೆ ಬಂದ ನರಸಿಂಹಯ್ಯ ಸುಮಿತ್ರೆಯ ಕಾಗದ ಓದಿ ತಲೆಯ ಮೇಲೆ ಕೈಹೊತ್ತು ಕುಳಿತ

"ಕೊನೆಗೂ ಸುಮಿತ್ರೆಯ ಬಾಳು ಈ ರೀತಿಯಾಯಿತೇ ?" ಎಂದು ಮನದಲ್ಲೇ ಕೊರಗಹತ್ತಿದ

ರಾಜಮ್ಮ ಮೆಲ್ಲನೆ ಗಂಡನನ್ನು, ಪ್ರಶ್ನಿಸಿದಳು

"ಏನು ಮಾಡಬೇಕೆಂದಿರುವಿರಿ ?"

ನರಸಿಂಹಯ ಉತ್ತರ ಕೊಡಲಿಲ್ಲ

ರಾಜಮ್ಮನೂ ಗಂಡನನ್ನೆ ದಿಟ್ಟಿಸುತ್ತಾ ಕುಳಿತಳು ಉತ್ತರ ಸ್ಪಷ್ಟ ವಾಗಿದ್ದರೂ ಗಂಡನ ಬಾಯಿಂದಲೇ ಕೇಳಬೇಕೆಂಬ ಕುತೂಹಲ ಅವಳಲ್ಲಿ ಅಧಿಕವಾಗಿದ್ದಿತು.

ಎಷ್ಟೋ ಹೊತ್ತಿನಮೇಲೆ ನರಸಿಂಹಯ್ಯ ಬಾಯಿತೆರೆದ

"ನಾನು ರಾತ್ರಿಯ ರೈಲಿಗೆ ಹೊರಡುತ್ತೇನೆ."

"ಜತೆಯಲ್ಲಿ ಕರೆದುಕೊಂಡು ಬರುವಿರಾ ?"

"ಹೂಂ ಅವನಂತೂ ಮುರ್ರಾಳ ಕೆಲಸಮಾಡಿವನೆಂದರೆ, ನಾವೂ ಕೈಬಿಡಲು ಸಾಧ್ಯವೇ ?"

"ಅಳಿಯಂದಿರು ಒಳ್ಳೆಯವರೂಂತ್ರೆ"

"ಅವನ ಒಳ್ಳೆಯತನ ಈಗ ಹೊರಬಿತ್ತಲ್ಲಾ—ಅಯೋಗ್ಯ-ಅರಿಯದೆ ನಾನು ತಪ್ಪುಮಾಡಿದ ನಾನು ಮಾಡಿದುದರ ಪರಿಣಾಮ ಆ ಹುಡುಗಿಯ ತಲೆಯಮೇಲೆ ಬಿದ್ದಿತು"

"ಹಾಗೆ ಹೋಗಬೇಕಾದರೆ ಏನಾದರೂ ಕಾರಣವಿರಬೇಕು ?"

"ಕಾರಣವೇನು ? ತಿಳಿದೇ ಇದೆ ಕೈಯಲ್ಲಿ ಕಾಸಿಲ್ಲ-ಸಂಸಾರ ಬೇಡ ವಾಗಿದೆ"

"ಅಷ್ಟು ದರ್ಪಮಾಡುತ್ತಿದ್ದವರಿಗೇನು ದರಿದ್ರ ಬರುತ್ತದೆ ಇವಳೇ ಗಂಡನ ಮನಸ್ಸು ಕೆಡಿಸಿದ್ದಾಳೆ"

ನರಸಿಂಹಯ್ಯ ಹೆಂಡತಿಯ ಮಾತಿಗೆ ಉತ್ತರ ಕೊಡುವ ಹವ್ಯಾಸಕ್ಕೆ ಹೋಗಲಿಲ್ಲ

"ಈಗ ಮೂರು ನಾಲ್ಕು ತಿಂಗಳು ಹಾಗೆ ಹೇಗೆ ಜರುಗುತ್ತಿದ್ದಿತಂತೆ ? ಅದನ್ನು ಸರಿಯಾಗಿ ವಿಚಾರಿಸಿ"

ನರಸಿಂಹಯ್ಯ ತಾಳ್ಮೆತಪ್ಪಿತು

"ಏನು ?—ಸುಮಿತ್ರೆಯ ಶೀಲ ಶಂಕಿಸುತ್ತಿದ್ದೀಯಾ ?"

"ನಮ್ಮ ಪದಾರ್ಥವಾದರೇನು ? ತಪ್ಪುಕಂಡಲ್ಲಿ ಶಿಕ್ಷಿಸಲೇ ಬೇಕು"

"ಸುಮಿತ್ರೆಯಲ್ಲಿ ಯಾವ ತಪ್ಪು ಕಂಡಿರುವೆಯೋ ?"

"ಅವಳ ಸಹವಾಸ ಸ್ವಲ್ಪವೂ ಚೆನ್ನಿಲ್ಲಾಂದ್ರೆ ಆ ಮಂಜುಳೆ ಯೋಗ್ಯತೆಯೇನು ? ಇವಳದೇನು ? ಇಂತಹವರ ಸಹವಾಸ ಮಾಡಿದರೆ ಯಾವನು ಸುಮ್ಮನಿರುತ್ತಾನೆ ಇವಳ ಬುದ್ಧಿ ಕಂಡೇ ಅವನು ಬಿಟ್ಟುಹೋದ"

"ಮುಚ್ಚೆ ಬಾಯಿ."

"ಇವಳಿಂದ ನಾವೆಷ್ಟು ಮಾತು ಕೇಳಬೇಕಾಗಿ ಬರುವುದೋ" ಎಂದು ರಾಜಮ್ಮ ತನ್ನ ಸ್ಥಿತಿಗೆ ವಿಷಾದಿಸಿದಳು

"ನೀನು ಸುಮಿತ್ರೆಗೆ ತಾಯಲ್ಲ ನರ ರಾಕ್ಷಸಿ – ಅವಳಿಗೆ ಶತ್ರುವಾಗಿ ನೀನು ಈ ಮನೆಗೆ ಕಾಲಿಟ್ಟಿರುವೆ"

ನರಸಿಂಹಯ್ಯ ಕೂಗಾಡಿ ಸುಮ್ಮನಾದ

ರಂಗಮ್ಮ ಅಳಿಯನಿಗೆ, "ಅವಳ ಮಾತು ಕಟ್ಟಿಕೊಂಡೇನು ? ನಿಮ್ಮ ಪಾಡಿಗೆ ಹೋಗಿ ಹುಡುಗಿಯನ್ನು ಕರೆತನ್ನಿ, ನೀವು ಸುಮಿತ್ರೆಯ ಕೈಬಿಟ್ಟರೆ ಆ ಹುಡುಗಿಯ ಗತಿಯೇನು ಯಾರ ತಪ್ಪಿಗೆ ಯಾರು ಶಿಕ್ಷೆ ಅನುಭವಿಸ ಬೇಕಾಗಿದೆ ?" ಎಂದು ಹೇಳಿದರು

ತನಗೆ ಒತ್ತಾಸೆ ಕೊಡಲು ಯಾರೂ ಇಲ್ಲವೆಂದು ಭಾವಿಸಿದ ರಾಜಮ್ಮ ದೊಡ್ಡ ಧ್ವನಿಯಲ್ಲಿ ಅತ್ತು,

"ಆ ಮನೆಹಾಳು ರಂಡೆ ನನ್ನ ಮನೆಗೆ ಕಾಲಿದಲಿ ಕೂಡಲೆ ಹೋಗಿ ನಾನು ಭಾವಿಗೆ ಹಾರುತ್ತೇನೆ" ಎಂದು ಹೆದರಿಸಿದಳು

"ಈಗಲೇ ಆ ಕೆಲಸ ಮಾಡೇ – ನಿನ್ನಂತಹ ಪಿಶಾಚಿ ಇರುವುದಕ್ಕಿಂತಾ ಸಾಯುವುದು ಮೇಲು"

ರಂಗಮ್ಮ ಮಗಳ ಬೆದರಿಕೆಗೆ ಸೊಪ್ಪು ಹಾಕದೆ ಹೇಳಿದರು

ನರಸಿಂಹಯ್ಯ ರಾತ್ರಿಯ ಗಾಡಿಗೇ ಮೈಸೂರಿಗೆ ಹೊರಟ

ತಂದೆಯನ್ನು ನೋಡಿದ ಸುಮಿತ್ರೆ ಮುಖ ಮುಚ್ಚಿಕೊಂಡು ಅಳಲು ಪ್ರಾರಂಭಿಸಿದಳು ಮಗಳ ಸ್ಥಿತಿ ಕಂಡು ನರಸಿಂಹಯ್ಯನಿಗೆ ಅತೀವ ವೇದನೆ ಯಾಯಿತು ದುಃಖಿತಪ್ತನಾದ ಅವನ ಬಳಿಗೆ ಮಾತುಗಳೂ ಸುಳಿಯ ದಂತಾಯಿತು ಹೋಟಲಿನಿಂದ ಕಾಫಿ, ತಿಂಡಿ ತಂದು ಮಗಳಿಗಿತ್ತು ತಾನೂ ತಿಂದ ಶಾಸ್ತ್ರಮಾಡಿದ

"ಸುಮಿತ್ರಾ ಇಷ್ಟು ದಿನಗಳೂ ಯಾಕಮ್ಮಾ ವಿಷಯ ತಿಳಿಸಲಿಲ್ಲ"

" . "

"ನನ್ನ ಜತೆ ಹೊರಡು ಸುಮಿತ್ರಾ"

"ನಾನೆಲ್ಲಿಗೂ ಬರಲಾರೆ ಅಣ್ಣಾ ಸುಮ್ಮನೆ ಪೀಡಿಸಬೇಡಿ"

"ಇನ್ನೆಲ್ಲಿಗೆ ಹೋಗಬೇಕೆಂದಿರುವೆ ಸುಮಿತ್ರಾ"

"ಅಣ್ಣಾ ನನ್ನನ್ನೂ ಮದ್ರಾಸಿಗೆ ಕರೆದುಕೊಂಡು ಹೋಗಿ ನಾನಲ್ಲಿ ಅವರ ಜೊತೆಯೇ ಇರುತ್ತೇನೆ"

"ಅಡ್ರೆಸ್ ಕೊಟ್ಟಿರುವರೇ ?"

ಸುಮಿತ್ರೆ ತಲೆಯಲ್ಲಾಡಿಸಿದಳು

"ಅಷ್ಟು ದೊಡ್ಡ ಪಟ್ಟಣದಲ್ಲಿ ನಾನು ಎಲ್ಲಿರಬಹುದೆಂದು ಹುಡುಕಲಿ ಸುಮಿತ್ರಾ"

"ಅವರು ಅಲ್ಲಿಯೇ ಇರುವರಣ್ಣಾ – ನನ್ನನ್ನು ಕರೆದುಕೊಂಡು ಹೋಗಿ ನಾನು ಹುಡುಕುತ್ತೇನೆ"

ಸುಮಿತ್ರೆಯ ಧೈರ್ಯ ಕಂಡು ನರಸಿಂಹಯ್ಯನಿಗೆ ವಿಸ್ಮಯವಾಯಿತು.

"ನಿನ್ನೊಬ್ಬಳನ್ನೇ ಬಿಟ್ಟು ನಾನು ಹೇಗೆ ಬರಲಿ ಸುಮಿತ್ರಾ ? ನನ್ನ ಜೀವ ಶಾಂತವಾಗಿರಲು ಸಾಧ್ಯವೇ ಸ್ವಲ್ಪ ಯೋಚಿಸು"

"ಈ ಕಟ್ಟ ಮುಖ ಹಾಕಿಕೊಂಡು ಹೇಗೆ ಚಿಕ್ಕಮ್ಮ, ಅಜ್ಜಿ ಇವರನ್ನು ನೋಡಲಿ ? ನಾನು ಬರಲಾರೆ ಅಣ್ಣ"

"ಮನಬಂದಂತೆ ಮಾತಾಡಬೇಡ ಸುಮಿತ್ರ ನಿನ್ನ ಗಂಡ ಬಂದ ಮೇಲೆ ಸಂಸಾರ ಆರಂಭಿಸುವಿಯಂತೆ ಆದುವರೆಗೂ ನಾಲ್ಕು ದಿನ ತೌರು ಮನೆಯಲ್ಲಿರಲು ಯಾರದೇನು ಆಕ್ಷೇಪವಿದೆ ಬೇಗ ಹೊರಡು ಸುಮಿತ್ರಾ – ಹೊತ್ತಾಗುತ್ತದೆ"

"ಇಲ್ಲಿ ಸಾಲಗಳು ಹೇರಳವಾಗಿದೆ"

"ನಿನ್ನ ಗಂಡ ಬಂದು ತೀರಿಸುತ್ತಾರೆ. ಸುಮ್ಮನಿರು"

"ಚಿಕ್ಕಮ್ಮ ಒಪ್ಪಿರುವರೇನಣ್ಣ ?"

"ಅವಳೇ ನನ್ನನ್ನು ಕಳುಹಿಸಿಕೊಟ್ಟಳಮ್ಮಾ ಸ್ವರ್ಣನಂತೂ ತುಂಬಾ ಮರುಗಿದಳು ನಿಮ್ಮಜ್ಜಿಯು ನಿನಗಾಗಿ ಕಾಯುತ್ತಿರುವರು"

"ನನ್ನಿಂದ ಎಷ್ಟು ಜನಗಳಿಗೆ ದುಃಖ ?"

"ಕಷ್ಟ ಸುಖ ಎಲ್ಲರಿಗೂ ಬಂದೇ ಬರುತ್ತದೆ ಸುಮಿತ್ರಾ. ಅದನ್ನೇ ದೊಡ್ಡದಾಗಿ ಭಾವಿಸಿ ಕಂಗೆಡಬಾರದು ಏಳು ಸುಮಿತ್ರಾ"

"ಮನೆಯ ಬಾಡಿಗೆ ವರ್ಷದ ಬಾಕಿ ಇದೆಯಂತೆ ಅಣ್ಣ"

"ಸುಮ್ಮನೆ ನೀನು ಯಾಕಮ್ಮಾ ಕೊರಗುತ್ತೀ ? ಊರಿಗೆ ಹೋಗಿ ನಿಧಾನವಾಗಿ ಆಲೋಚಿಸೋಣ"

"ಋಣದಲ್ಲಿ ಹೇಗಣ್ಣಾ ಇರುವುದು ಅವರೇನಂದುಕೊಳ್ಳುವುದಿಲ್ಲ ?"

"ನಿನ್ನ ಗಂಡ ಮಾಡಿದ ಅನ್ಯಾಯಕ್ಕೆ ನೀನು ಹೊಣೆಯೇ? ಏಳು ಮಾಡಿದವನು ಬಂದು ತೀರಿಸುತ್ತಾನೆ"

ನರಸಿಂಹಯ್ಯ ಕುಪಿತನಾಗಿ ನುಡಿದ

ಲಕ್ಕವ್ವನಿಂದ ಸಮಾಚಾರ ತಿಳಿದು ಮಂಜುಳೆ ಬೇಗನೆ ಬಂದಳು ಸುಮಿತ್ರೆಯನ್ನು ಹೊರಡಿಸಲು ಅವಳು ಪಟ್ಟ ಪ್ರಯತ್ನ ವಿಫಲವಾಗಲಿಲ್ಲ

ಲಕ್ಕವ್ವ ಸುಮಿತ್ರೆಯನ್ನು ಸಂತೈಸಿ, ಹರಸಿದಳು

"ಶಿವಾ ಒಳ್ಳೇದು ಮಾಡ್ತಾನೆ ತಾಯಿ ಓಗಿ ಬಾ"

ಮಂಜುಳೆ ಸುಮಿತ್ರೆಯ ಹಣೆಗಿಟ್ಟು,

"ಸುಮಿತ್ರಾ ಕೊರಗಿ ಕಡ್ಡಿಯಾಗಬೇಡ ನಿನ್ನ ಸಂಸಾರ ಒಂದಲ್ಲ ಒಂದು ದಿನ ಸರಿಯಾಗುತ್ತದೆ ನಿನ್ನ ಗಂಡ ಬಂದೇಬರುತ್ತಾನೆ ಆ ಆಸೆಯಿಂದ ನೀನು ಬದುಕಲು ಯತ್ನಿಸಬೇಕು" ಎಂದು ಹೇಳಿದಳು

ಸುಮಿತ್ರೆಯ ಒಂದೆರಡು ಬಟ್ಟೆಗಳನ್ನು ಚೀಲದಲ್ಲಿ ತುರುಕಿ ಲಕ್ಕವ್ವ ನರಸಿಂಹಯ್ಯನ ಕೈಗಿತ್ತಳು ನರಸಿಂಹಯ್ಯ ಸುಮಿತ್ರೆಯೊಡನೆ ಗಾಡಿ ಹತ್ತಿದ

"ನಿನ್ನ ಗಂಡ ಬಂದ ಕೂಡಲೇ ಬರೆದು ತಿಳಿಸುತ್ತೇನೆ ಸುಮಿತ್ರಾ ಯೋಚನೆಮಾಡಬೇಡ" ಎಂದುಮಂಜುಳೆ ಮತ್ತೊಮ್ಮೆ ಆಶ್ವಾಸನೆ ಇತ್ತಳು

"ಜಿನಾ ಬಂದು ಒಂದಪ ನೋಡ್ಕೊಂಡು ಓಯ್ತೀನ್ರವ್ರಾ" ಲಕ್ಕವ್ವ ಧೈರ್ಯ ಹೇಳಿದಳು

ನರಸಿಂಹಯ್ಯ ಇಳಿದುಬಂದು ಗುಟ್ಟಾಗಿ ಮಂಜುಳೆಗೆ ಹೇಳಿದ

"ಸಾಮಾನುಗಳನ್ನು ಎಲ್ಲಿಯಾದರೂ ಇರಿಸುವುದಕ್ಕೆ ಏರ್ಪಾಡು ಮಾಡು"

ಲಕ್ಕವ್ವ ಸಂಕಟದಿಂದ, "ಅಲ್ಲಿ ಏನು ಉಳಿದೈತೆ ಬುದ್ದಿ ಅಯ್ನೋರೇ ಎಲ್ಲಾ ವಿಲೇವಾರಿ ಮಾಡಿ ಒಂಟು ಓದ್ರು ಇರೋ ಒಂದರಡು ಪಾತ್ರೆ-ಪದಾರ್ಥ ನನ್ನ ಮಸ್ಯಾಗೆ ಮಡಗಿರ್ತೀನಿ ಬೇಕಾದಾಗ ಒಯ್ಯಬಹುದು"

ನರಸಿಂಹಯ್ಯ ಸುಮ್ಮನಾದ

ಸುಮಿತ್ರೆ ಲಕ್ಕವ್ವನನ್ನು ಕರೆದು, ಐದು ರೂಪಾಯಿ ಕೊಟ್ಟಳು

"ಲಕ್ಕೀ ಇದರಲ್ಲಿ ನಿನ್ನ ಮೊಮ್ಮಗಳಿಗೆ ಲಂಗ ಹೊಲಿಸು ನಾನು ಹೇಳಿದ್ದೆ

ಲಕ್ಕವ್ವ ಕೃತಜ್ಞತೆಯಿಂದ ಸ್ವೀಕರಿಸಿದಳು

"ಬಂದ ಮೇಲೆ ನಿನಗೆ ಸೀರೆ ಕೊಡುತ್ತೇನೆ ಲಕ್ಕೀ"

"ಅಂಗೆ ಮಾಡ್ರವ್ವ"

ಗಾಡಿ ಚಲಿಸಿತು ಸುಮಿತ್ರೆ ತನ್ನ ಮನೆಯನ್ನು ಮತ್ತೆ ಮತ್ತೆ ನೋಡಿ ಕಣ್ಣಲ್ಲಿ ನೀರು ತುಂಬಿಕೊಂಡಳು

ಊರು ತಲಪುವವರೆಗೂ ನರಸಿಂಹಯ್ಯ ಮಾತೇ ಆಡಲಿಲ್ಲ

ಬಳಲಿದ ಸುಮಿತ್ರೆಗೆ ಅಡಿಯಿಡಲು ಕಾಲೇ ಬರುತ್ತಿರಲಿಲ್ಲ ಪ್ರಯಾಣದಿಂದ ಸವೆಯುತ್ತಿದ್ದ ಮಗಳನ್ನು ನೋಡಿ ನರಸಿಂಹಯ್ಯ ತನ್ನ ವೇಗವನ್ನು ನಿಧಾನಮಾಡಿದ

ಬಹಳ ಹೊತ್ತಿನ ಮೇಲೆ ಇಬ್ಬರೂ ಬಸ್ ಬಳಿ ಬಂದಿದ್ದರು ಸುಮಿತ್ರೆ ಹತ್ತಲು ಹಿಂದು ಮುಂದು ನೋಡುತ್ತಿದ್ದುದನ್ನು ಗಮನಿಸಿದ ನರಸಿಂಹಯ್ಯ "ಹತ್ತು ಸುಮಿತ್ರ" ಎಂದು ಕೈಹಿಡಿದು ಕೂರಿಸಿದ ಸುಮಿತ್ರೆ ಹಸು ಮಗು ವಿನಂತೆ ತಂದೆಯನ್ನು ಅನುಸರಿಸಿದಳು

ಮನೆ ತಲುಪಿದ ಕೂಡಲೇ ಸ್ವರ್ಣ ಹೌಹಾರಿ ಬಂದಳು ಸುಮಿತ್ರೆ ತನ್ನ ದುಃಖವನ್ನೂ ಮರೆತು ಸ್ವರ್ಣಳನ್ನು ಅಪ್ಪಿದಳು ರಂಗಮ್ಮ ತಮ್ಮ ಕಣ್ಣೊರಸಿಕೊಂಡು ಸುಮಿತ್ರೆಯನ್ನು ಸ್ವಾಗತಿಸಿದರು

"ನನಗಾಗಿ ಅಳುವಿರಾ ಅಜ್ಜೀ?"

"ಇಲ್ಲ ಸುಮಿತ್ರಾ ಬಾ ಒಳಗೆ"

ಮೂವರೂ ರಂಗಮ್ಮನನ್ನು ಹಿಂಬಾಲಿಸಿದರು ಇವರುಗಳನ್ನು ಕಂಡ ರಾಜಮ್ಮ ಅವಸರದಲ್ಲಿ ಮಗುವನ್ನೆತ್ತಿಕೊಂಡು ತನ್ನ ರೂಮಿಗೆ ಓಡಿದಳು

ಸುಮಿತ್ರೆ ದಿಗ್ಭ್ರಮೆ ಹಿಡಿದವಳಂತೆ ನಿಂತೇ ಇದ್ದಳು ತನ್ನ ಮುಂದಿನ ಬಾಳು ಸುಮಿತ್ರೆಯ ಸ್ಮೃತಿಪಟಲದ ಮೇಲೆ ಸೂಕ್ಷ್ಮವಾಗಿ ಹಾದು ಹೋಯಿತು.

---